

ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಮಹಿಳಾ ಅಧ್ಯಯನ

ಸಂಪುಟ ೫ ಸಂಚಿಕೆ ೧-೨ ಜನವರಿ-ಡಿಸೆಂಬರ್ ೨೦೦೪



# ಮಹಿಳಾ ಅಧ್ಯಯನ


ಸಂಪಾದಕರು

ಡಾ. ಎಂ. ಉಷಾ






ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

**MAHILA ADHYAYANA**
(Half Yearly) Vol. 5, 1-2 (January-Dec.2003)
Edited by
**Dr. M. USHA**
*Published by*
**Dr. H.C. Boralingaiah**
Director, Prasaranga
Kannada University, Hampi
Vidyaranya-583 276
Pages : vi + 236
First Impression : 2004
www.kavihampi.org
ಅರ್ಧವಾರ್ಷಿಕ ಪತ್ರಿಕೆ, ಸಂಪುಟ ೫, ಸಂಚಿಕೆ ೧ ಮತ್ತು ೨
(ಜನವರಿ - ಡಿಸೆಂಬರ್ ೨೦೦೩)




| | | |
|---|---|---|
| ಬಿಡಿ ಪ್ರತಿ ಬೆಲೆ | : | ರೂ. ೫೦.೦೦ |
| ವಾರ್ಷಿಕ ಚಂದಾ | : | ರೂ. ೫೦.೦೦ |
| ಐದು ವರ್ಷದ ಚಂದಾ | : | ರೂ. ೨೦೦.೦೦ |
| ಮುಖಪುಟ | : | ಕೆ.ಕೆ. ಮಕಾಳಿ |

ಪ್ರಕಾಶನ
ಡಾ.ಹಿ.ಚಿ.ಬೋರಲಿಂಗಯ್ಯ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಅಕ್ಷರ ಸಂಯೋಜನೆ
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಮುದ್ರಣ
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ

# ಸಂಪಾದಕೀಯ

ಮಹಿಳಾ ಅಧ್ಯಯನವು ಭಾರತದಲ್ಲಿ ನೆಲೆಯೂರುತ್ತಿರುವ ಹೊತ್ತಿಗೆ ಅದರ ಚರ್ಯೆಯನ್ನೇ ಬದಲಿಸುವ ಪ್ರಯತ್ನವೊಂದು ಉನ್ನತ ಶಿಕ್ಷಣಕ್ಕೆ ಕಾಯಕಲ್ಪ ನೀಡುವ ಹೆಸರಿನಲ್ಲಿ ಆರಂಭಗೊಂಡಿದೆ. ಈ ಅಧ್ಯಯನವನ್ನು ಹಿಮ್ಮೆಟ್ಟಿಸುವ ದಿಕ್ಕಿನಲ್ಲಿ ಜಾಗತಿಕ ಮಟ್ಟದಲ್ಲಿಯೇ ಜಂಡರ್ ಸ್ಟಡೀಸ್ ಹಾಗೂ ಫ್ಯಾಮಿಲಿ ಸ್ಟಡೀಸ್‌ಗಳನ್ನು ಮುಂಚೂಣಿಗೆ ತರುವ ರಾಜಕಾರಣ ನಡೆಯುತ್ತಿದೆ. ಇದರ ವಿರುದ್ಧವಾಗಿ ಅಲ್ಲಿ ಸ್ತ್ರೀವಾದಿಗಳು, ಮಹಿಳಾ ಚಳುವಳಿಗಳು ಹೋರಾಡುತ್ತಿದ್ದಾರೆ. ಆದರೆ ಭಾರತದಲ್ಲಿ ಆರಂಭದಿಂದಲೂ ಬೆನ್ನೆಲುಬಾಗಿ ನಿಂತು ಮಹಿಳಾ ಅಧ್ಯಯನವು ಸಶಕ್ತವಾಗಲು ಯು.ಜಿ.ಸಿ ಸಹಕರಿಸಿದೆ. ಅದರ ಪರಿಣಾಮವಾಗಿ ದೇಶದಾದ್ಯಂತ ಹಲವು ವಿಶ್ವವಿದ್ಯಾಲಯಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳು ಕೆಲಸ ನಿರ್ವಹಿಸುತ್ತಿವೆ. ಸಮಾಜದಲ್ಲಿನ ಲಿಂಗತಾರತಮ್ಯವನ್ನು ಹೋಗಲಾಡಿಸುವ ದಿಕ್ಕಿನಲ್ಲಿ ಈ ಕೇಂದ್ರಗಳು ಕೆಲಸ ನಿರ್ವಹಿಸಬೇಕೆಂಬ ನಿರ್ದೇಶನವು ಇದೆ.

ಆದರೀಗ ಯು.ಜಿ.ಸಿ ಯಾವುದೇ ಚರ್ಚೆ ಇಲ್ಲದೆ ಏಕಪಕ್ಷೀಯವಾಗಿ ತನ್ನಡಿಯಲ್ಲಿ ಬರುವ ಮಹಿಳಾ ಅಧ್ಯಯನ ಕೇಂದ್ರಗಳ ಹೆಸರನ್ನು ಬದಲಿಸಿ ಮಹಿಳೆ ಮತ್ತು ಕುಟುಂಬ ಅಧ್ಯಯನ ಕೇಂದ್ರ ಎಂದು ಪುನರ್ ನಾಮಕರಣ ಮಾಡಲು ಯತ್ನಿಸುತ್ತಿದೆ. ಇದು ನಿಜಕ್ಕೂ ಮಹಿಳಾ ಅಧ್ಯಯನದ ದಿಕ್ಕನ್ನು ಕದಲಿಸುವ, ಕಲುಷಿತಗೊಳಿಸುವ ಪ್ರಯತ್ನವಾಗಿದೆ. ಮಹಿಳೆಗೂ ಕುಟುಂಬಕ್ಕೂ ತಳುಕು ಹಾಕುವ ಈ ಧೋರಣೆ ಪಿತೃಪ್ರಧಾನವಾದುದು. ಲಿಂಗನಿರಪೇಕ್ಷ ನಡೆಗೆ ವಿರುದ್ಧವಾದುದು. ಮಹಿಳೆ ಇಂದು ಎಲ್ಲ ಕ್ಷೇತ್ರಗಳಲ್ಲಿ ತನ್ನನ್ನು ಗುರುತಿಸಿಕೊಂಡು ಮುಂದುವರಿಯಲೆತ್ನಿಸುತ್ತಿರುವಾಗ ಅವಳ ಸಂದರ್ಭದಲ್ಲಿ ಕುಟುಂಬವನ್ನು ಮಾತ್ರ ಪ್ರಧಾನವಾಗಿ, ಸಮಾನಾಂತರದ್ದಾಗಿ ಪರಿಭಾವಿಸುವುದು ಹೇಗೆ? ಏಕೆ? ಹಾಗೆ ನೋಡಿದರೆ ಕುಟುಂಬ ಕೇಂದ್ರಿತವಾಗಿ ಮಹಿಳೆಯನ್ನು ಪರಿಭಾವಿಸಿದ್ದೇ ಲಿಂಗ ತಾರತಮ್ಯದ ಬುನಾದಿ. ಕುಟುಂಬವೆಂಬುದೊಂದು ಅತಿಮುಖ್ಯವಾದ, ಅತ್ಯಗತ್ಯವಾದ ಸಂಸ್ಥೆ ಎನ್ನುವುದಾದರೆ ಅದು ಪುರುಷನೊಂದಿಗೂ ಸಮೀಕರಣಗೊಳ್ಳಬೇಕಲ್ಲವೆ? ಕುಟುಂಬ ಮಹಿಳೆಗೆ ಸಂಬಂಧಿಸಿದ್ದು ಮಾತ್ರ ಎನ್ನುವ ಲಿಂಗಪೂರ್ವಾಗ್ರಹವನ್ನು ಮಹಿಳಾ ಅಧ್ಯಯನದ ಮೇಲೂ ಹೇರುವ ಈ ಪ್ರಕ್ರಿಯೆ ಲಿಂಗತಾರತಮ್ಯವಿಲ್ಲದ ಸಮಾಜ ನಿರ್ಮಾಣದ ಕನಸನ್ನು ಹೇಗೆ ತಾನೆ ಸಹಿಸೀತು. ಮಹಿಳಾ ಅಧ್ಯಯನದ ಹೆಸರು ಬದಲಿಸುವುದರೊಂದಿಗೆ ಕೇಂದ್ರವು ಉತ್ಪಾದಿಸುವ ಜ್ಞಾನವು ಯು.ಜಿ.ಸಿಯ ಪರಿಶೀಲನಾ ನಂತರವೇ ಪ್ರಕಟಗೊಳ್ಳಬೇಕೆಂಬುದು

ಕೂಡ ಕೇಂದ್ರದ ಸ್ವಾಯತ್ತತೆಗೆ ಧಕ್ಕೆ ತರುವುದಾಗಿದೆ. ಉನ್ನತ ಶಿಕ್ಷಣದಲ್ಲಿನ ಪ್ರಭುತ್ವದ ಹಸ್ತಕ್ಷೇಪದಲ್ಲಿ ಮಹಿಳಾ ಅಧ್ಯಯನದ ಸರದಿ ಇದು. ಇದರ ವಿರುದ್ಧ ಪ್ರಜ್ಞಾವಂತರೆಲ್ಲ ದನಿ ಎತ್ತಬೇಕಿದೆ.

ಮಹಿಳಾ ಅಧ್ಯಯನ ಪತ್ರಿಕೆ ತಡವಾಗಿ ನಿಮ್ಮ ಕೈಸೇರುತ್ತಿದೆ. ಅದಕ್ಕಾಗಿ ಕ್ಷಮೆ ಕೋರುತ್ತೇವೆ. ವಿಳಂಬವಾದರೂ ಪರವಾಗಿಲ್ಲ ಗುಣಮಟ್ಟ ಕಾಯ್ದುಕೊಂಡಿದ್ದೇವೆಂಬ ವಿನಮ್ರ ವಿಶ್ವಾಸ ನಮ್ಮದು. ೨೦೦೩ರ ಜೂನ್ ಹಾಗೂ ಡಿಸೆಂಬರ್ ಎರಡು ಸಂಚಿಕೆಗಳನ್ನು ಒಟ್ಟುಗೂಡಿಸಿ ಈ ಸಂಚಿಕೆ ಹೊರಬಂದಿದೆ. ಹಾಗಾಗಿ ಈ ಸಂಚಿಕೆಯ ಗಾತ್ರ ಹಾಗೂ ವೈವಿಧ್ಯ ಹೆಚ್ಚಿನದಾಗಿದೆ.

ಈ ಸಂಚಿಕೆ ಸಿದ್ಧಗೊಳ್ಳುವ ಎಲ್ಲ ಹಂತದಲ್ಲಿ ಬೆಂಬಲವಾಗಿ ನಿಂತಿರುವ ನಮ್ಮ ನೆಚ್ಚಿನ ಕುಲಪತಿಗಳು ಪತ್ರಿಕೆಯ ಪ್ರಧಾನ ಸಂಪಾದಕರು ಆದ ಡಾ. ಎಚ್.ಜೆ. ಲಕ್ಕಪ್ಪಗೌಡ ಅವರಿಗೆ ಗೌರವ ಪೂರ್ವಕ ನಮನಗಳು. ಸಂಪಾದಕ ಮಂಡಳಿ ಸದಸ್ಯರ ತುಂಬು ಹೃದಯದ ನೆರವು ಸಂಚಿಕೆಯನ್ನು ರೂಪಿಸಿದೆ. ಅವರಿಗೂ ವಂದನೆಗಳು. ಪತ್ರಿಕೆಗೆ ತಮ್ಮ ಅಮೂಲ್ಯ ಲೇಖನ ಗಳನ್ನು ಒದಗಿಸಿಕೊಟ್ಟ ವಿದ್ವಾಂಸರೆಲ್ಲರಿಗೂ ವಂದನೆಗಳು.

ಡಿ.ಟಿ.ಪಿ. ಮುದ್ರಣ, ರಕ್ಷಕವಚದ ಸಿದ್ಧತೆ ಎಲ್ಲದರಲ್ಲೂ ಆಸಕ್ತಿವಹಿಸಿದ ಪ್ರಸಾರಾಂಗದ ಬಳಗಕ್ಕೆ ವಂದನೆಗಳು.

ಎಂ. ಉಷಾ

## ಪರಿವಿಡಿ

## ಮಾತುಕತೆ

# ವನಜಾ ಧ್ರುವರಾಜನ್‌ರೊಂದಿಗೆ ...

ವಿ.ಬಿ. ತಾರಕೇಶ್ವರ್

(**ಈ** ಸಂಚಿಕೆಯ ಮಾತುಕತೆಯಲ್ಲಿ ಕೆನಡಾದ ವಿನ್ನಿಪಿಗ್ ಯೂನಿವರ್ಸಿಟಿಯ ಪ್ರಾಧ್ಯಾಪಕರಾದ ವನಜ ಧ್ರುವರಾಜನ್‌ರನ್ನು ಸಂದರ್ಶನ ಮಾಡಲಾಗಿದೆ. ಮೂಲತಃ ಹಾಸನ ಜಿಲ್ಲೆಯವರಾದ ವನಜ ಮೈಸೂರು ವಿಶ್ವವಿದ್ಯಾಲಯದಲ್ಲಿ ಪದವಿ ಪಡೆದು ಗೃಹಿಣಿಯಾಗಿ ಕೆನಡಾ ಸೇರಿದವರಾದರೂ, ಆ ನಂತರ ತಮ್ಮ ಶೈಕ್ಷಣಿಕ ಆಯಾಮವನ್ನು ವಿಸ್ತರಿಸಿಕೊಂಡರು. ಅಭಿವೃದ್ಧಿ ಮತ್ತು ಸಾಮಾಜೀಕರಣ, ಫ್ಯಾಮಿಲಿ ಸೋಷಿಯಾಲಜಿ, ಲಿಂಗ ಸಂಬಂಧಗಳು, ಜನಾಂಗ ನೀತಿ ವಿರೋಧ ಇತ್ಯಾದಿ ಹಲವು ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಇವರು ಆಕ್ಷನ್ ರಿಸರ್ಚನಲ್ಲಿ ನಂಬಿಕೆ ಇಟ್ಟವರು. ಹಾಗಾಗಿ ಮಹಿಳಾ ಅಧ್ಯಯನ ಹಾಗೂ ಚಳುವಳಿ ಎರಡರಲ್ಲೂ ಸಮಾನ ಆಸಕ್ತಿ ಹೊಂದಿದವರಾಗಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. Carleton, Ottawa, Simon Fraser ಇತ್ಯಾದಿ ಹಲವು ವಿಶ್ವವಿದ್ಯಾಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿರುವ ವನಜ ವರ್ಷಕ್ಕೊಮ್ಮೆ ತಾಯ್ನಾಡಿಗೆ ಬಂದು ಕೆಲವು ತಿಂಗಳಿರುವ ಪರಿಪಾಠವನ್ನು ಇಟ್ಟುಕೊಂಡಿದ್ದಾರೆ. ದಶಕಗಳಿಂದ ಹೊರದೇಶದಲ್ಲಿ ನೆಲೆಸಿದ್ದರೂ ಭಾರತವನ್ನು ಕುರಿತ ತಮ್ಮ ಆಸಕ್ತಿ ಹಾಗೂ ಕಾಳಜಿಯನ್ನು ಕಾಪಾಡಿಕೊಂಡಿರುವ ಇವರ ಬಹುಪಾಲು ಬರಹಗಳು ಭಾರತೀಯ ಸಾಮಾಜಿಕ ಸಂದರ್ಭವನ್ನೇ ಕುರಿತದ್ದಾಗಿದೆ. ಕೆನಡಾದಲ್ಲಾದರೂ ಲಿಂಗಭೇದ ಹಾಗೂ ಜನಾಂಗಭೇದದ ವಿರುದ್ಧದ ಚಟುವಟಿಕೆಗಳೇ ಇವರ ಪ್ರಧಾನ ಆಸಕ್ತಿ. ಪ್ರಸ್ತುತ ಸಂದರ್ಶನದಲ್ಲಿ ಕೂಡ ಆ ಎರಡು ಎಳೆಗಳನ್ನು ಜೊತೆ ಜೊತೆಯಾಗಿಯೇ ಪರಿಭಾವಿಸುವ ಪ್ರಯತ್ನವನ್ನು ಅವರು ಮಾಡುತ್ತಾರೆ. ಅವರ ಪ್ರಕಟಿತ ವಿದ್ವತ್ ಕೃತಿಗಳು - ವುಮೆನ್ ಆ್ಯಂಡ್ ವೆಲ್‌ಬೀಯಿಂಗ್ (ಸಂಪಾದಿತ). ಹಿಂದೂ ವುಮೆನ್ ಆ್ಯಂಡ್ ದಿ ಪವರ್ ಆಫ್ ಐಡಿಯಾಲಜಿ, ಜಂಡರ್, ರೇಸ್ ಆ್ಯಂಡ್ ನೇಷನ್. ಪ್ರಸ್ತುತದಲ್ಲಿ ಜನಪ್ರಿಯ ಮಹಿಳಾ ಪತ್ರಿಕೆಗಳು ಹಾಗೂ ಜಾಗತೀಕರಣದ ಸಂದರ್ಭದಲ್ಲಿ ಮಹಿಳಾ ಮೀಸಲಾತಿ ಎಂಬ ಕ್ಷೇತ್ರಗಳಲ್ಲಿ ಅಧ್ಯಯನ ನಿರತರಾಗಿದ್ದಾರೆ.)

**ತಾರಕೇಶ್ವರ್ :** ನಿಮ್ಮ ಪೇಪರ್ ಒಂದರಲ್ಲಿ ನೀವು ಜನಾಂಗ, ರಾಷ್ಟ್ರಗಳ ಜೊತೆಗೆ ಮಹಿಳೆಯನ್ನು ನೋಡುತ್ತಿದ್ದೀರಿ, ಅದರಿಂದಲೇ ಇಂದಿನ ಮಾತುಕತೆ ಆರಂಭಿಸಬಹುದೆಂದು ನನಗನ್ನಿಸುತ್ತದೆ.

**ವನಜಾ :** ಆ ಪೇಪರ್‌ನಲ್ಲಿ ನಾನು argue ಮಾಡೋದು ಏನು ಅಂದ್ರೆ, ಎರಡನೆ ತಲೆಮಾರಿನ ಸ್ತ್ರೀವಾದಿಗಳು ಮಹಿಳೆಯರನ್ನ ಮೂಲಭೂತ ತತ್ವವನ್ನಾಗಿ ಸಂಘಟಿಸುತ್ತಾ ಮಹಿಳೆಯರನ್ನ ಒಂದು ಏಕೀಕೃತ ಘಟಕವಾಗಿ ರೂಪಿಸುತ್ತಾರೆ. ಆದರೆ ಮಹಿಳೆಯನ್ನು ಒಂದು ಏಕೀಕೃತ ಘಟಕವಾಗಿ ಪರಿಭಾವಿಸಲು ಸಾಧ್ಯವಿಲ್ಲ. ಅವರು ಲಿಂಗ, ರಾಷ್ಟ್ರ, ಜನಾಂಗ ಮತ್ತಿತರ ಸಂಗತಿಗಳಲ್ಲಿ ಹರಡಿಕೊಂಡಿದ್ದಾರೆ. ಆದ್ದರಿಂದ ಹೆಂಗಸರ ಸ್ಥಾನಮಾನಗಳನ್ನು, ಅನುಭವ ಗಳನ್ನ ಅರ್ಥಮಾಡಿಕೊಳ್ಳುವುದಕ್ಕೆ ಅವರ ಜಾತಿ, ಮತ ..... ಅದೆಲ್ಲ ತಿಳ್ಕೋಬೇಕು. ಅವರ ಅನುಭವಗಳು ಕೇವಲ ಲಿಂಗವನ್ನು ಮಾತ್ರ ಆಧರಿಸಿ ಭಿನ್ನವಾಗಿರುವುದಿಲ್ಲ, ಬದಲಿಗೆ ಜಾತಿ ಮತ್ತಿತರ ಅಂಶಗಳನ್ನು ಆಧರಿಸಿ ಭಿನ್ನವಾಗುತ್ತೆ. ನಾನು ಉದಾಹರಣೆ ಕೊಡುವುದಾದರೆ, ಬ್ರಾಹ್ಮಣ ಹೆಂಗಸಾಗಿರುವುದು ದಲಿತ ಹೆಂಗಸಾಗಿರುವುದಕ್ಕಿಂತ ಭಿನ್ನವಾಗಿರುತ್ತೆ. ...ಆದ್ರೆ ಅನುಭವಗಳಲ್ಲಿ ಕೆಲವು ಸಮಾನಾಂಶಗಳೂ ಇರಬಹುದು. ಯಾಕೆಂದರೆ ಎಲ್ಲ ಕಡೆಯೂ 'ಸರ್ವವ್ಯಾಪಿ'ಯಾದ ಪುರುಷ ಪ್ರಧಾನತೆ ಇದೆ. ಸಾಮಾನ್ಯವಾಗಿ ಎಲ್ಲ ಮಹಿಳೆಯರು ಪುರುಷರ ಯಜಮಾನಿಕೆಗೆ ಸಿಲುಕಿರುತ್ತಾರೆ. .....ಕೆಲವು ಸಮಾನಾಂಶಗಳಿದ್ದರೂ ದಲಿತ ಮಹಿಳೆ ಮೇಲ್ವರ್ಗದಿಂದ ಮತ ಜಾತಿಯಿಂದ ಶೋಷಣೆಗೆ ಒಳಗಾಗುತ್ತಾಳೆ, ತನ್ನ ಬಡತನ ಹಾಗೂ ಜಾತಿ ಕಾರಣದಿಂದಾಗಿ. ಆದ್ದರಿಂದ ಹಿಂದೆ ಮಾಡಿದಂತೆ ಮಧ್ಯಮವರ್ಗದ ಮಹಿಳೆಯ ಅನುಭವಗಳನ್ನೇ ದಲಿತ ಮಹಿಳೆಯ ಅನುಭವಗಳು ಎಂದು ಭಾವಿಸಲು ಸಾಧ್ಯವಿಲ್ಲ. ಕೇವಲ ಪುರುಷರಷ್ಟೇ ಮಹಿಳೆಯರನ್ನು ಶೋಷಣೆ ಮಾಡುತ್ತಾರೆ ಎನ್ನುವುದೂ ಸರಿಯಲ್ಲ. ಮಹಿಳೆ ಯರೂ ಶೋಷಕರಾಗಲು ಸಾಧ್ಯ. ಮಹಿಳೆಯರು ಮಹಿಳೆಯರೂ ಅನ್ನೋ ಕಾರಣಕ್ಕಾಗಿ ಶೋಷಣೆಗೆ ಒಳಗಾದರೂ ತಾವು ಮೇಲ್ವರ್ಗದವರು ಮೇಲ್‌ಜಾತಿಯವರು ಎನ್ನುವ ಕಾರಣಕ್ಕಾಗಿ ಸಾಕಷ್ಟು ಸವಲತ್ತುಗಳನ್ನು, ಅನುಭವಿಸುತ್ತಾರೆ. ಮೇಲ್ವರ್ಗದ ಮಹಿಳೆಯು ಬಡ ಮಹಿಳೆಯ ಮೇಲೆ ಯಜಮಾನಿಕೆ ಸಾಧಿಸಬಹುದು. ಮೇಲ್‌ಜಾತಿ ಮಹಿಳೆ ಕೆಳಜಾತಿ ಮಹಿಳೆಯನ್ನು ಶೋಷಿಸಬಹುದು. ಇದರ ಬಗ್ಗೆ ಈಗಾಗಲೇ ಸಾಕಷ್ಟು ಅಧ್ಯಯನ ನಡೆದಿದೆ. ಮಹಿಳೆಯರು ಗೊತ್ತಿದ್ದೋ, ಗೊತ್ತಿಲ್ಲದೆಯೋ ಇತರ ಮಹಿಳೆಯರನ್ನು ಯಾವ ರೀತಿ ಶೋಷಣೆ ಮಾಡುತ್ತಾರೆ ಎಂಬುದನ್ನು ಅರಿಯಬೇಕಾಗುತ್ತದೆ. ಉದಾಹರಣೆಗೆ ನನ್ನನ್ನೇ ತಗೊಂಡ್ರೆ, ನಾನೊಬ್ಬ ಮೇಲ್‌ಜಾತಿಯ ಮೇಲ್ವರ್ಗದ ಮಹಿಳೆ. ನಮ್ಮದು ಸಾಂಪ್ರದಾಯಿಕ ಹಿಂದೂ ಕುಟುಂಬವಾಗಿದ್ದರಿಂದ ನಾನು ನನ್ನ ಲಿಂಗದ ಕಾರಣಕ್ಕಾಗಿ ಯಾತನೆಗೊಳ ಗಾಗಿರಬಹುದು. ಕೆನಡಾದಲ್ಲಿ ನಾನು ನನ್ನ ಜನಾಂಗದ ಕಾರಣಕ್ಕೂ ತೊಂದರೆಗೆ ಒಳಗಾಗಿರ ಬಹುದು. ಅದೇನಿದ್ದರೂ ನಾನು ನನ್ನ ವರ್ಗದ ಸವಲತ್ತುಗಳನ್ನು enjoy ಮಾಡಿದ್ದೇನೆ. ಒಂದು ದಿನವೂ ಬಡತನದ ಹಸಿವಿನ ಸಮಸ್ಯೆ ಎದುರಿಸಿಲ್ಲ. ನಾನು ಬ್ರಾಹ್ಮಣ ಮಹಿಳೆಯಾದ್ದರಿಂದ ಸಮಾಜದಲ್ಲಿ ನನ್ನ ಸ್ಥಾನ ಉನ್ನತ ಮಟ್ಟದಾಗಿತ್ತು. ಶಾಲೆಗೆ ಹೋಗಲೂ ಅವಕಾಶ ದೊರಕಿತು. ನಮ್ಮ ಹಳ್ಳಿಯಲ್ಲಿ ಇತರ ಜಾತಿಯ ಹುಡುಗಿಯರು ಹೊಲಗಳಲ್ಲಿ ದುಡಿಯಲು ಹೋಗುತ್ತಿದ್ದರು. ನಮ್ಮ ಅಪ್ಪ ಅಮ್ಮ ಮಾತ್ರ ನನ್ನನ್ನು ಶಾಲೆಗೆ ಕಳುಹಿಸಿದರು.

ನಾನು ನನ್ನ ವರ್ಗ ಜಾತಿಯ ಸವಲತ್ತುಗಳನ್ನು ಅನುಭವಿಸಿದ್ದೇನೆ. ನನಗೆ ಅರಿವಿಲ್ಲದಂತೆಯೇ ಇತರರನ್ನು ಶೋಷಣೆಗೆ ಒಳಪಡಿಸುವುದು. ಆ ಹುಡುಗಿಯರು ನಮ್ಮ ಮನೆಗೆ ಪಾತ್ರೆ ತೊಳೆಯಲು, ಬಟ್ಟೆ ಒಗೆಯಲು ಬರುತ್ತಿದ್ದರು. ಆದ್ರೆ ನಾನು ಈ ಕೆಲಸಗಳಲ್ಲಿ ಯಾವುದನ್ನು ಮಾಡ್ತಿರಲಿಲ್ಲ.ನಾನು ನನ್ನ ಜಾತಿ ವರ್ಗದ ಕಾರಣದಿಂದ ಅವರನ್ನ ಶೋಷಿಸಿರುವ ಸಾಧ್ಯತೆ ಇದೆ. ಹಾಗೇ ನಾವು ಅಭಿವೃದ್ಧಿ ಹೊಂದಿದ ರಾಷ್ಟ್ರದಲ್ಲಿದ್ದೀವೋ, ಅಭಿವೃದ್ಧಿಶೀಲ ರಾಷ್ಟ್ರ ದಲ್ಲಿದ್ದೀವೋ ಎನ್ನುವದು ಮುಖ್ಯ ಆಗುತ್ತೆ. ವಸಾಹತೀಕರಣ ಚರಿತ್ರೆಯಿಂದಾಗಿ ಅಭಿವೃದ್ಧಿ ಶೀಲ ರಾಷ್ಟ್ರಗಳ ಮಹಿಳೆಯರು ಯಾತನೆಗೊಳಗಾಗುತ್ತಾರೆ. ಅಭಿವೃದ್ಧಿ ಹೊಂದಿದ ರಾಷ್ಟ್ರ ಗಳ ಮಹಿಳೆಯರು ತಮಗರಿವಿಲ್ಲದೇ ಶೋಷಕರೂ ಆಗಿರುತ್ತಾರೆ. ಆದ್ದರಿಂದಲೇ ಮಹಿಳೆಯರು ಶೋಷಕರೂ ಶೋಷಿತರೂ ಆಗಿರುವುದನ್ನು ಗುರುತಿಸಬೇಕು. ಈ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕಾಗುತ್ತೆ. ಆಗ ಮಾತ್ರ ಮಹಿಳೆಯರು ಒಂದಾಗಲು ಸಾಧ್ಯ. ಆದ್ದರಿಂದ ಈ ಅರಿವನ್ನು ಹೆಚ್ಚಾಗಿಸಬೇಕು. ಈ ಅರಿವು ಹೆಚ್ಚುವುದರಿಂದ ನಾವೂ ಯಾವ ರೀತಿ ಬೇರೆಯವರ ಶೋಷಣೆ ಮಾಡುತ್ತಿದ್ದೇವೆ ಎಂದು ತಿಳಿದು ಅದನ್ನ ಬದಲಿಸಿ ಸಾಮಾಜಿಕ ಸಮಾನತೆ ತರಲು ಪ್ರಯತ್ನಿಸಬಹುದು. ಆಗ ಮಾತ್ರ ಮಹಿಳೆಯರು ಒಗ್ಗೂಡಲು ಸಾಧ್ಯ.

**ತಾರಕೇಶ್ವರ್ :** ಈಗ ಲೋಕಸಭಾ ಚುನಾವಣೆಯಲ್ಲಿ ಮಹಿಳಾ ಮೀಸಲಾತಿ ಬಗ್ಗೆ ಚರ್ಚೆ ನಡೆದಿದೆ. ಇದರಲ್ಲಿ ಜಾತಿ ಆಧಾರಿತ ಒಳ ಮೀಸಲಾತಿ ನೀಡಬೇಕು ಅನ್ನೋ ಬೇಡಿಕೆ ಇದೆ. ಹಾಗೆ ಅದಕ್ಕೆ ವಿರೋಧವೂ ವ್ಯಕ್ತವಾಗುತ್ತಿದೆ. ಸೈದ್ಧಾಂತಿಕವಾಗಿ ಭಿನ್ನತೆಯನ್ನು ಒಪ್ಪುವ ನೀವು ಈ ಸಮಸ್ಯೆ ಕುರಿತು ಏನು ಹೇಳ್ತೀರಿ?

**ವನಜಾ :** ಆ ವಾದವನ್ನು ಒಪ್ಪುತ್ತೇವೆ. ....ಆದರೆ ಈ ಅಂಶವನ್ನು ಗಮನಿಸಬೇಕು. ಹಿಂದೆ OBCಗಳಿಗೆ SC, ST ಗಳಿಗೆ ಮೀಸಲಾತಿ ಕೊಟ್ಟಾಗ ಮಹಿಳೆ ಬಗ್ಗೆ ಯಾಕೆ ಯೋಚನೆ ಮಾಡಲಿಲ್ಲ. ಅಲ್ಲದೆ ಅದರಲ್ಲಿನ ಬಹುಪಾಲು ಲಾಭ ಪುರುಷರಿಗೆ ಹೆಚ್ಚು ಸಿಕ್ಕಿತು. ಈ ಪುರುಷ ರಾಜಕಾರಣಿಗಳು..... ಇವತ್ತು ಯಾರು ಮಹಿಳಾ ಮೀಸಲಾತಿ ಒಳಗೆ ಒಳಮೀಸಲಾತಿ ಕೇಳ್ತಾ ಇದ್ದರೋ ಅವರು ಮುಂದೆ ಬಂದಿರುವುದೇ ಅವರ ಸಹೋದರಿಯರೊಂದಿಗೆ ಮೀಸಲಾತಿಯನ್ನು ಸರಿಯಾಗಿ ಹಂಚಿಕೊಳ್ಳದೇ ಇರೋದರಿಂದ, ಆಗಲೇ SC, ST, OBC ಪುರುಷರು ತಮ್ಮ ಮಹಿಳೆಯರಿಗೆ ಸಮಾನ ಅವಕಾಶ ನೀಡಿದ್ದ, ಈ ಸಮಸ್ಯೆಯೇ ಬರುತ್ತಿರಲಿಲ್ಲ. SC, ST ಮಹಿಳೆಯರೂ ಅಭಿವೃದ್ಧಿ ಹೊಂದಿರುತ್ತಿದ್ದರು. ಆದರೆ ಅವರ ಬಗ್ಗೆ ಯಾವುದೇ ಚರ್ಚೆ ಬಹಿರಂಗವಾಗಿ ನಡೀತಿಲ್ಲ.

**ತಾರಕೇಶ್ವರ್ :** ನೀವೊಂದು ಕಡೆ ಜಾಗತೀಕರಣಕ್ಕೆ ಪರ್ಯಾಯವಾಗಿ ಮೀಸಲಾತಿಯನ್ನು ಮುಂದಿಡುತ್ತೀರಿ. ಅದು ನಿಜಕ್ಕೂ ಜಾಗತೀಕರಣಕ್ಕೆ ಪರ್ಯಾಯವಾಗಲು ಸಾಧ್ಯವೆ ?

**ವನಜಾ :** ಹೌದು ನಾನು ಮಾಡಿದ್ದೇನೆ. ಯಾಕೆ ಮಹಿಳಾ ಮೀಸಲಾತಿ ಬೇಕು, ಅಂತ ವಾದ ಮಾಡ್ತೀವಿ ಅಂದ್ರೆ ಮಹಿಳೆಯರಿಗೆ ವಿಶೇಷ ಅವಕಾಶ ಈ ಸಮಯದಲ್ಲಿ ನೀಡುವ ಅಗತ್ಯವಿದೆ. ಯಾಕೆಂದರೆ ಪಾರ್ಟಿಗಳು ಟಿಕೇಟಗಳನ್ನು ಹಂಚುವಾಗ ಮಹಿಳೆಯರಿಗೆ ನೀಡುವುದಿಲ್ಲ.

ಕೆಲವರು ಹೇಳಬಹುದು. ಮಹಿಳೆಯರೇ ಮುಂದೆ ಬಂದು ನಿಲ್ಲಬಹುದಲ್ಲ ಅಂತ ಆದ್ರೆ ಹಾಗೆ ಆಗಲ್ಲ. ಮಹಿಳೆಯರಿಗೆ ತಾವೇ ಸ್ವತಃ ಚುನಾವಣೆಯಲ್ಲಿ ನಿಲ್ಲಲು ಹಣಕಾಸಿನ ಸೌಲಭ್ಯವಿರುವುದಿಲ್ಲ. ಅಷ್ಟೇ ಅಲ್ಲದೆ ಆ ರೀತಿ ಅವರು ಮುಂದೆ ಬಂದರೆ ಸಮುದಾಯದಿಂದ ಕುಟುಂಬದಿಂದ ವಿರೋಧವನ್ನೂ ಎದುರಿಸಬೇಕಾಗುತ್ತೆ. ಆದ್ದರಿಂದ ಅವರಿಗೆ ಎಕ್ಸ್ಟ್ರಾ ಸಪೋರ್ಟ್ ಬೇಕು.

**ತಾರಕೇಶ್ವರ್ :** ಪೇಟ್ರಿಯಾರ್ಕಿಯಿಂದ ಬಿಡಿಸಿಕೊಳ್ಳೋಕೆ ಮೀಸಲಾತಿಬೇಕು. ಹಾಗೆ ಜಾಗತೀಕರಣದಿಂದ ಬಿಡಿಸಿಕೊಳ್ಳೋಕೆ ಮೀಸಲಾತಿಬೇಕು ಅನ್ನೋ ಎರಡು ವಿಚಾರಗಳನ್ನು ಹೇಗೆ ಸೇರಿಸುತ್ತೀರಿ?

**ವನಜಾ :** ಈಗಾಗಲೇ ಹಳೆಯ ಸಾಮಾಜಿಕ ಸಂಸ್ಥೆಗಳು, ಜಾತಿ, ಪುರುಷ ಪ್ರಧಾನತೆ ಎಲ್ಲವೂ ಇವೆ. ಇವುಗಳ ಜೊತೆಗೆ ಹೊಸ ಸಂಸ್ಥೆಗಳು, ಜಾಗತೀಕರಣದ ಪರಿಣಾಮವಾಗಿ ಬರ್ತಾ ಇದೆ. ಹೀಗಾಗಿ ನವ ಉದಾರಿ ಜಾಗತೀಕರಣ, ಹಳೆಯ ಸಂಸ್ಥೆಗಳು ಜೊತೆ ಸೇರಿ ಮಹಿಳೆಯನ್ನು ಮತ್ತಷ್ಟು ಶೋಷಣೆಗೆ ಒಳಪಡಿಸುತ್ತವೆ. ಲಾಭಕೋರತನದಿಂದಾಗಿ ಮುಕ್ತ ವ್ಯಾಪಾರದ ಹೆಸರಿನಲ್ಲಿ ಶೋಷಣೆಗೆ ಒಳಗಾಗುವವಳು ಮಹಿಳೆಯೇ. ಇದನ್ನು ಅರ್ಥಮಾಡಿಕೊಂಡು ಅದನ್ನು ಎದುರಿಸಲು ಸೂಕ್ತವಾದ ಸಹಾಯ ಹಸ್ತವನ್ನು ಮಹಿಳೆಯರಿಗೆ ನೀಡಬೇಕಾಗುತ್ತದೆ. ಈ ಕಾರಣಕ್ಕಾಗಿ ಕೂಡ ಮಹಿಳಾ ಮೀಸಲಾತಿ ಬೇಕಾಗುತ್ತೆ.

**ತಾರಕೇಶ್ವರ್ :** ಈ ಜಾಗತೀಕರಣದ ಪರಿಣಾಮವಾಗಿ ಉಂಟಾಗಿರುವ ರಾಷ್ಟ್ರಗಳ ಗಡಿಗಳನ್ನು ಮೀರಿದ ಚಲನೆಯು ನಮ್ಮ ದೇಶದ ಮೇಲ್‌ಜಾತಿಯ ಮಹಿಳೆಯರಿಗೆ ಸಾಕಷ್ಟು ಅವಕಾಶ ಗಳನ್ನು ಅಮೆರಿಕಾದಲ್ಲಿ ಕಲ್ಪಿಸಿದೆ. ನಮ್ಮಲ್ಲಿ ಯಾರನ್ನು The Feminist ಅಂತ ಅನ್ನೋತೀವಿ ಅವರು ಹೀಗೆ ಅಲ್ಲೇ ಓದಿ ಸೆಟಲ್ ಆಗಿರುವವರು. ಇದರ ಬಗ್ಗೆ ನೀವೇನಂತೀರ?

**ವನಜಾ :** ಅದೊಂದು ಕುತೂಹಲಕಾರಿ ಸಂಗತಿನೇ. ನಾನು ಹಿಂದೆ ಹೇಳಿದಂತೆ ಮಹಿಳೆಯನ್ನು ಏಕೀಕೃತ ಘಟಕವಾಗಿ ನೋಡಲು ಸಾಧ್ಯವಿಲ್ಲ. ಜಾಗತೀಕರಣದಿಂದಾಗಿ ಕೆಲವು ಮಹಿಳೆಯರಿಗೆ ಅನುಕೂಲ ಆಗಿದೆ. ಆದರೆ ಬಹಳಷ್ಟು ಮಹಿಳೆಯರಿಗೆ ಜಾಗತೀಕರಣ ಯಾವುದೇ ಲಾಭ ತಂದಿಲ್ಲ. ಕೇವಲ ಬೆರಳೆಣಿಕೆಯ ಮಹಿಳೆಯರು ಲಾಭ ಪಡೆದಿದ್ದಾರೆ. ಈ ಸ್ತ್ರೀವಾದಿಗಳು ಇದರ ಬಗ್ಗೆ ಅರಿವಿಟ್ಟುಕೊಂಡು ಈ ಅಸಮಾನತೆ ಹೋಗಲಾಡಿಸುವುದು ಹೇಗೆ ಅಂತ ಯೋಚಿಸಬೇಕು. ಇದೊಂದು ಬಹಳ ಸಂಕೀರ್ಣವಾದ ಸಮಸ್ಯೆ.

**ತಾರಕೇಶ್ವರ್ :** ಹಾಗಿದ್ದರೆ ಜಾಗತೀಕರಣವನ್ನು ಎದುರಿಸಲು ಕೇವಲ ಸ್ತ್ರೀವಾದದಿಂದ ಸಾಧ್ಯವೇ? ಅಥವಾ ಸ್ತ್ರೀವಾದ ಇತರ ಚಳುವಳಿಯೊಂದಿಗೆ ಏರ್ಪಡಿಸಿಕೊಳ್ಳಬೇಕಾದ ಸಂಬಂಧವೇನು?

**ವನಜಾ :** ನಾನು ಅಲಯನ್ಸಗಳನ್ನು ಒಪ್ಪುತ್ತೇನೆ. ಆದ್ರೆ ಮಹಿಳೆ ಮುಂಚೂಣಿಯಲ್ಲಿರಬೇಕು. ಅವರು ಎಲ್ಲ ಸಮಾನ ಮನಸ್ಕರೊಡನೆ ಸೇರಿ ಕೆಲಸ ಮಾಡಬೇಕು. ಉದಾ : ರೈತರ ಚಳುವಳಿ ರೈತರಲ್ಲೂ ಮಹಿಳೆಯರಿದ್ದಾರೆ ನೋಡಿ ಪರಿಸರ ಚಳುವಳಿ ಅಂದ ತಕ್ಷಣ ಪುರುಷನನ್ನೇ

ಪರಿಭಾವಿಸುತ್ತೀವಿ. ಆದ್ರೆ ಅಲ್ಲಿ ಮಹಿಳೆಯರಿರುತ್ತಾರೆ. ಶಾಂತಿ ಚಳುವಳಿ... ಆಮೇಲೆ ನಿಶಸ್ತ್ರೀಕರಣ ಚಳುವಳಿ .....ಈ ಎಲ್ಲ ಚಳುವಳಿಗಳಲ್ಲಿ ಸಮಾನಮನಸ್ಕ ವಾದಗಳಿವೆ. ಸಮಾನ ಮನಸ್ಕರಿದ್ದಾರೆ. ನಾವೆಲ್ಲ ಒಂದು ಕಾಮನಗೋಲ್‌ಗೆ ಕೆಲಸ ಮಾಡಬೇಕಾಗುತ್ತೆ. ನಾನಾಗಲೇ ಹೇಳಿದಂತೆ ಶೋಷಕರಲ್ಲಿ ಮಹಿಳೆಯರೇ ಹೆಚ್ಚಿರುವುದರಿಂದ ಅವರೇ ನಾಯಕತ್ವವಹಿಸಬೇಕು.

**ತಾರಕೇಶ್ವರ್ :** ಭಾರತದ ಸಂದರ್ಭದಲ್ಲಿ ಫೆಮಿನಿಸಂಗೆ ಯಾರು ಪಾಸಿಬಲ್ ಅಲ್ವೆಯನ್ಸ್?

**ವನಜಾ :** ಸ್ತ್ರೀಪರವಾದ ಕೆಲವರು ಪುರುಷರಿದ್ದಾರೆ. ಅವರು ತಾತ್ವಿಕವಾಗಿ ಸ್ತ್ರೀಪರವಾದ ಧೋರಣೆವುಳ್ಳವರಾಗಿದ್ದಾರೆ. ಆದರೆ ನಾನು ನೋಡಿರೋ ಪ್ರಕಾರ, ನನ್ನ ಗ್ರಹಿಕೆಯಲ್ಲಿ...ಅದು ಮಿತಿಗೊಳಪಟ್ಟಿದ್ದೂ ಆಗಿರಬಹುದು. ಅವರಲ್ಲಿ ತುಂಬಾ ಜನ ಸೂಕ್ಷ್ಮ ಸಂದರ್ಭಗಳಲ್ಲಿ ಅದನ್ನು ಅನುಸರಿಸುವುದಿಲ್ಲ. ಇನ್ನೂ ಕೆಲವರಿರುತ್ತಾರೆ. ಅವರು ನಿಯಂತ್ರಿತ ಸಬಲೀಕರಣ (Controled Empowerment) ಅಂದರೆ ಮಹಿಳೆಯರು ಎಷ್ಟರಮಟ್ಟಿಗೆ ಮುಂದುವರಿಯ ಬೇಕು ಅನ್ನೋದನ್ನ ಇವರು ನಿರ್ಧರಿಸುತ್ತಿರುತ್ತಾರೆ. ಎಲ್ಲೋ ಒಂದು ಗೆರೆ ಎಳೆಯುವುದಕ್ಕೆ ಅವರು ಪ್ರಯತ್ನ ಪಡ್ತಾ ಇರ್ತಾರೆ. ನನಗನ್ನಿಸುತ್ತೆ ಕೆಲವು ಸರ್ಕಲ್‌ಗಳಲ್ಲಿ ಈ ರೀತಿಯ ಮನೋಭಾವ ಇದೆ ಅನ್ಸುತ್ತೆ. ಇನ್ನೊಂದು ಅಂಶ.... ಇದು ವಿವಾದಕ್ಕೆ ಎಡೆ ಮಾಡಿಕೊಡ ಬಹುದು. ಆದರೆ ನಾನು ತಿಳಿದ ಮಟ್ಟಿಗೆ ಸತ್ಯ ಇದು. ಮಹಿಳೆಯರನ್ನು ಯಾವಾಗಲೂ ಪುರುಷರ ಬೆಂಬಲಿಗರು ಎನ್ನುವಂತೆ ಭಾವಿಸಲಾಗಿದೆ. ಮಹಿಳೆಯರು ಮುಂದಕ್ಕೆ ಬರಬೇಕು. ಅವರು ಎಲ್ಲವನ್ನೂ ಬೆಂಬಲಿಸಬೇಕು. ಆದ್ರೆ ಸೆಂಟ್ರಲ್ ಸ್ಟೇಜಿಗೆ ಬರಬಾರದು. ಲೀಡರ್‌ಶಿಪ್ ತಗೋಬಾರದು. ಆ ರೀತಿ ಯಾರಾದರೂ ಮಹಿಳೆಯರು ಬಂದ್ರೆ ಅವರಿಗೆ ಹಲವಾರು ವಿಶೇಷಣಗಳನ್ನು ಹಚ್ಚುವ ಮೂಲಕ ಮುಖಕ್ಕೆ ಮಸಿ ಬಳಿಯುವ ಪ್ರಯತ್ನ ನಡೆಯುತ್ತದೆ. ಆ ಮೂಲಕ ಅವರನ್ನು ಮತ್ತೆ ತಮ್ಮ ದಾರಿಗೆ ತಂದುಕೊಳ್ಳಲು ಪ್ರಯತ್ನಿಸುತ್ತಾರೆ. ಇದರಿಂದಾಗಿ ಮಹಿಳೆಯರು ಅವರಿಗೆ ಸ್ಪಷ್ಟ ಅಭಿಪ್ರಾಯಗಳಿದ್ದರೂ ಅನಿಸಿಕೊಳ್ಳುತ್ತಿದ್ದರೂ, ಮುಂದುವರಿಯುವ ಅವಕಾಶವಿದ್ದರೂ ಇತರ ಭಯದಿಂದಾಗಿ ನಿರಾಕರಿಸುತ್ತಾರೆ. ತಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸುವುದಿಲ್ಲ. ಈ ರೀತಿ ಮಹಿಳೆಯರನ್ನು ಬೆಂಬಲಿಗರು ಎಂದು ಮಾತ್ರ ನೋಡುವುದರಿಂದ ಅವರನ್ನು ಕ್ರಿಯಾಶೀಲರು ಅಂತ ಭಾವಿಸದಿರುವುದರಿಂದ ಮಹಿಳೆಯರನ್ನು ಹಿಂದಕ್ಕೆ ಹಿಡಿದಿಡಲಾಗುತ್ತದೆ. ಇದೆಲ್ಲ ಅಪ್ರಜ್ಞಾಪೂರ್ವಕವಾಗಿಯೇ ಆಗ್ತಾ ಇರುತ್ತೆ.... ಪುರುಷರು ಸಾಮಾನ್ಯವಾಗಿ ಮಹಿಳೆಯರ ಪರವಾಗಿಯೇ ಇರ್ತಾರೆ. ಆದ್ರೆ ಅವರು ಬೇರೆ ಮುಂದುವರಿದ ಮಹಿಳೆಯರ ನಡವಳಿಕೆಯನ್ನು ಕುರಿತು ಮಾತನಾಡುವಾಗ, ಹಾಸ್ಯ ಮಾಡಿದಾಗ ಅವರ ಧ್ವನಿಯಲ್ಲಿ ಆ ನಡವಳಿಕೆ ಕುರಿತ ಅಸಮಾಧಾನವಿರುವುದನ್ನು ಕಾಣಬಹುದು. ಕೆಲವು ಸಾರಿ ಇದು ಮಹಿಳೆಯರಿಂದಲೂ ಆಗಬಹುದು. ಅದು ಇನ್ನೊಂದು ಹಂತ. ಇದರ ಒಟ್ಟಾರ್ಥ ಅಂದ್ರೆ ವ್ಯವಸ್ಥೆಯಲ್ಲಿ ಬದಲಾವಣೆ ತರದೇ ಇರುವುದು..... ಇರುವುದನ್ನೇ ಮುಂದುವರಿಸಲು ಯತ್ನಿಸುವುದು, ಇರುವುದನ್ನೇ ಮ್ಯಾನುಪುಲೇಟ್ ಮಾಡುವ ಮೂಲಕ ಸ್ವಲ್ಪಮಟ್ಟಿನ ನ್ಯಾಯ ಒದಗಿಸುವುದಕ್ಕೆ ಪ್ರಯತ್ನಿಸುವುದು.....ಇದು ಇಲ್ಲಿ ಮಾತ್ರ

ಅಲ್ಲ...ಪ್ರಪಂಚದಲ್ಲಿ ಎಲ್ಲ ಕಡೆ .... ಈ ಪುರುಷ ಪ್ರಧಾನ ವ್ಯವಸ್ಥೆ ಎಷ್ಟು ದೃಢವಾದುದು ಮತ್ತು ಪುರುಷರು ಎಷ್ಟು ಚಾಣಾಕ್ಷರು ಅಂದ್ರೆ ಹೊಸ ಹೊಸ ತಂತ್ರಗಳನ್ನು ಹುಡುಕ್ತಾನೆ ಇರ್ತಾನೆ....ನಿಯಂತ್ರಿಸುವುದಕ್ಕಾಗಿ. ಅವರು ಮೇಲ್‌ನೋಟಕ್ಕೆ ಡೆಮಾಕ್ರಟಿಕ್ ಆಗಿ ಕಾಣ್ತಾರೆ..... ಆದರೆ ಅಲ್ಲ. ಇದರಿಂದಾಗಿ ಹೋರಾಟ ಬಹಳ ಕಷ್ಟ ಆಗುತ್ತೆ ಮತ್ತು ಸ್ವತಃ ಮಹಿಳೆಯರೇ ಪುರುಷರ ನಗೆಚಾಟಿಕೆಗೆ ಈಡಾಗಬಾರದೆಂದು ಪುರುಷರ ಅಪೇಕ್ಷೆಗೆ ತಕ್ಕಂತೆ ತಮ್ಮನ್ನು ತಾವು ರೂಪಿಸಿಕೊಳ್ಳುತ್ತಾರೆ. ಆದ್ದರಿಂದ ನಾವು ಈ ಪ್ರಕ್ರಿಯೆಯೊಂದಿಗೆ ಅನುಸಂಧಾನ ನಡೆಸಬೇಕಾಗುತ್ತೆ. ಮಹಿಳೆ ಎಂಬ ಪರಿಕಲ್ಪನೆಯನ್ನೇ ಮರುವ್ಯಾಖ್ಯಾನಕ್ಕೆ ಒಳಪಡಿಸಬೇಕಾಗುತ್ತೆ. ನಾನು ಮತ್ತೊಂದು ಪೇಪರ್‌ನಲ್ಲಿ ಆರ್ಗ್ಯೂ ಮಾಡಿದಂತೆ ಬಹಳಷ್ಟು ಮಹಿಳೆಯರೇ ಒಂದು 'ಸಿಸ್ಟಮಿಕ್ ಕಂಡೀಷನ್'ಗೆ ಒಳಗಾಗಿರುತ್ತಾರೆ. ಪುರುಷ ಪ್ರಧಾನತೆ ಅದರ ಜೀವನ ವಿಧಾನದ, ಚಿಂತನಾವಿಧಾನದ ಭಾಗವೇ ಆಗಿ ಬಿಟ್ಟಿರುತ್ತದೆ. ಉದಾಹರಣೆಗೆ ಹೇಳೋದಾದರೆ ಮನೆಗೆ ಯಾರಾದರೂ ಬಂದಾಗ ಮಹಿಳೆಯೇ ಎದ್ದು ಹೋಗಿ ಟೀ ಮಾಡುವುದು.... ಅಪ್ರಜ್ಞಾಪೂರ್ವಕವಾಗಿಯೇ ಈ ಕ್ರಿಯೆ ಅಂದರೆ ಸೆಕ್ಸಿಸಂ, ಸಿಸ್ಟಮಿಕ್ ಕಂಡೀಷನ್ ನಡೆಯುತ್ತಿರುತ್ತೆ. ಇದು ಎಷ್ಟು ನಮ್ಮ ದಿನನಿತ್ಯದ ಭಾಗವಾಗಿದೆ ಎಂದರೆ ನಾವು ಅದರ ಬಗ್ಗೆ ಸ್ವಲ್ಪ ಕೂಡ ಆಲೋಚನೆ ಮಾಡುವುದಿಲ್ಲ. .....ಕೆನಡಾದ ಜನಾಂಗೀಯ ಬೇಧದ ಸ್ಥಿತಿಯೂ ಹೀಗೇ ಇದೆ. ನಮಗರಿವಿಲ್ಲದೆಯೇ ಬಿಳಿಯರು ನಮಗಿಂತ ಬುದ್ಧಿವಂತರು, ಉತ್ತಮರು ಎಂಬುದು ನಮ್ಮ ಸಾಮಾನ್ಯ ತಿಳುವಳಿಕೆಯ ಭಾಗ ವಾಗಿರುತ್ತೆ.....ಇದು ಮೀನು ನೀರಿನಲ್ಲಿ ಈಜುವಂತೆ.....ಅದಕ್ಕೆ ಈಜುತ್ತಿದ್ದೇನೆ ಅಂತ ಗೊತ್ತಿರಲ್ಲ..... ಆದರೆ ಈಜುತ್ತಿರುತ್ತೆ. ಈ ಸೆಕ್ಸಿಸಂ ಅಥವಾ ರೇಸಿಸಂ ನಮ್ಮ ತಿಳುವಳಿಕೆಯ ಭಾಗವಾಗಿದೆ ಎನ್ನುವುದನ್ನು ಅರ್ಥ ಮಾಡ್ಕೊಬೇಕು ಅಂದ್ರೆ ನಮ್ಮ ದಿನ ನಿತ್ಯದ ಚಟುವಟಿಕೆಗಳ ಆಳಕ್ಕೆ ಇಳಿದು ಅರ್ಥ ಮಾಡ್ಕೋಬೇಕಾಗುತ್ತೆ. ಆದ್ರೆ ಇವುಗಳನ್ನು ಪ್ರಶ್ನಿಸಿದರೆ... ಮಾತನಾಡಿದ್ರೂ ಸಹ ಜನ ಅಧೀರರಾಗುತ್ತಾರೆ.... ಒಂದು ಮದುವೆ ನಡೀತಿರುತ್ತೆ ಅಂದ್ಕೊಳ್ಳಿ. ಅಲ್ಲೇನಾದ್ರೂ ನಾನು ಇದನ್ನ ಹೇಳಿದರೆ ಜನರೆಲ್ಲ ಅಪ್ರತಿಭರಾ ಗುತ್ತಾರೆ.....ನಾನು ಉತ್ಪ್ರೇಕ್ಷೆ ಮಾಡ್ತಾ ಇಲ್ಲ....ನನ್ನನ್ನು ಅಸಹ್ಯಿಸಲು ಪ್ರಾರಂಭಿಸುತ್ತಾರೆ.... ಈ ರೀತಿ ಹಲವು ಉದಾಹರಣೆ ಕೊಡಬಹುದು. ಮಹಿಳೆಯರನ್ನು ಅಸಾಧ್ಯವಾಗಿ ನಡೆಸಿ ಕೊಳ್ಳುವ ಬಗ್ಗೆ.

**ತಾರಕೇಶ್ವರ್ :** ಇದನ್ನ ಅಕಡೆಮಿಕ್ ಆಗಿ ಅನಲೈಸ್ ಮಾಡ್ತೋದು ಒಂದು. ಆದ್ರೆ ಈ ಕಾಮನ್‌ಸೆನ್ಸನ್ನೇ ಬದಲಾಯಿಸುವುದಕ್ಕೆ ಇಂಡಿಯಾದಲ್ಲಾಗಲಿ, ಬೇರೆ ಕಡೆ ಆಗಲಿ ಸ್ತ್ರೀವಾದಿ ಚಳುವಳಿಗಳು ಏನಾದ್ರೂ ಕಾರ್ಯಕ್ರಮ ಹಾಕ್ಕೊಂಡಿದಿಯಾ?

**ವನಜಾ :** ಹ್ಞೂಂ... ಮಾಡಬಹುದು. ಮಾಡೋಕ್ಕೆ ಹಲವಾರು ದಾರಿಗಳಿವೆ. ನೋಡಿ, ಸಾಂಸ್ಥಿಕಗೊಂಡ ಸೆಕ್ಸಿಸಂನ್ನು ಅಡ್ರೆಸ ಮಾಡೋದು ಸುಲಭ. ಉದಾಹರಣೆ ಕಾನೂನಿನಲ್ಲಿ, ಮೆಡಿಸಿನ್‌ನಲ್ಲಿ ಇರೋ ಸೆಕ್ಸಿಸಂನ್ನ ಅಡ್ರೆಸ ಮಾಡೋದು ಸುಲಭ. ಸಂರಚಿತ ಸೆಕ್ಸಿಂನ್ನು ಕೂಡ ಅಡ್ರೆಸ್ ಮಾಡಬಹುದು. ಇದೂ ಸ್ವಲ್ಪ ಆಗ್ತ ಇದೆ.... ಈಗ ಹೆಣ್ಣುಮಕ್ಕಳಿಗೆ

ವಿಶೇಷ ಸವಲತ್ತು ಕೊಡೋದು ಇತ್ಯಾದಿ... ಆದ್ರೆ ನಾವು ಸಿಸ್ಟಮಿಕ್ ಸೆಕ್ಸಿಸಂನ್ನೇ ಅಡ್ರೆಸ್ ಮಾಡಿದರೆ ಇದೆಲ್ಲವೂ ಅದರ ಮೂಲಕವೇ ಫಿಲ್ಟರ್ ಆಗುತ್ತೆ. ಅಂದ್ರೆ ಆಪರೇಷನಲ್ ಲೆವೆಲ್‌ನಲ್ಲಿ ಸ್ಟ್ರಕ್ಚರಲ್ ಸೆಕ್ಸಿಂಸನ್ನು ಅಡ್ರೆಸ್ ಮಾಡಲಾಗುತ್ತಿದೆ. ಆದ್ರೆ ಮುಖ್ಯವಾಗಿ ಸೆಕ್ಸಿಂ ಅನ್ನು ಅಡ್ರೆಸ್ ಮಾಡಬೇಕಿರುವುದು ಸಿಸ್ಟಮಿಕ್ ಲೆವೆಲ್‌ನಲ್ಲಿ. ಉದಾಹರಣೆಗೆ ವರದಕ್ಷಿಣೆ ಬಗ್ಗೆ ತಗೋಳೋದಾದ್ರೆ ವರದಕ್ಷಿಣೆ ವಿರೋಧಿ ಕಾನೂನಿದೆ. ಆದ್ರೆ ಅದನ್ನ ಇಂಪ್ಲಿಮೆಂಟ್ ಮಾಡುವವರು ಸಿಸ್ಟಮಿಕ್ ಸೆಕ್ಸಿಸಂನ ಭಾಗವಾಗಿರುತ್ತಾರೆ. ಅದನ್ನ ಗಮನಿಸಬೇಕು. ಹಾಗಂತ ನಾನು ಸ್ಟ್ರಕ್ಚರಲ್ ಲೆವೆಲ್‌ನಲ್ಲಿ ಅಡ್ರೆಸ ಮಾಡಬಾರದು ಅಂತ ಹೇಳ್ತಿಲ್ಲ. ಯಾಕೆಂದರೆ ಕಾನೂನಿದ್ದರೆ ಅಲ್ಲವೆ ಕೇಳಲು ಸಾಧ್ಯ. ಅದಿಲ್ಲದಿದ್ದರೆ ಕೇಳೋಕ್ಕೂ ಆಗಲ್ಲ... ಭಾರತ ಪ್ರಜಾಪ್ರಭುತ್ವ ದೇಶ ಆಗಿರೋದರಿಂದ, ಮಹಿಳೆಯರಿಗೂ ಸಮಾನ ಹಕ್ಕುಗಳಿರುವುದರಿಂದ ನಾವು ಮಾತನಾಡಲು ಸಾಧ್ಯವಿದೆ. ಆದ್ದರಿಂದ ಮೇಲಿನ ಎರಡನ್ನು ಅಡ್ರೆಸ್ ಮಾಡುವ ಪ್ರಯತ್ನಗಳನ್ನು ನಾನು ಅಲ್ಲಗಳೀತಿಲ್ಲ. ಅವು ಬೇಕು. ಅದರ ಜೊತೆಗೆ ಸಿಸ್ಟಮಿಕ್ ಸೆಕ್ಸಿಂನ್ನು ಗಮನಿಸಬೇಕು. ...ಅದು ಎಲ್ಲವನ್ನು ತನ್ನ ಮೂಲಕ ಹಾದು ಹೋಗಲು ಬಿಡುವ ಲೆನ್ಸ್ ಇದ್ದ ಹಾಗೆ. ಸ್ಟ್ರಕ್ಚಲರ್ ಆಪರ್ಚುನಿಟೀಸ್ ಮಹಿಳೆಯರಿಗೆ ಬಹಳ ಸಹಾಯ ಮಾಡಿದೆ. ಅದಿರೋದ್ರಿಂದಲೇ ವಿವಾಹ ಸಂಸ್ಥೆಗೆ ಹೊರತಾದ ಮಹಿಳೆಯರೂ ಮುಂದಕ್ಕೆ ಬರ ಬಹುದು...ಸಮಾನತೆ ಬಗ್ಗೆ ಮಾತನಾಡಬಹುದು.... ಇದೆಲ್ಲ ಸಾಧ್ಯ ಆಗಿದೆ. ಈ ರೀತಿ ಅವಕಾಶಗಳೇ ಇಲ್ಲದಿದ್ದರೆ ನಾನು ಇಲ್ಲಿಯವರೆಗೆ ಬರೋಕೆ ಆಗ್ತಿರಲಿಲ್ಲ. ಕೆಲವು ಮಹಿಳಾ ಪರ ಪುರುಷರೂ ಸಹ ಮಹಿಳೆಯರ ಅಭಿವೃದ್ಧಿಗೆ ಆಸಕ್ತಿ ವಹಿಸಿದ್ದಾರೆ, ಶ್ರಮಪಟ್ಟಿದ್ದಾರೆ...

**ತಾರಕೇಶ್ವರ್ :** ಅದು ಅವರು ಕರ್ತವ್ಯ ಮಾಡಿದ್ದಾರೆ ಅಷ್ಟೇ ಅಲ್ಲವೆ?

**ವನಜಾ :** ಹೌದು, ಹೌದು. ಅದು ಅವರು ಮಾಡಬೇಕು. ಉದಾಹರಣೆಗೆ ಹೇಳೋದಾದರೆ ನಿಮ್ಮ ಮಗಳ ಬರ್ತಡೇ ಆಚರಿಸೋದಾದರೆ ಅದನ್ನ ಮಗನ ಬರ್ತಡೇ ಮಾಡಿದಂತೆಯೇ ಮಾಡಬೇಕು. ಆಗ ಇಬ್ಬರಿಗೂ ಸಮಾನ ಹಕ್ಕು ಕೊಡುವ ಮೂಲಕ ಜಗತ್ತಿಗೊಂದು ಸಂದೇಶ ಕೊಡ್ತಾ ಇರ್ತೀರಿ. ಮಗಳಲ್ಲಿ ನಾನು ನನ್ನ ಸಹೋದರನಷ್ಟೇ ಸಮಾನಗಳು, ನನ್ನ ಗೆಳತಿಯರೂ ಸಮಾನರು ಅನ್ನೋ ಭಾವನೆ ಬೆಳೆಯುತ್ತೆ, ಹರಡುತ್ತೆ....ಇದು ಬಹಳ ಸಿಂಪಲ್ ಅಂತ ಅನ್ನಿಸಬಹುದು. ಆದ್ರೆ ಇದು ದಿನಾ ನಡಿಯೋ ಅಂತದ್ದು. ಈ ರೀತಿ ದಿನನಿತ್ಯದಲ್ಲಿ ಬದಲಾದರೆ ಅದು ಒಂದು ಹೊಸ ಸಂವೇದನೆಯನ್ನು ಸೃಷ್ಟಿ ಮಾಡುತ್ತೆ. ಇದು ಒಂದು ಹಂತದ ಕಾರ್ಯಕ್ರಮ.....ಇನ್ನೊಂದು ಹಂತದಲ್ಲಿ ಹೇಳಬೇಕು ಅಂದ್ರೆ... ದೇವರ ಪರಿಕಲ್ಪನೆ ತಗೊಂಡರೆ ಬೇರೆ ಧರ್ಮಕ್ಕಿಂತ ಹಿಂದೂ ಧರ್ಮ ಫ್ಲೆಕ್ಸಿಬಲ್ ಆದದ್ದು....ಅಂದ್ರೆ ಇದರಲ್ಲಿ ದೇವಿಯರೂ ಇದ್ದಾರೆ. ಎಲ್ಲ ರೀತಿಯ ಹೆಣ್ಣು ದೇವರುಗಳೂ ಇದಾರೆ. ಆರು ಮುಖದ ಲಕ್ಷ್ಮಿ, ಗಂಡನ ಕಾಲೊತ್ತುವ ಲಕ್ಷ್ಮಿ. ಆದ್ರೆ ಈ ರೀತಿಯ ಹೆಣ್ಣು ದೇವರುಗಳು ಯಾವುದೇ ಉಪಯೋಗಕ್ಕೆ ಬರಲ್ಲ. ಯಾಕೆಂದರೆ ಇವು ಪುರುಷ ಪ್ರಧಾನತೆಯ ಅಧೀನದಲ್ಲಿರುವ ಮುಖಗಳೇ....ಅದೇ ಗ್ರಾಮದೇವತೆಗಳು....ಅವು ಬೇರೆ ರೀತಿ. ಈ ದೇವತೆಗಳು ಇಡೀ

ಹಳ್ಳಿಯನ್ನ ರಕ್ಷಣೆ ಮಾಡ್ತಾರೆ. ಎಲ್ಲ ರೀತಿಯ ಶಕ್ತಿ ಪ್ರದರ್ಶಿಸುತ್ತಾರೆ. ಜನ ಆ ದೇವರ ತೀರ್ಪು ಕೇಳುತ್ತಾರೆ. ಈ ದೇವತೆಗಳು ಶಕ್ತಿಶಾಲಿಯೂ, ಧೈರ್ಯಶಾಲಿಯೂ ಆಗಿದ್ದು, ಅವರ ಸಮಸ್ಯೆಗಳನ್ನು ಬಗೆಹರಿಸುವ ಸಾಮರ್ಥ್ಯ ಹೊಂದಿರುತ್ತವೆ....ಯಾವ ಮಹಿಳೆಯರು ತಮ್ಮ ಕಲ್ಪನೆಯ ಜಗಿತದಿಂದ ತಮ್ಮಲ್ಲೊಂದು ಹೆಣ್ಣು ದೇವರು ಇದೆ ಎಂದು ಭಾವಿಸಿ ಕೊಂಡಿದ್ದಾದರೆ ಅಂತಹ ಮಹಿಳೆಯ ಮೇಲೆ ಈ ರೀತಿಯ ಇಮೇಜನ್ನು ಪ್ರೊಜೆಕ್ಟ್ ಮಾಡಿದಾಗ, ಅವಳಿಗೆ ನಾನು ಏನಾಗಬೇಕೆಂದಿದ್ದೆನೋ ಅದನ್ನು ಆಗಬಲ್ಲೆ ಎಂಬ ನಂಬಿಕೆ ಸಾಮರ್ಥ್ಯ ಬೆಳೆಯುತ್ತೆ. ಈ ರೀತಿಯ ದೇವರುಗಳನ್ನು ಪ್ರತಿನಿತ್ಯ ಆರಾಧಿಸಿದರೆ, ಪ್ರತಿಯೊಬ್ಬರಲ್ಲೂ ದೇವರಿರುತ್ತಾನೆ ಎಂಬುದರ ಜೊತೆಗೆ ಪ್ರತಿಯೊಬ್ಬರಲ್ಲೂ ಹೆಣ್ಣುದೇವರೂ ಇರುತ್ತಾಳೆ ಎಂದು ಹೇಳಬಹುದು. ಈ ರೀತಿಯ ನಂಬಿಕೆ ಹೆಚ್ಚಾದರೆ ಮಹಿಳೆಯರಲ್ಲಿ ಆತ್ಮವಿಶ್ವಾಸ ಹೆಚ್ಚಾಗುತ್ತದೆ. ಮಹಿಳೆಯರ ದೊಡ್ಡ ಸಮಸ್ಯೆಯೇ ತಮ್ಮನ್ನು ತಾವು ಸಮರ್ಥರೆಂದು ಭಾವಿಸಿಕೊಳ್ಳದಿರುವುದು.

ಈಗ ನಾನೊಂದು ಪೇಪರ್ ಬರಿತಾ ಇದ್ದೀನಿ. ಅದರಲ್ಲಿ ನಾನು 'ಸ್ಟ್ರಗಲ್ ಎಗೆನ್‌ಸ್ಟ್ ರೇಸಿಸಂ ಈಸ್ ಮಚ್ ಈಸಿಯರ್ ದೆನ್ ಸ್ಟ್ರಗಲ್ ಎಗೆನೆಸ್ಟ್ ಸೆಕ್ಸಿಸಂ' ಎಂದು ವಾದಿಸುತ್ತಿದ್ದೇನೆ. ಇದೆಲ್ಲ ನನ್ನ ಕೆನಡಾದ ಅನುಭವದ ಆಧಾರದ ಮೇಲೆ ಹೇಳುತ್ತಿದ್ದೇನೆ. ಈಗ ಜನಾಂಗ ದ್ವೇಷದ ವಿರುದ್ಧ ಸಮುದಾಯವು ಒಟ್ಟಾಗಿ ಸಹಾಯಕ್ಕೆ ಬರುತ್ತೆ. ಅದರೆ ಲಿಂಗಬೇಧದ ವಿರುದ್ಧ ಸಮುದಾಯವಾಗಲಿ, ಇನ್ನಾವುದೇ ಆಗಲಿ ಸಹಾಯ ಮಾಡುವುದಿಲ್ಲ. ಕುಟುಂಬವೇ ಮಹಿಳೆಯ ವಿರುದ್ಧವಾಗಿದೆ. ತಮ್ಮ ಮನೆಯಲ್ಲಿಯೇ ಅವರಿಗೆ ಬೆಂಬಲವಿಲ್ಲ. ಮತ್ತೊಂದು ರೀತಿಯಲ್ಲಿ ಹೇಳುವುದಾದರೆ ಮಹಿಳೆಯರಿಗೆ 'ಸಪೋರ್ಟಿಂಗ್ ಕಮ್ಯುನಿಟಿ' ಎನ್ನುವುದೇ ಇಲ್ಲ. ಆದ್ದರಿಂದ ಮಹಿಳೆಯರಿಗೆ ಸೆನ್ಸ್ ಆಫ್ ಕಮ್ಯುನಿಟಿ ತರುವುದು ಬಹಳ ಮುಖ್ಯ. ಇದರಿಂದ ಒಬ್ಬ ಹುಡುಗಿ ಮಾತನಾಡಿದಾಗ ಆಕೆಯ ಪರವಾಗಿ ಇತರೆಲ್ಲರು ನಿಲ್ಲುವುದಕ್ಕೆ ಸಹಾಯವಾಗುತ್ತೆ. ಆದ್ದರಿಂದ ಮಹಿಳಾ ಚಳುವಳಿಗೆ ಸ್ಟ್ರೆಂತ್ ಕೊಡಬೇಕು ಅಂದ್ರೆ ಸಪೋರ್ಟಿಂಗ್ ಕಮ್ಯುನಿಟಿ ಕ್ರಿಯೇಟ್ ಮಾಡಬೇಕು. ಒಬ್ಬ ಮಹಿಳೆಗೆ ಆ ರೀತಿ ಪೂರಕವಾಗಿ ನಿಲ್ಲುವ ಜನ ಅಥವಾ ಸಮುದಾಯ ಇಲ್ಲದಿದ್ದರೆ ಅವಳ ದನಿ ಉಡುಗುತ್ತದೆ. ಮಹಿಳಾ ಚಳುವಳಿಗಳ ಪ್ರಮುಖ ಅಜೆಂಡಾ ಈ ರೀತಿಯ ಪೂರಕ ಸಮುದಾಯಗಳನ್ನು ಸ್ಥಾಪಿಸುವುದಾಗಬೇಕಾಗಿದೆ. ಹೆಣ್ಣು ದೇವತೆಗಳ ಪರಂಪರೆಯನ್ನು ಪುನರುಜ್ಜೀವನಗೊಳಿಸುವುದರ ಮೂಲಕ ಮಹಿಳೆಯರಿಗೆ ಧೈರ್ಯ ತುಂಬಲು ಸಾಧ್ಯ. ಅವರಲ್ಲಿ ಕಾಮ್ರೆಡ್‌ಶಿಪ್ಪನ್ನು ತರಲು ಸಾಧ್ಯ. ಭಾರತದಲ್ಲಿ ಇದು ದೊಡ್ಡ ಕೊರತೆ. ಅಲ್ಲೊಂದು ಇಲ್ಲೊಂದು ಮಹಿಳಾ ಗುಂಪು ಇರಬಹುದು. ನನಗೆ ಗೊತ್ತಿಲ್ಲ. ಅವರು ಸಪೋರ್ಟಿಂಗ್ ಕಮ್ಯುನಿಟಿಯ ರೋಲನ್ನು ಪ್ಲೇ ಮಾಡುವಷ್ಟು ಸ್ಟ್ರಾಂಗಿಲ್ಲ ಅನ್ಸುತ್ತೆ. ಅಂದರೆ ಮಹಿಳೆ ತನ್ನ ಮನದಾಳದ ಮಾತನ್ನು ಆಡಿದಾಗ ಅವಳನ್ನು 'ಪ್ರತಿದಿನವೂ' ಬೆಂಬಲಿಸುವ ಸಮುದಾಯದ ಕೊರತೆ ನಮ್ಮಲ್ಲಿದೆ. ಇಂತಹ ಪರಿಸ್ಥಿತಿಯಲ್ಲಿ ಅವಳು ತನ್ನ ಮನದಾಳದ ಮಾತುಗಳನ್ನು

ಹೇಳಿದಾಗ ಸುತ್ತಮುತ್ತಲಿನವರಿಂದ ಕುಹಕದ ಮಾತನ್ನು ಹೆಚ್ಚಾಗಿ ಕೇಳುತ್ತೇವೆ ಹೊರತು ಬೆಂಬಲವನ್ನಲ್ಲ. ಇದರಿಂದಾಗಿ ನಾನು ವಾದಿಸುವುದು ಏನೆಂದರೆ 'ಗಾಡೆಸ್ಸ್ ಟ್ರೆಡೀಷನ್' ಪುನರುತ್ಥಾನ ಮಾಡಬೇಕು.

**ತಾರಕೇಶ್ವರ್ :** ಮಹಿಳೆಯರೆಲ್ಲರೂ ಒಂದು ಸಮುದಾಯವಾಗಿ ರೂಪುಗೊಳ್ಳಬೇಕಾದರೆ ಅವರು ಈಗಿರುವ ಸಮುದಾಯವನ್ನು ಮೀರಿ ಈ ಕ್ರಿಯೆ ನಡೆಯಬೇಕಾಗುತ್ತದೆ. ಇದು ಸಾಧ್ಯವೇ? ಈಗಿರುವ ಜಾತಿ, ವರ್ಗ, ಧರ್ಮ ಇತ್ಯಾದಿಗಳನ್ನು ಮೀರಿಬರುವುದು.

**ವನಜಾ :** ಅದೇ ಸಮಸ್ಯೆ. ಮಹಿಳೆಯರು ಹರಿದು ಹಂಚಿ ಹೋಗಿದ್ದಾರೆ. ಮಹಿಳೆಯರಿಗೆ ತಾವಾಗಿ ಏನನ್ನೂ ಮಾಡಲು ಅವಕಾಶ ಕೊಟ್ಟಿಲ್ಲ. ಈಗ ಕ್ಯಾಂಟಿನಿಗೆ ಹೋಗುವುದಿರ ಬಹುದು, ಸಿನಿಮಾಗೆ ಹೋಗುವುದಿರಬಹುದು.... ಆಕಸ್ಮಾತ ಅವಳು ಹಾಗೆ ಮಾಡಿದರೆ ಯಾಕೆ ಗಂಡನ ಜೊತೆ ಹೋಗ್ತಿಲ್ಲ. ಅಪ್ಪನ ಜೊತೆ ಹೋಗ್ತಿಲ್ಲ ಅನ್ನೋ ಪ್ರಶ್ನೆ ಬರುತ್ತೆ... ಮಹಿಳೆಯನ್ನು ಸಮುದಾಯವಾಗಿ ರೂಪಿಸುವುದು ದೊಡ್ಡ ಸವಾಲು. ...ಅಂದರೆ ಮಹಿಳೆಯರು ಈಗ ಇರುವ ಸಮುದಾಯಗಳ ಗಂಡಸರನ್ನು ತಮ್ಮ ಪರ ನಿಲ್ಲಲು ಒಪ್ಪಿಸುವುದು.... ನನ್ನ ಅಭಿಪ್ರಾಯದಲ್ಲಿ ಸಾಧ್ಯವಿಲ್ಲ....ಗಂಡಸರು ಒಪ್ಪಲ್ಲ. ಸಮುದಾಯದ ಒಳಗಿರುವ ಪುರುಷರ ಬೆಂಬಲವಿರಲ್ಲ...ಮಹಿಳೆಯರು ಸೆನ್ಸ್ ಆಫ್ ಕಮ್ಯುನಿಟಿ ಡೆವಲಪ್ ಮಾಡ್ಕೊಬೇಕು ಅಂದ್ರೆ ದೊಡ್ಡದೇ ಆಗಬೇಕಿಲ್ಲ. ಚಿಕ್ಕಾದಾದರೂ ಆಗಬಹುದು. ಉದಾಹರಣೆಗೆ ಕುಟುಂಬದಲ್ಲಿ ಅಕ್ಕತಂಗಿಯರು, ಅತ್ತೆ ಸೊಸೆಯರು ಪರಸ್ಪರ ಬೆಂಬಲಿ ಸುವುದು. ಹೀಗೆ..... ಈ ರೀತಿಯ ಆಲೋಚನೆ ಬಗ್ಗೆ ನಾನು ಮಾತಾಡ್ತ ಇದ್ದೇನೆ.

**ತಾರಕೇಶ್ವರ್ :** ಮಹಿಳೆ ಮತ್ತು ಸಮುದಾಯದ ಬಗ್ಗೆ ಮಾತನಾಡುವುದಾದರೆ ರಾಷ್ಟ್ರೀಯ ಸಮುದಾಯಗಳು ರಾಷ್ಟ್ರೀಯತೆಯ ಸಂದರ್ಭದಲ್ಲಿ ಮುಖ್ಯವಾಗಿ ಭಾರತದಲ್ಲಿ ಮಹಿಳೆಯನ್ನ ಸಾಮುದಾಯಿಕ ಸಂಸ್ಕೃತಿಯ ವಾರಸುದಾರರನ್ನಾಗಿ ನೋಡಿದೆ. 'ಸಂಸ್ಕೃತಿ'ಯನ್ನು ಉಳಿಸಿ ಬೆಳೆಸಿಕೊಂಡು ಹೋಗುವ ಹೊಣೆಗಾರಿಕೆಯನ್ನು ಮಹಿಳೆಯರ ಮೇಲೆ ಹೊರಿಸಿ ಪುರುಷರು ಹೊಸ ಕಾಲದ ಅಗತ್ಯಗಳ ಕಡೆ ಹೊರಳಿದ್ದಾರೆ ಮತ್ತು ಕೋಮುವಾದದ ಸಂದರ್ಭದಲ್ಲಿಯೂ ಮಹಿಳೆಯರನ್ನು ಸಮುದಾಯದ ಮಾನದ ಪ್ರತೀಕಗಳಾಗಿ ನೋಡುತ್ತಾರೆ. ಇದರಿಂದಾಗಿಯೇ ಮತ್ತೊಂದು ಸಮುದಾಯಕ್ಕೆ ಅವಮಾನ ಮಾಡಬೇಕೆಂದರೆ ಅವರ ಮಹಿಳೆಯರನ್ನು ಅವಮಾನಿಸಲಾಗುತ್ತೆ. ಮಹಿಳೆಯನ್ನು ಸಮುದಾಯದ ಆಸ್ತಿ ಎಂದು ಪರಿಗಣಿಸುವುದರಿಂದಲೇ ತಮ್ಮ ಸಮುದಾಯದ ಮಹಿಳೆಯರನ್ನು ಅವಮಾನಿಸಿದರು ಎಂದೇ ಘರ್ಷಣೆಗೆ ಇಳಿ ಯುತ್ತಾರೆ.

**ವನಜಾ :** ಹೌದು, ಮಹಿಳೆಯರನ್ನು ಸಮುದಾಯಗಳು 'ಪಾನು'ಗಳಾಗಿ ಬಳಸುತ್ತವೆ. ಚರಿತ್ರೆಯಲ್ಲಿ ಮಹಿಳೆಯನ್ನು ಪಾನುಗಳಾಗಿ ಬಳಸಿದ್ದಾರೆ. ಹಿಂದೆ ಹೇಳಿದಂತೆ ಪುರುಷರನ್ನು ಸಪೋರ್ಟ್ ಮಾಡುವುದಕ್ಕಷ್ಟೇ ಮಹಿಳೆಯರು. ಅವರ ಕೆಲಸ ಏನಿದ್ದರೂ ಪುರುಷರಿಗೆ ಪೂರಕ ವಾತಾವರಣ ಸೃಷ್ಟಿ ಮಾಡುವುದು. ಇದರಿಂದಾಗಿ ಮಹಿಳಾ ಚಳುವಳಿ ಒದ್ದಾಡ್ತ

ಇದೆ. ಕುಂಠಿತವಾಗಿದೆ. ಸ್ಥಿತಿಯಲ್ಲಿ ಅಂತಹ ಬದಲಾವಣೆ ಏನು ಕಾಣ್ತಾ ಇಲ್ಲ. ಸೆಕ್ಸಿಸಂ ಅನ್ನುವುದು ಸಿಸ್ಟಮಿಕ್ ಆಗಿ ಎಷ್ಟು ಆಳವಾಗಿ ಬೇರೂರಿದೆ ಅಂದ್ರೆ ಮಹಿಳೆಯರಿಗೆ ತಮ್ಮ ಸ್ವಂತ ಕಾಲ ಮೇಲೆ ತಾವು ನಿಲ್ಲಲು ಸಾಧ್ಯವಾಗುತ್ತಿಲ್ಲ. ಪುರುಷರು ತಮ್ಮ ಗುರಿ ಸಾಧಿಸಲು ಮಹಿಳೆಯರನ್ನು ಬಳಸಿಕೊಳ್ಳುತ್ತಾರೆ. ಮಹಿಳೆಯರು ಬೇರೆ ಸಮುದಾಯಗಳಿಗಿಂತ ಭಿನ್ನವಾದ, ಪುರುಷರಿಗಿಂತ ಭಿನ್ನವಾದ ಒಂದು ಸಾಮುದಾಯಿಕ ಐಡೆಂಟಿಟಿಯನ್ನು ರೂಪಿಸಿಕೊಳ್ಳ ಬೇಕಿದೆ..... ಕಾಳಿ ಟ್ರೆಡೀಷನ್ ಬಗ್ಗೆ ಒಂದು ಪೇಪರ್ ಬರೆದಿದ್ದೇನೆ....ನಮ್ಮ ಟ್ರೆಡೀಷನ್ ನಲ್ಲಿ ಇರುವ ಕಾಳಿ ಬಗ್ಗೆ....ಕಾಳಿ ಒಂದು ಕೆಟ್ಟ ಪದ, ಕೆಟ್ಟ ದೇವರು ಹಿಂದೂ ಪರಂಪರೆಯಲ್ಲಿ. ಆದ್ರೆ ನಾನು ಹೇಳುವುದು ಆಕೆ ಅಸಾಂಪ್ರದಾಯಿಕ ಹೆಣ್ಣು ದೇವರು. ಬಡವಳಾದ, ಧೈರ್ಯಶಾಲಿಯಾದ, ನ್ಯಾಯಕ್ಕಾಗಿ ಎಲ್ಲ ಬಗೆಯ ಸಂಕಷ್ಟಗಳನ್ನು ತೆಗೆದು ಕೊಳ್ಳುವವಳು. ಅವಳು ಯಾವುದೇ ರೀತಿಯ ನಾನ್‌ಸೆನ್ಸ ಟಾಲರೇಟ್ ಮಾಡಲ್ಲ. ಮತ್ತೊಂದು ಅರ್ಥದಲ್ಲಿ ಹೇಳುವುದಾದರೆ ಪುರುಷರಿಗೆ ಕಾಳಿಯನ್ನು ಕಂಡರೆ ಭಯ. ಏಕೆಂದರೆ ಅವಳು ಪ್ರಶ್ನಿಸುತ್ತಾಳೆ. ಆದ್ದರಿಂದಲೇ ಫೆಮಿನಿಸ್ಟಗಳು ಕಾಳಿಯನ್ನ ಮುಂದೆ ತಂದು ಮಹಿಳೆ ಯರಿಗೆ ಧೈರ್ಯ ತುಂಬಬೇಕು.

**ತಾರಕೇಶ್ವರ್ :** ಭಾರತವು ಬಹುಸಂಸ್ಕೃತಿಯ ದೇಶ. ಇಲ್ಲಿನ ಬಹುತೇಕ ಸಂಸ್ಕೃತಿಗಳೂ ತಮ್ಮದೇ ಆದ ಹೆಣ್ಣು ದೇವತೆಗಳನ್ನು ಹೊಂದಿವೆ. ಹೀಗಿರುವಾಗ ಒಂದು ಸಂಸ್ಕೃತಿಯ ಹೆಣ್ಣು ದೇವತೆಯಾದ ಕಾಳಿಯನ್ನು ಎಲ್ಲರ ಪ್ರತೀಕವಾಗಿ ರೂಪಿಸಲು ಸಾಧ್ಯವೆ? ಕಾಳಿ ಪ್ರತಿಮೆಯೇ ಸಮುದಾಯಗಳನ್ನು ಮೀರಿದ ಮಹಿಳಾ ಸಮುದಾಯ ರೂಪಿಸಲು ತೊಡಕಾಗು ವುದಿಲ್ಲವೆ?

**ವನಜಾ :** ಕಾಳಿ ನಿಮ್ಮನ್ನು ಧೈರ್ಯವಂತಳಾಗಿಸುತ್ತಾಳೆ. ಸ್ವಾವಲಂಬಿಯಾಗಲು ಪ್ರೇರಿಸುತ್ತಾಳೆ. ರಿಸ್ಕ್ ತೆಗೆದುಕೊಳ್ಳಲು ಸ್ಪೂರ್ತಿಯಾಗುತ್ತಾಳೆ. ಬೇರೆಯವರಿಂದ ಬೆದರಿಕೆಗೆ ಒಳಗಾಗದಂತೆ ಮಾಡುತ್ತಾಳೆ. ಕಾಳಿ ಈ ರೀತಿ ಒಂದು ಒಳ್ಳೆಯ ಪ್ರತೀಕ ಆಗಬಹುದು.....ಅದನ್ನ ನೀವು ಯಾವ ರೀತಿ ನೋಡ್ತೀರ ಅನ್ನೋದರ ಮೇಲೆ ಡಿಪೆಂಡ್ ಆಗುತ್ತೆ. ನಾನೇನು ತುಂಬಾ ಧಾರ್ಮಿಕ ಮನೋಭಾವದ ವ್ಯಕ್ತಿ ಅಲ್ಲ. ಬೇರೆ ಸಂಪ್ರದಾಯದಲ್ಲೂ ಈ ರೀತಿ ಪ್ರತೀಕ ಇದ್ದರೆ ಅದನ್ನೂ ಬಳಸ್ಕೊಬಹುದು. ಇಲ್ಲಿ ಹೆಣ್ಣುದೇವತೆಯ ಕೆಲಸ ಆಂತರಿಕ ಶಕ್ತಿ ತುಂಬುವುದು. ಜೀವನ ಎಷ್ಟು ಭಯಾನಕವಾಗಿದೆ ಅಂದ್ರೆ ಮಹಿಳೆಯರು ಮಾತನಾಡಲೇ ಹೆದರುತ್ತಾರೆ. ಕಾಳಿಯ ಪ್ರತೀಕದಲ್ಲಿ ನಂಬಿಕೆ ಇಡುವುದರಿಂದ ಮಹಿಳೆಯರು ಎಸೆನ್ಸ್ ಆಫ್ ಕಮ್ಯುನಿಟಿಯನ್ನು ಬಳಸಿಕೊಂಡು ಪರಸ್ಪರರನ್ನು ಬೆಂಬಲಿಸಲು ಸಹಾಯಕವಾಗುವುದು. ಹಾಗೆ ಮಹಿಳೆಯರಿಗೆ ನೆರವಾಗುವ ಹಾಗೂ ಸಮಾನತೆಯಲ್ಲಿ ನಂಬಿಕೆ ಇರುವ ಪುರುಷರು ಇದೇ ರೀತಿ ಕಾಳಿಯಲ್ಲಿ ನಂಬಿಕೆ ಇಡಬಹುದು....ಕೆಲವು ಪುರುಷರು ನಮ್ಮ ಸಹವರ್ತಿ ಗಳಾಗಿರಲು ಸಾಧ್ಯ. ಉದಾಹರಣೆಗೆ ಕೆನಡಾದಲ್ಲಿ ಒಂದು ಶಾಲೆಯಲ್ಲಿ ೧೫ ಹೆಣ್ಣು ಮಕ್ಕಳನ್ನು ಒಬ್ಬ ಗುಂಡಿಕ್ಕಿ ಕೊಂದ. ನಿಮಗೆ ಈ ಹತ್ಯಾಕಾಂಡ ಗೊತ್ತಿರಬಹುದು. ಅವರು ಮಹಿಳೆಯ

ರಾಗಿದ್ದರಿಂದ ಕೊಲ್ಲಪಟ್ಟರು.....ಆಗ ಬಹಳಷ್ಟು ಪುರುಷರು ಸೂಕ್ತ ಕಾಳಜಿ ತೋರಿಸಿದರು. ಈ ಗಂಡಸರೆಲ್ಲ ಸೇರಿ ಮಹಿಳೆಯರ ವಿರುದ್ಧದ ಹಿಂಸೆಯ ವಿರುದ್ಧದ ಗಂಡಸರ ಗುಂಪೊಂದನ್ನು ಸೃಷ್ಟಿಸಿದರು. ಅವರೆಲ್ಲ ತಮ್ಮನ್ನು ಪ್ರೋ ಫೆಮಿನಿಸ್ಟ್ ಮೆನ್ ಎಂದೂ ಕರೆದು ಕೊಂಡರು....ಅವರು ಬೇರೆ ಗಂಡಸರಿಗೆ ಹೇಳ್ತಾ ಇದ್ದರು 'ಮಹಿಳೆಯರನ್ನು ಹಿಂಸಿಸುವುದು ಗಂಡಸುತನವಲ್ಲ' ಎಂದು.

**ತಾರಕೇಶ್ವರ್ :** ಅಂದರೆ ಮ್ಯಾಸ್ಕುಲ್ಯಾನಿಟಿಯನ್ನು ಬಳಸಿಕೊಂಡು ಮಹಿಳೆಯರ ವಿರುದ್ಧ ಹಿಂಸೆಗಿಳಿಯದಂತೆ ತಡೆದರೆ ?

**ವನಜಾ :** ಹೌದು.....ಹೌದು.....

**ತಾರಕೇಶ್ವರ್ :** ಅದೇ ಸಮಸ್ಯಾತ್ಮಿಕ ಅಲ್ಲವೆ? ಇದು ಪುರುಷರಲ್ಲಿ ಮ್ಯಾಸ್ಕುಲ್ಯಾನಿಟಿಯನ್ನು ರಿ ಇಂಪೋಸ್ ಮಾಡಿದಂತಲ್ಲವೆ?

**ವನಜಾ :** ಮ್ಯಾಸ್ಕುಲ್ಯಾನಿಟಿ ಒಳ್ಳೆಯದಲ್ಲ. ಆದರೆ ಅದನ್ನು ರೀ ಡೆಫೈನ್ ಮಾಡ್ತ ಇದ್ದೀವಿ. ನಾವು ರೀ ಡಿಫೈನ್ ಮಾಡುವುದರಲ್ಲಿ ಪುರುಷರು ತಮ್ಮ ಬಗ್ಗೆ ತಾವು ಹೆಮ್ಮೆ ಪಡೆಬಹುದು ಮತ್ತು ಮಹಿಳೆಯರ ಕುರಿತು ಕಾಳಜಿ ವಹಿಸಬಹುದು. ನಿಜವಾದ ಗಂಡಸು ವೈಲೆಂಟಾಗಿರಬೇಕು ಅನ್ನೋದು ಸುಳ್ಳು ಅಂತಷ್ಟೇ ಇಲ್ಲಿ ಹೇಳುವುದು.....ಗಂಡಸುತನದ ಹಿಂಸಾತ್ಮಕ ಅಂಶವನ್ನ ನಾವು ನಿರಾಕರಿಸುತ್ತೇವೆ... ಈ ರೀತಿಯ ಗಂಡಸರು ನಿಜವಾದ ಸಹಚಾರಿಗಳು. ಬೇರೆ ಗಂಡಸರೂ ಅಷ್ಟೆ. ಮಹಿಳೆಯರು ಹೇಳಿದ್ದಕ್ಕಿಂತ ಗಂಡಸು ಹೇಳಿದ್ದನ್ನು ಕೇಳ್ತಾರೆ....ಅದೇ ರೀತಿ ಜನಾಂಗದ ದ್ವೇಷದ ಸಂದರ್ಭದಲ್ಲೂ, ಬಿಳಿಯೇತರ ಮನುಷ್ಯನಿಗಿಂತ ಬಿಳಿಯ ಮನುಷ್ಯ ಅದು ತಪ್ಪು ಅಂತ ಹೇಳಿದರೆ ಬಿಳಿ ಜನ ಒಪ್ಪುತ್ತಾರೆ.... ಅದೇ ರೀತಿ ಸೆಕ್ಸಿಸಂ ಕೆಟ್ಟದು ಅನ್ನೋದು ಪುರುಷರಿಂದ ಬಂದರೆ ಅದಕ್ಕೆ ಹೆಚ್ಚು ಬೆಲೆ ಬರುತ್ತೆ.

**ತಾರಕೇಶ್ವರ್ :** ಕೆನಡಾದಲ್ಲಿ ಸ್ತ್ರೀವಾದ, ಮಹಿಳಾ ಅಧ್ಯಯನದ ಸ್ಥಿತಿಗತಿಗಳೇನು?

**ವನಜಾ :** ಕೆನಡಾ ವಿಶ್ವವಿದ್ಯಾಲಯಗಳಲ್ಲಿ ಸ್ತ್ರೀವಾದಿಗಳು ಎದುರಿಸುತ್ತಿರುವ ಸಮಸ್ಯೆಗಳೂ ಹಲವಿವೆ. ಮಹಿಳೆ ಕುರಿತು ಅಧ್ಯಯನ ಮಾಡಲು ಇರುವ ಸಂಶೋಧನಾ ಅನುದಾನ ಪುರುಷರೇ ಪಡೆಯುತ್ತಿದ್ದಾರೆ. ಅದು ಕೆಲವು ಮಹಿಳೆಯರಿಗೆ ಪುರುಷರು ಮಹಿಳೆಯರ ಅಜೆಂಡಾ ಹೈಜಾಕ್ ಮಾಡ್ತಾರೆ ಅನ್ನೋ ಸಂಶಯ ಹುಟ್ಟಿಸಿದೆ. ಅದನ್ನು ಹೈಜಾಕ್ ಮಾಡದೆ ಪೂರಕ ಪಾತ್ರ ಮಾತ್ರ ವಹಿಸಬೇಕು ಅಂತ ಕೆಲವು ಸ್ತ್ರೀವಾದಿಗಳು ಅಭಿಪ್ರಾಯ ಪಡುತ್ತಿದ್ದಾರೆ. ಬ್ರಿಟೀಷರ ಸಹಾಯ ಕುರಿತು ಗಾಂಧಿ ಹೇಳಿದ ಮಾತು ಇಲ್ಲಿ ನೆನಪಿಸಿಕೊಳ್ಳಬಹುದು. 'ನನಗೆ ಗೊತ್ತು ನಿಮ್ಮ ಸದಭಿಪ್ರಾಯವು. ಸ್ವತಂತ್ರ ಪಡೆಯಲು ನಾನು ಸ್ವತಃ ಹೋರಾಟ ಮಾಡಬೇಕಿದೆ. ನೀವು ನನ್ನ ಪರ ಹೋರಾಟ ಮಾಡಲು ಸಾಧ್ಯವಿಲ್ಲ'... ಹಾಗೆ ಮಹಿಳೆಯರು ತಮ್ಮ ಸ್ವತಂತ್ರಕ್ಕಾಗಿ ತಾವೇ ಹೋರಾಟ ಮಾಡಬೇಕು. ಗಂಡಸರೇ ಪೂರಕ ಪಾತ್ರ ವಹಿಸಬೇಕೆ ಹೊರತು ನಾಯಕತ್ವವನ್ನಲ್ಲ. ಚಳುವಳಿಯನ್ನು ಅವರು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳಲು ಸಾಧ್ಯವಿಲ್ಲ....ಆದ್ರೆ ಅವರ ಬಗ್ಗೆ 'ಅತೀ ಎಚ್ಚರ'ವೂ ಬೇಕಾಗಿಲ್ಲ. ನಾವು ನಮ್ಮ

ಸಮಸ್ಯೆಯನ್ನು ಅವರೊಂದಿಗೆ ಹಂಚಿಕೊಳ್ಳಬೇಕಾಗುತ್ತೆ. ಪರಿಹಾರಗಳು ಯಾವ ದಿಕ್ಕಿನಿಂದ ಬೇಕಾದರೂ ಬರಬಹುದು. ಹೊಸ ತಂತ್ರಗಳನ್ನು ಬಳಸುವುದಕ್ಕೆ ನಾವು ನಮ್ಮನ್ನು ಸದಾ ತೆರೆದುಕೊಂಡಿರಬೇಕು. ನಮಗೆ ಸ್ಪಷ್ಟವಾಗಿರಬೇಕಿರುವುದು ನಮ್ಮ ಉದ್ದೇಶ. ಅದನ್ನು ಸಾಧಿಸಲು ಬೇರೆ ಬೇರೆ ತಂತ್ರಗಳನ್ನು ಬಳಸಬಹುದು.

**ತಾರಕೇಶ್ವರ್ :** ಮಹಿಳಾ ಅಧ್ಯಯನಕ್ಕೆ ಕೆನಡಾದ ಶೈಕ್ಷಣಿಕ ವಲಯದಲ್ಲಿರುವ ಸ್ಥಾನಮಾನವೇನು?

**ವನಜಾ :** ಅದಕ್ಕೆ ಶೈಕ್ಷಣಿಕ ವಲಯದಲ್ಲಿ ಪ್ರಾಮುಖ್ಯವಿಲ್ಲ. ಸಮಾಜದಲ್ಲಿ ಮಹಿಳೆಯ ಸ್ಥಾನಮಾನ ಕೆಳಗಿರುವಂತೆ ಅವರ ಅಧ್ಯಯನದ ಸ್ಥಾನಮಾನವು ಕೆಳಗಿದೆ. ಈ ಸಮಸ್ಯೆಯನ್ನು ಸರಕಾರ ಬಗೆಹರಿಸಲು ಪ್ರಯತ್ನಿಸುತ್ತಿದೆ. ಪ್ರತ್ಯೇಕ ಸ್ಟ್ಯಾಫ್ ಕೊಡ್ತಾ ಇದೆ. ಸಂಶೋಧನೆಗೆ ಹಣಕಾಸಿನ ನೆರವು ನೀಡ್ತಾ ಇದೆ. ಹಲವಾರು ಪ್ರಕಟಣೆ ಹೊರಬಂದಿದೆ. ಪ್ರಕಾಶಕರೂ ಹೆಚ್ಚು ತೆರೆದ ಮನೋಭಾವದವರಾಗುತ್ತಿದ್ದಾರೆ. ಮಹಿಳೆಯ ಸಮಸ್ಯೆ ಕುರಿತ ಬರಹ ಹೆಚ್ಚಾಗಿದೆ....ಮತ್ತೊಂದು ಗಮನಾರ್ಹ ಬೆಳವಣಿಗೆ ಎಂದರೆ ಸ್ತ್ರೀವಾದವು ವಿಭಿನ್ನ ಅಧ್ಯಯನ ಶಿಸ್ತುಗಳ ಒಳಗೆ ಸೇರಿಕೊಂಡಿದೆ.....ಮಹಿಳಾ ಅಧ್ಯಯನ ಮಾಡಿದವರಿಗೆ ಕೆಲಸದ ಸಮಸ್ಯೆ ಇದೆ. ಅವರು ಜೊತೆಯಲ್ಲಿ ಸೋಶಿಯಾಲಜಿ, ಸೈಕಾಲಜಿ ಮಾಡ್ತಾ ಇದ್ದಾರೆ. ಇದೂ ಒಂದು ರೀತಿ ಸವಾಲಾಗಿದೆ.

**ತಾರಕೇಶ್ವರ್ :** ಮಹಿಳಾ ಅಧ್ಯಯನ ವಿವಿಧ ಅಧ್ಯಯನ ಶಿಸ್ತುಗಳ ಭಾಗವಾಗಿರಬೇಕೆ? ಅಥವಾ ಅದೇ ಪ್ರತ್ಯೇಕ ಶಿಸ್ತಾಗಿರಬೇಕೆ?

**ವನಜಾ :** ಇದರ ಬಗ್ಗೆ ಸ್ತ್ರೀವಾದಿಗಳಲ್ಲೇ ಒಮ್ಮತದ ಅಭಿಪ್ರಾಯವಿಲ್ಲ. ಚರ್ಚೆ ಇನ್ನೂ ನಡೀತಾ ಇದೆ. ಯಾವುದೂ ಸೂಕ್ತವಾದುದು ಅಂತ? ಒಂದು ವಿಭಾಗವಾಗಿ ಮಾಡುವುದೋ ಅಥವಾ ಒಂದು ಕಾರ್ಯಕ್ರಮವಾಗಿ ಎಲ್ಲ ವಿಭಾಗಗಳ ಜೊತೆ ಸಂಬಂಧ ಇಟ್ಕೊಳೋದೋ ಪ್ರತಿಯೊಂದಕ್ಕೂ ಅದರದೇ ಆದ ಅನುಕೂಲಗಳು, ಅನಾನುಕೂಲಗಳು ಇದೆ. ಪ್ರತ್ಯೇಕ ವಿಭಾಗವಾಗಿದ್ದರೆ ಒಳ್ಳೆ ಸೈದ್ಧಾಂತಿಕ ಕೆಲಸ ಮಾಡಬಹುದು. ಒಂದು ಅಧ್ಯಯನ ಶಿಸ್ತನ್ನಾಗಿ ಬೆಳೆಸಿದರೆ ಒಳ್ಳೆ ಪ್ರಕಟಣೆ ಹೊರ ತರಬಹುದು. ಇದು ಒಂದು ವಾದ. ಇನ್ನೊಂದು ವಾದದ ಪ್ರಕಾರ ಪ್ರತ್ಯೇಕ ಅಧ್ಯಯನ ಶಿಸ್ತಾಗುವ ಬದಲು ಇರುವ ಅಧ್ಯಯನ ಶಿಸ್ತುಗಳನ್ನು ಪರಿವರ್ತಿಸಬೇಕು. ಸೋಷಿಯಾಲಜಿನಲ್ಲಿ ಜಂಡರ ಬಗ್ಗೆ ಇರುವ ಹಾಗೆ...ಎಲ್ಲ ಅಧ್ಯಯನ ಶಿಸ್ತಿನ ಭಾಗವಾಗಬೇಕು. ಯಾಕೆಂದರೆ ಮಹಿಳೆಯರು ಎಲ್ಲೆಡೆಯೂ ಇದ್ದಾರೆ. ಮಹಿಳಾ ಸಮಸ್ಯೆ ಮತ್ತು ವಿಷಯಗಳು ಎಲ್ಲ ಅಧ್ಯಯನ ಶಿಸ್ತಿನ ಕಾಳಜಿಯಾಗಿರಬೇಕು. ಇದರ ವಿರುದ್ಧವಾದ ವಾದ ಅಂದ್ರೆ ಅದಕ್ಕೆ ತನ್ನದೇ ಆದ ಸ್ಥಾನಮಾನ ಇರುವುದಿಲ್ಲ ಅಂತ. ಹೊಸ ಸಿದ್ಧಾಂತಗಳನ್ನು ರೂಢಿಸುವುದು ಕಷ್ಟ. ನಾನು ಎರಡೂ ನಿಲುವುಗಳನ್ನು ಒಪ್ಪುತ್ತೇನೆ. ಯಾಕೆಂದರೆ ಅಧ್ಯಯನ ಶಿಸ್ತುಗಳು ಒಂದನ್ನೊಂದು ರೂಪಾಂತರಿಸುತ್ತ ಸಾಗಬೇಕು. ಇನ್ನೊಂದರೊಳಗೆ ಸಮಸ್ಯೆ ಅಂದರೆ ಸಂವಾದ ಯಾರೊಂದಿಗೆ? ಇರುವವರೆಲ್ಲ ಪರಿವರ್ತಿತರೇ ಆಗಿರುವುದರಿಂದ ಸಂವಾದ ಹಾಗೂ ರೂಪಾಂತರಗಳ ಸಾಧ್ಯತೆಯೇ ಇಲ್ಲದಂತಾಗುತ್ತದೆ.

ಇದೂ ಬೆಳವಣಿಗೆಗೆ ಮಾರಕವಾಗುವುದು... ಇಲ್ಲಿ ನಾನೊಂದು ಮಾದರಿಯನ್ನು ಪ್ರಸ್ತಾಪಿಸಲು ಇಷ್ಟಪಡ್ತೀನಿ. ಯುನಿವರ್ಸಿಟಿಯಲ್ಲಿ ನಾನು ಅಧ್ಯಕ್ಷಳಾಗಿ ಕೆಲಸ ಮಾಡು ತ್ತಿದ್ದಾಗ ಅಲ್ಲಿ ಒಂದು ವಿಭಾಗ ಇದೆ. ಆದರೆ ಅವರು ಎಲ್ಲ ಡಿಪಾರ್ಟಮೆಂಟಗಳ ಜೊತೆ ಕ್ರಿಯಾಶೀಲವಾಗಿ ಸಂಪರ್ಕ ಇಟ್ಟುಕೊಂಡಿದ್ದಾರೆ. ನಾನು ಆ ರೀತಿ ಮಾದರಿಯನ್ನು ಸೂಚಿಸುತ್ತೇನೆ. ಇದರಲ್ಲಿ ಎರಡು ಮಾದರಿ ಅನುಕೂಲಗಳು ಒಟ್ಟಿಗೆ ಸಿಗುತ್ತವೆ.

**ತಾರಕೇಶ್ವರ್ :** ಕೆನಡಾದ ಸ್ತ್ರೀವಾದಿ ಚಳುವಳಿಯ ಪ್ರಮುಖ ಕಾಳಜಿಗಳೇನು?

**ವನಜಾ :** ಬಹಳ ಸಂಕೀರ್ಣವಾದುದು. ಯಾವುದೇ ಒಂದು ಇಷ್ಯೂ ಅಂತ ಅವರ ಮುಂದೆ ಇಲ್ಲ. ಅಲ್ಲಿ ಸ್ತ್ರೀವಾದಿ ಚಳುವಳಿ ದೊಡ್ಡ ಚಳುವಳಿಯೇನಲ್ಲ. ವರ್ಣದ ಆಧಾರದ ಮೇಲೆ ಜನಾಂಗೀಯ ದ್ವೇಷ ವಿರೋಧಿಸುತ್ತಿದ್ದಾರೆ. ನಾವೆಲ್ಲ ಹೇಗೆ ನಾವು ಸೆಕ್ಸಿಸಂ ಹಾಗೂ ರೇಸಿಸಂ ಎರಡರಿಂದಲೂ ಶೋಷಣೆಗೊಂಡಿದ್ದೀವಿ ಎನ್ನುವುದನ್ನು ಕುರಿತು ಹೋರಾಟ ಮಾಡ್ತಾ ಇದ್ದೀವಿ. ಸೋಶಿಯಲಿಸ್ಟಗಳು ವರ್ಗ ವ್ಯತ್ಯಾಸದ ಬಗ್ಗೆ ಮತ್ತು ಮಹಿಳೆಯರ ಬಡತನದ ಬಗ್ಗೆ ಮಾತಾಡ್ತಿದ್ದಾರೆ. ಬಡತನದ ಮಹಿಳೀಕರಣ ಜಾಗತಿಕ ವಿಷಯವಾಗಿದೆ. ಮಹಿಳೆ ಕುರಿತ ಪ್ರತೀಕಗಳನ್ನು ಕುರಿತು ನಾವು ಚರ್ಚೆ ಮಾಡಬೇಕಿದೆ, ಬದಲಿಸಬೇಕಿದೆ. ಬೇರೆ ಬೇರೆ ದೇಶಗಳ ಫೆಮಿನಿಸ್ಟಗಳ ಜೊತೆ ಸಂಧಾನ (ಅಲೆಯನ್ಸ) ಮಾಡಿಕೊಳ್ಳೋದು ಒಂದು ಸಾಮಾನ್ಯ ಲಕ್ಷಣವಾಗಿದೆ. ರಾಷ್ಟ್ರಗಳ ಕುರಿತ ಅಸಮಾನತೆ ಕುರಿತು, ಜಾಗತೀಕರಣವನ್ನು ಕೂಡ ನೋಟ್ ಮಾಡ್ತ ಇದ್ದೀವಿ. ವಿಷಯಗಳೇನೋ ತುಂಬಾ ದೊಡ್ಡದಿದೆ.

**ತಾರಕೇಶ್ವರ್ :** ಒಂದೆಡೆ ಬೇರೆ ದೇಶಗಳ ಫೆಮಿನಿಸ್ಟಗಳಜೊತೆ ಅಲೆಯನ್ಸ್ ಮಾಡಿಕೊಳ್ಳಬೇಕು ಎನ್ನುವುದು, ಮತ್ತೊಂದೆಡೆ ಭಿನ್ನ ರಾಷ್ಟ್ರಗಳ ಮಹಿಳೆಯರ ಅನುಭವಗಳು ಬೇರೆ ಎನ್ನುವುದು, ವೈರುಧ್ಯವಾಗಿ ಕಾಣುತ್ತದೆ. ಇದನ್ನು ಬಗೆಹರಿಸುವ (Balance) ವಿಧಾನ ಯಾವುದು?

**ವನಜಾ :** ಅಂದರೆ ವಿಶ್ವಾತ್ಮಕವಾದ ಅನುಭವಗಳಿರುತ್ತವೆ ಎನ್ನುವುದು. ಉದಾಹರಣೆ : ೨ನೇ ತಲೆಮಾರಿನ ಸ್ತ್ರೀವಾದಿಗಳು ಗಂಡಸುತನವನ್ನು ಪ್ರಶ್ನಿಸಿದರು. ಆದರೆ ಅವರು ಮಹಿಳೆಯರ ಅನುಭವಗಳ ನಿರ್ದಿಷ್ಟತೆಯನ್ನು ಒಪ್ಪಿಕೊಳ್ಳಲಿಲ್ಲ. ಅಂದರೆ ಒಂದರ್ಥದಲ್ಲಿ ವಿಶ್ವಾತ್ಮಕತೆಯನ್ನು ಪ್ರಶ್ನಿಸಲಿಲ್ಲ; ಇವತ್ತು ನಾವು ತೃತೀಯ ಜಗತ್ತಿನ ಅನುಭವಗಳು ಬೇರೆ ಅನ್ನುವುದನ್ನು ಗಮನಿಸಬೇಕಾಗುತ್ತವೆ. ಅದೇ ರೀತಿ ದಲಿತ ಮಹಿಳೆ ಹಾಗೂ ಜಾಗತಿಕ ಮಧ್ಯಮವರ್ಗದ ಮಹಿಳೆಯ ಅನುಭವ ಬೇರೆಯಾಗಿರುತ್ತೆ. ಇವುಗಳನ್ನು ಅಧ್ಯಯನ ಮಾಡುವ ವೈಧಾನಿಕತೆ ಬಗ್ಗೆ ಚರ್ಚೆ ನಡೀತಿದೆ. ಈ ಹಿನ್ನೆಲೆಯಲ್ಲಿ ಕೆಲವರು ಸಂದರ್ಭವನ್ನೂ, ಸನ್ನಿವೇಶವನ್ನು ನಿರ್ದಿಷ್ಟತೆಯನ್ನು ಹೆಚ್ಚಾಗಿ ಗಮನಿಸಬೇಕು ಎನ್ನುತ್ತಿದ್ದಾರೆ. ಅಂತಹ ಅಧ್ಯಯನಗಳನ್ನ ಒಪ್ಪಿಯೂ ನಾವು ಪರಿಮಾಣಾತ್ಮಕ ವಿಧಾನವನ್ನು ಅನುಸರಿಸಬಹುದಲ್ಲ. ಏಕೆಂದರೆ ನಾವು ನಮ್ಮ ವಾದಗಳೊಂದಿಗೆ ಅಂಕಿ ಅಂಶಗಳನ್ನು ನೀಡಿದರೆ ಉಚಿತ. ಅದಕ್ಕೆ ನಾವು ಬಹು ವೈಧಾನಿಕತೆಯನ್ನು ಅಳವಡಿಸಿಕೊಂಡರೆ ಉತ್ತಮ. ಪ್ರಮಾಣತ್ಮಕ, ಅನುಭ ವಾತ್ಮಕ ಸಹಭಾಗಿತ್ವ ಈ ಮೂರನ್ನು ಸೇರಿಸಿ ಮಾಡುವುದು ಉತ್ತಮ. ವಿವಿಧ ವಿಧಾನಗಳ ಸಂಯೋಜಿತ ವೈಧಾನಿಕತೆಯೇ ಮಹಿಳಾ ಅಧ್ಯಯನದ ವೈಧಾನಿಕತೆ.

**ಅನುಭವ ಕಥನ**

# ಗಾಳಮ್ಮನ ಆರಾಧಕಿ ಲಕ್ಷ್ಮೀದೇವಿ

ಎಂ. ಉಷಾ

(ಆಧುನಿಕೋತ್ತರ ಚಿಂತನೆಗಳ ಸಂದರ್ಭದಲ್ಲಿ ಮಾತೃಪ್ರಧಾನ ಸಂಸ್ಕೃತಿ, ಗ್ರಾಮದೇವತೆ ಇತ್ಯಾದಿ ಅಂಶಗಳು ಸ್ತ್ರೀಯ ಶಕ್ತಿ ಸಂಚಯದ ಕೇಂದ್ರಗಳಾಗಬಹುದು ಎಂಬ ಪ್ರಮೇಯವೊಂದು ಸ್ತ್ರೀವಾದದೊಳಗೆ ನಿರೂಪಿತವಾಗುತ್ತಿದೆ. ಕರ್ನಾಟಕದ ಮೂಲೆ ಮೂಲೆಗಳೂ ಗ್ರಾಮದೇವತೆಗಳ ಆವಾಸಸ್ಥಾನಗಳಾಗಿವೆ. ಆದರೆ ಅಪರೂಪಕ್ಕೆ ಕೆಲವು ಭಾಗಗಳಲ್ಲಿನ ಕೆಲವು ದೇವಾಲಯಗಳಲ್ಲಿ ಮಾತ್ರ ಹೆಣ್ಣು ಪೂಜಾರಿಗಳು* ಇಂದಿಗೂ ಕಂಡು ಬರುತ್ತಾರೆ. ಇದು ಪಿತೃಪ್ರಧಾನ ಸಮಾಜದಲ್ಲಿ ಅಪರೂಪದ ದೃಶ್ಯವೆಂದೇ ಪರಿಗಣಿತವಾಗಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಗ್ರಾಮದೇವತೆಗಳು ಇಂದಿನ ಮಹಿಳೆಯರನ್ನು ಸಶಕ್ತೀಕರಿಸಬಲ್ಲವೆ? ಗ್ರಾಮದೇವತೆಯ ಪರಿಸರವು ಮಾತೃಪ್ರಧಾನ ಸಂಸ್ಕೃತಿಯಿಂದ ಪೋಷಿಸಲ್ಪಟ್ಟಿವೆಯೇ ಇತ್ಯಾದಿ ವಿಷಯಗಳ ಕುರಿತ ಕುತೂಹಲದಿಂದ ಬಳ್ಳಾರಿ ಜಿಲ್ಲೆಯ ಗಾಳೆಮ್ಮನ ಗುಡಿ ಎಂಬ ಊರಿನ ಗ್ರಾಮದೇವತೆಯ ಪೂಜೆಯಲ್ಲಿ ತೊಡಗಿರುವ ಲಕ್ಷ್ಮೀದೇವಿ ಎಂಬುವರನ್ನು ಭೇಟಿ ಮಾಡಲಾಯಿತು. ಅವರ ಸಂದರ್ಶನವನ್ನಾಧರಿಸಿ ಈ ಅನುಭವ ಕಥನ ನಿರೂಪಿತವಾಗಿದೆ.-ಸಂ)

ನನ್ನ ತಾಯಿ ಮನೆ ಬಳ್ಳಾರಿ. ಅಂದ್ರೆ ಬಳ್ಳಾರಿ ಹತ್ರ ಅಲ್ಲಿಪುರ ಅಂತ. ಅಲ್ಲಿಂದ ಇಲ್ಲಿಗೆ ಕೊಟ್ಟು ಮದ್ವೆ ಮಾಡಿದಾರೆ. ನಾನು ಒಂಬತ್ತನೇ ಕ್ಲಾಸಿನವರೆಗೆ ಓದಿದೀನಿ. ನಾವು ಐದು ಜನ ಅಕ್ಕತಂಗಿಯರು. ಅವರೆಲ್ಲ ಬೇರೆ ಬೇರೆ ಕಡೆ ಮದ್ವೆಯಾಗಿದಾರೆ. ಒಬ್ಬಳು ದಾವಣಗೆರೆ, ಇನ್ನೊಬ್ಬಳು ಹೈದರಾಬಾದು. ಹೀಗೆ ....ಅವರ ಮನೆಯವರೆಲ್ಲ ನೌಕರಿಲಿದ್ದಾರೆ. ನಾನೊಬ್ಬಳು ಮಾತ್ರ.... ನಮ್ಮದಾದ್ರೆ ಹಳೇ ಸಂಬಂಧ.... ಅಜ್ಜಿ ಕಡೆಯಿಂದ....ನಮ್ಮತ್ತೆ

---

*ಹೆಣ್ಣು ಪೂಜಾರಿಗಳು ಎಂಬುದಕ್ಕೆ ಪೂಜಾರಿಣಿ ಎಂಬ ಪದವು ಬಳಕೆಯಲ್ಲಿದೆ. ಆದರೆ ಈ ಪದವನ್ನು ಸ್ವೀಕರಿಸಿದರೆ ಅದು ಪೂಜಾರಿ ವೃತ್ತಿ ಮೂಲತಃ ಪುರುಷವಾಚಕವಾದುದು, ಸ್ತ್ರೀಯರನ್ನು ಒಳಗೊಳ್ಳುವಾಗ ಪ್ರತ್ಯಯ ಸೇರಿಸಿ ಸಿದ್ಧಿಸಿಕೊಳ್ಳಬೇಕಾಗುತ್ತದೆ ಎಂಬಂತಾಗುತ್ತದೆ. ಆದರೆ ಸ್ತ್ರೀವಾದವು ವೃತ್ತಿಗಳನ್ನು ಪುರುಷವಾಚಕವಾಗಿ ಸ್ವೀಕರಿಸುವುದಕ್ಕೆ ಬದಲಾಗಿ ಅದನ್ನು ಲಿಂಗನಿರಪೇಕ್ಷವಾಗಿಸಿ ನೋಡುವುದಕ್ಕೆ ಯತ್ನಿಸುವುದರಿಂದ ಇಲ್ಲಿ ಹೆಣ್ಣು ಪೂಜಾರಿ ಎಂಬ ಪದ ಬಳಸಲಾಗಿದೆ.

ಒಬ್ಬಳೇ ಇದ್ದಿದ್ದು. ಇನ್ನು ಬಿಟ್ರೆ ಬಳಗ ದೂರ ಆಗಿಬಿಡುತ್ತೆ ಅಂತ ನನ್ನ ಇಲ್ಲಿಗೆ ಕೊಟ್ರು. ಒಂದೊಂದು ಸಾರಿ ನಮ್ಮನೇಲಿ ಅಂತಿರ್‌ಸ್ತಾರೆ.... ನಾನೇನಾದ್ರೂ ಇಲ್ಲಿ ಕಷ್ಟಪಡಬೇಕು ಅಂದ್ರೆ.....ಈ ಸೇವೆ ಯಾರಿಗೆ ಸಿಗಬೇಕು. ಬಾಳಪುಣ್ಯ ಮಾಡಿರಬೇಕು. ಅಮ್ಮನ ಸೇವೆ ಮಾಡಬೇಕಾದ್ರೆ ಅಂತ ಹೇಳ್ತಾರ. .....ಅದೂ ಸರಿ ಬಿಡ್ರಿ ಅಂದ್ಕೊತೀನಿ....ಏನಂದ್ರೆ ಹಿರಿಯರ ಮಾತು ಕೇಳಬೇಕಲ್ವ...ನಂಗೂ ನಿಜ ಅನ್ಸುತ್ತೆ. ಅಮ್ಮನ ಸೇವೆ ಮಾಡುವ ಪುಣ್ಯ ಸಿಕ್ಕಿದೆ.... ಇಲ್ಲೂ ನಾಲ್ಕು ಜನ ಗಂಡು ಮಕ್ಕಳು, ನಮ್ಮ ಮನೆಯವರ ಜೊತೆ ಹುಟ್ಟಿದವರು. ಎಲ್ಲ ಬೇರೆ ಬೇರೆ ಇದೀವಿ..... ಅದರಲ್ಲಿ ಒಬ್ರು ಬ್ಯಾಂಕ್ ಮ್ಯಾನೇಜರ್ ಅವರು ಇಲ್ಲಿ ಬರಲ್ಲ. ಉಳಿದವರಲ್ಲಿ ಇಬ್ಬರು, ಇವರ ಅಣ್ಣ, ಅತ್ತಿಗೆಯರು ಈಗಿಲ್ಲ. ಅವರ ಮಕ್ಕಳು ಸೊಸೆಯರು ಇದ್ದಾರೆ. ಅವರೂ ಪೂಜೆ ಮಾಡ್ತಾರೆ. .... ನನಗೂ ನಾಲ್ಕು ಜನ ಮಕ್ಕಳಿದಾರೆ. ಒಬ್ಬನೇ ಗಂಡು ಮಗ....ಅಲ್ಲಿದಾನೆ ನೋಡಿ ಅವನೆ....ಎಲ್ಲ ಶಾಲೆಗೋಗ್ತಾರೆ.

ಲಕ್ಷ್ಮೀದೇವಿಯ ಮಾತುಗಳು ಬಹಳ ನಿರ್ಲಿಪ್ತವಾಗಿ ಹೊರಟಿದ್ದವು. ಹಾಗಂತ ಆ ಮಾತುಗಳ ಹಿಂದೆ ಉದಾಸೀನವೇನಿರಲಿಲ್ಲ. ಅಸಮಧಾನವೂ ಕೂಡ ಇರಲಿಲ್ಲ. ಹಿರಿಯರು ಏನು ಮಾಡ್ತಾರೆ, ಬದುಕು ಹೇಗೆ ಬರುತ್ತೆ ಹಾಗೆ ಇರುವುದು ಸರಿ ಎಂಬ ಯಥಾರ್ಥ ಧೋರಣೆ ಅವರದು. ಇಷ್ಟೆಲ್ಲ ಮಾತನಾಡುವಾಗ ಅವರ ಗಂಡ ಎದುರಿಗೇ ಕೂತಿದ್ರು. ನನ್ನ ಜೊತೆ ಬಂದಿದ್ದ ಗೆಳೆಯರಾದ ವೆಂಕಟೇಶ ಅವರನ್ನು ಪ್ರತ್ಯೇಕವಾಗಿ ಮಾತಿಗೆ ಹಚ್ಚಿದ್ದರು. ನಾವು ಕುಳಿತಿದ್ದು ದೇವಸ್ಥಾನದ ಆವರಣದಲ್ಲೇ. ಜನ ಬರ್‍ತಿದ್ರು, ಗಂಟೆ ಬಾರಿಸ್ತಿದ್ದು, ನಡುವೆ ನಮ್ಮನ್ನು ಕುತೂಹಲದಿಂದ ನೋಡ್ತಿದ್ರು. ಅವರ ನಾಲ್ಕು ಜನ ಮಕ್ಕಳು ಅಲ್ಲೇ ಸುತ್ತುವರಿದು ನಿಂತಿದ್ರು. ದೊಡ್ಡ ಮಗಳಿಗೆ ಸ್ವಲ್ಪ ಅರ್ಥ ಆಗ್ತಿತ್ತು ಅನ್ಸುತ್ತೆ. ಅವರಮ್ಮನ್ನೂ ನನ್ನನ್ನೂ ನೋಡ್ತಾ ಮಂಡಿಯೂರಿ ಕುಳಿತು ಗ್ರಹಿಸಲು ಪ್ರಯತ್ನಿಸುತ್ತಿದ್ದಳು. ...ಈ ವಾತಾವರಣ ಅವರ ಮಾತುಗಳ ಮೇಲೆ ಪ್ರಭಾವ ಬೀರಿರಬಹುದೆ...? ಏನೂ ಹೇಳೋಕಾಗಲ್ಲ. ಆದ್ರೆ ನನ್ನ ಗಮನಕ್ಕೆ ಬಂದ ಅಂಶ ಅಂದ್ರೆ ಗಂಡ ಎದುರಿಗಿದ್ದದ್ದು ಅವರಲ್ಲಿ ಯಾವ ವಿಶೇಷ ಕಾಳಜಿಯನ್ನು ಮೂಡಿಸಿರಲಿಲ್ಲ ಅನ್ನೋದು. ಗಂಡನಿಗೂ ಅಷ್ಟೆ. ಹೆಂಡತಿ ಮಾತಿನ ಬಗ್ಗೆ ತುಂಬಾ ಕುತೂಹಲವೇನಿರಲಿಲ್ಲ. ಆದ್ದರಿಂದಲೇ ಅವರು ಹೆಂಗಸರು ಏನೋ ಮಾತಾಡ್ಕೊಳಲ್ಲಿ ಅನ್ನು ಧೋರಣೆಯಲ್ಲಿ ತಮ್ಮ ಮಾತಿಗೆ ತೊಡಗಿದ್ದರು. ನನ್ನ ಜೊತೆಗಿದ್ದ ವೆಂಕಟೇಶ ಅವರಿಗೆ ಗೊತ್ತಿದ್ದರಿಂದ ಬಹುಶಃ ನಾನು ರಿಲಯಬಲ್ ಅಂತ ಅವರು ಭಾವಿಸಿರಲಿಕ್ಕೂ ಸಾಕು. ... ಇದೆಲ್ಲ ನನ್ನ ಊಹೆ ಅಷ್ಟೆ. ನನ್ನ ಧಾಟಿಯಾದರೂ ಅಷ್ಟೇ ಇತ್ತು. ಲಕ್ಷ್ಮಿಯನ್ನು ಕೆದಕುವ, ಕಲಕುವ ಮೂಲಕ ರೋಚಕವಾದೊಂದು ಕಥನ ನಿರೂಪಿಸುವ ವಿಶೇಷ ಉದ್ದೇಶದ್ದೇನಾಗಿರಲಿಲ್ಲ.

ಮಹಿಳೆಯರ ಬದುಕನ್ನು ಒಂದು ಬಗೆಯ ರೋಚಕತೆಯಲ್ಲಿ ಅನುಭವಿಸುವ ಗುಣ ಮಹಿಳಾ ಅಧ್ಯಯನದಲ್ಲೂ ಹಾಸುಹೊಕ್ಕಾಗಿದೆಯೆನಿಸುತ್ತದೆ. ವಿಶಿಷ್ಟ ತೊಂದರೆಗೆ ಒಳಗಾದವರು, ಅದನ್ನು ಮೆಟ್ಟಿ ಮೇಲೆದ್ದವರು. ವಿಶಿಷ್ಟ ಸಾಧನೆ ಮಾಡಿದವರು ಇಂತಹ ಕಥನಗಳತ್ತ ಆಸಕ್ತಿ ಹೆಚ್ಚು. ಲೇಖಕಿಯರು, ನಟಿಯರು, ವಿಜ್ಞಾನಿಗಳು, ರಾಜಕಾರಣಿಗಳು, ಪರಿತ್ಯಕ್ತೆಯರು, ವಿಚ್ಛೇದಿತೆಯರು ..... ಹೀಗೆ ವಿಶೇಷಣದಲ್ಲಿ ಮುಂದುವರಿಯುತ್ತದೆ ಈ ಕಥನಕ್ರಮ. ಆದರೆ ಲಕ್ಷ್ಮೀದೇವಿ ಈ ಧಾಟಿಗೆ ನಿಲುಕುವವರಾಗಿರಲಿಲ್ಲ, ಸ್ಪಂದಿಸುವಂತೆಯೂ ಕಾಣಲಿಲ್ಲ. ಕುಟುಂಬದ ಬಗ್ಗೆ, ತನ್ನ ಸುತ್ತಲ ಜನರ ಬಗ್ಗೆ ತಾನು ಭಿನ್ನಾಭಿಪ್ರಾಯ ಹೊಂದಬಹುದು ಅನ್ನುವ ಕಲ್ಪನೆಯೂ ಇಲ್ಲದ, ಹಾಗೆ

ತಾನೊಂದು ಭಿನ್ನ ವೃತ್ತಿಯನ್ನು ನಿರ್ವಹಿಸುತ್ತಿದ್ದೇವೆ ಅನ್ನೋ ಹೆಮ್ಮೆಯೂ ಇಲ್ಲದೆ ಬಹಳ ಸಾಮಾನ್ಯವಾಗಿ ಕಾಣುತ್ತಿದ್ದರು. ನಾನವರನ್ನು ಮಾತಾಡಿಸೋದಕ್ಕೆ ಹೋದ ತಕ್ಷಣ ಉತ್ಸಾಹದಿಂದ ಬರಮಾಡಿಕೊಂಡು, ಮೂಲೆಯಲ್ಲಿ ಕೂರಿಸಿ 'ಗಾಳಮ್ಮನ ಬಗ್ಗೆ ಹೇಳಬೇಕೆನ್ರಿ ನಿಮಗೆ' ಅಂತ ಪಟಪಟನೆ ಹೇಳತೊಡಗಿದರು. 'ಗಾಳಮ್ಮನ ಬಗ್ಗೆ ಅಲ್ಲ, ನಿಮ್ಮ ಬಗ್ಗೆ' ಅಂತ ನಾನು ತಿದ್ದುವ ಪ್ರಯತ್ನ ಮಾಡಲಿಲ್ಲ. ಏಕೆಂದರೆ ಗಾಳಮ್ಮನಿಂದಲೇ ಲಕ್ಷ್ಮೀದೇವಿಯನ್ನು ತಲುಪುವ ದಾರಿ ನಂತರ ಸಿಗಬಹುದು ಅನ್ನೋ ನಂಬಿಕೆ ನನಗಿತ್ತು. 'ಹೌದು, ಹೇಳಿ' ಅಂದೆ. ಅವರು ಹೇಳಲಾರಂಭಿಸಿದರು. ಹಾಗಾಗಿಯೇ ಈ ಅನುಭವ ಕಥನ ಗಾಳೆಮ್ಮ ಲಕ್ಷ್ಮಿಯರ ನಡುವೆ ಹೆಣೆದುಕೊಂಡು ಬಿಟ್ಟಿದೆ. ಈ ಕಥನದಲ್ಲಿ ರೋಚಕತೆಯೇನಿದ್ದರೂ ಗಾಳಮ್ಮನದು. ಲಕ್ಷ್ಮಿಯದೇನಿದ್ದರೂ ಈ ದೇಶದ ಕೋಟ್ಯಾಂತರ ಹೆಣ್ಣು ಮಕ್ಕಳಂತೆ ತಣ್ಣನೆಯದು. ಲಕ್ಷ್ಮೀದೇವಿಗೆ ತನ್ನ ಬದುಕಿನ ಯಾವ ದಿನವನ್ನೂ, ಯಾವ ಘಟನೆಯನ್ನೂ ವಿಶೇಷವಾದದ್ದು ಅಂತ ಪರಿಭಾವಿಸುವ ಮಾದರಿಯ ಸುಳಿವೂ ಕೂಡ ಇದ್ದಂತಿಲ್ಲ. ಹೇಳಬೇಕಾದ್ದು, ಕೇಳಬೇಕಾದದ್ದು ಏನಾದರೂ ಇದ್ದರೆ ಅದು ಗಾಳಮ್ಮನದೇ ಎಂಬ ಅಚಲ ನಂಬಿಕೆ. ಹೆಣ್ಣಾಗಿರುವುದರ ಬಗ್ಗೆ ಹಳಹಳಿಕೆ-ಹೆಮ್ಮೆ ಏನೂ ವಿಜೃಂಭಿಸದ ತಣ್ಣನೆಯ ಚಿಂತನಾಕ್ರಮ. ಇದು ಮಹಿಳಾ ಅಧ್ಯಯನದ ಮುಖ್ಯಧಾರೆಗೆ ಬರಬೇಕು. 'ನಾನ್ ಫೆಮಿನಿಸ್ಟ' ನೆಲೆಯೇ ಈ ಸಮಾಜದ ಮಹಿಳೆಯರ ಅಧಿಕೃತಧಾರೆ. ಬಹುಸಂಖ್ಯಾತ ನಿಲುವು. ಅದನ್ನೇ ಇಲ್ಲಿ ಪ್ರಸ್ತುತಗೊಳಿಸಲಾಗಿದೆ.

.....ನಾನು ಮದುವೆ ಆಗೋ ಹೊತ್ತಿಗಾಗಲೇ ಇಲ್ಲಿ ಹೆಂಗಸರು ಪೂಜೆ ಮಾಡಿದ್ರು. ಮೂರು ತಲೆಮಾರಿಂದ ಮಾಡ್ತಿದೀವ್ರಿ. ಅದಕ್ಕೆ ಮುಂಚೆನೂ ಇಲ್ಲಿ ಗುಡಿ ಇತ್ತು. ಆದ್ರೆ ಬಾಳ ಸಣ್ಣದು. ನಮ್ಮ ಅಜ್ಜಾವರೇ ಪೂಜೆ ಮಾಡ್ತಿದ್ರಂತೆ. ಇಲ್ಲೆಲ್ಲ ಕಾಡಿತ್ತಂತೆ. ಬೆಳಗ್ಗೆ ಬಂದು ಒಂದು ಹೊತ್ತು ಪೂಜೆ ಮಾಡಿ ಹೋಗಿ ಬಿಡ್ತಿದ್ರಂತೆ. ಇಲ್ಲೇ ಮಲಪನಗುಡಿ ಇದ್ಯಲ್ಲ ಅಲ್ಲಿದ್ರಂತೆ. ಆದ್ರೆ ನಾನು ಬರೋ ಹೊತ್ತಿಗೆ ಇಲ್ಲೇ ಬಂದು ನೆಲೆಸಾಗಿತ್ತು. ....ಇಲ್ಲಿ ಹೆಂಗಸ್ರು ಪೂಜೆ ಮಾಡೋಕ್ಕೆ ಶುರು ಮಾಡಿದ್ದೇ ಒಂದು ಕಾರಣಕ್ಕೆ. ಇವರ ಅಜ್ಜಿ ಇದ್ರಲ್ಲ ಅವರ ಕಾಲದಲ್ಲಿ ಅವರಿಗೆ ಒಂದು ಸಾರಿ ಅಮ್ಮ ಕನಸಲ್ಲಿ ಬಂದು ನೀನು ಮುತ್ತುಕಟ್ಟಿಸ್ಕೊ ಬೇಕು. ...ನೀನೇ ನಂಗೆ ಪೂಜೆ ಮಾಡಬೇಕು ಅಂತ ಅಂದ್ಲಂತೆ. ಸರಿ ಅಮ್ಮ ಆಜ್ಞೆ ಮಾಡ್ಲಿದ್ಲಲ್ಲ ಅಂತ ಕಟ್ಟಿಸಿಕ್ಕೊಂಡು ಪೂಜೆ ಮಾಡೋಕೆ ಶುರು ಮಾಡಿದ್ರು. ಅಷ್ಟೊತ್ತಿಗಾಗಲೇ ಅವರಿಗೆ ವಯಸ್ಸಾಗಿತ್ತು. ಮಕ್ಕಳೆಲ್ಲ ದೊಡ್ಡವರಾಗಿದ್ರು. ಹಂಗಾಗಿ ಗುಡಿ ಕೆಲ್ಸ ಮಾಡ್ಕೊಂಡು ಇಲ್ಲೇ ಉಳ್ಕೊಂಡ್ರಂತೆ. ...ಮನೆಗೂ ಹೋಗ್ತಿದ್ರು. ಆದ್ರೆ ಸಂಸಾರ ಅದೂ ಇದೂ ಅಂತ ಎಲ್ಲ ಬಿಟ್ಟಿದ್ರು. ಅಮ್ಮನ ಸೇವೆ ಎಷ್ಟೋ ಅಷ್ಟು. ಆ ಮೇಲೆ ಪುನಃ ಹಂಗೇ ಸೊಸೆಗೆ ಅಂದ್ರೆ ಇವ್ರ ಅತ್ತಿಗೆಗೂ ಆಯ್ತು. ಅವರು ಮುತ್ತುಕಟ್ಟಿಸಿಕೊಂಡು ಅಮ್ಮನ ಸೇವೆ ಮಾಡ್ತಿದ್ರು. ...ಅವರಿಬ್ಬರೂ ಈಗಿಲ್ಲ ಬಿಡಿ. .....ಈಗೊಂದು ಐದು ವರ್ಷದ ಕೆಳಗೆ ತೀರಿಕೊಂಡ್ರು. ...ಆಮೇಲೆ ಯಾರು ಮುತ್ತುಕಟ್ಟಿಸಿಕೊಂಡಿಲ್ಲ. .....ಒಂದು ಸಾರಿ ನಾವೇ ವಿಶೇಷ ಪೂಜೆ ಮಾಡಿಸಿ ಹಂಗೆಲ್ಲ ಕನಸಲ್ಲಿ ಬರಬೇಡವ್ವ. ಇನ್ನು ಎಲ್ಲ ಚಿಕ್ಕವ್ರು. ಮಕ್ಕಳು ಮರಿ ಇರೋವ್ರು. ಕಷ್ಟ ಆಗುತ್ತೆ ಅಂತ ಕೇಳಿಕೊಂಡ್ವಿ... ಆಗಿಂದ ಅದೆಲ್ಲ ಏನಿಲ್ಲ....ಸುಮ್ನ ಪೂಜೆ ಮಾಡ್ತೀವಿ.

ಮೇಲಿನ ಮಾತುಗಳು ಒಂದು ಅಂಶವನ್ನು ಸ್ಪಷ್ಟಪಡಿಸಿತ್ತು. ನಾನು ಭಾವಿಸಿದ್ದ ಮಾತೃಪ್ರಧಾನ ಸಂಸ್ಕೃತಿಯ ನೆಲೆ ಇಲ್ಲಿ ಕಂಡು ಬರುವುದಾಗಿರಲಿಲ್ಲ. ಹಾಗೆ ದೇವದಾಸಿ ಪದ್ಧತಿಯ ನೆಲೆ ಕೂಡ ಇದಾಗಿರಲಿಲ್ಲ. ಲಕ್ಷ್ಮೀ ವಿವರಿಸುತ್ತಿದ್ದ ಪ್ರಕಾರ ಕೌಟುಂಬಿಕ ಜೀವನ ನಡೆಸಿ ವಯಸ್ಸಾದ ನಂತರ ದೇವರ ಸೇವೆಗಾಗಿ ಮುತ್ತು ಕಟ್ಟಿಸಿಕೊಂಡಿದ್ದರು ಅವರ ಹಿರಿಯರು. ಈ ಕುರಿತು ಅವರು ಮುಂದುವರಿಸಿದ ಮಾತುಗಳು ಇನ್ನೂ ಕುತೂಹಲಕಾರಿಯಾಗಿದ್ದವು.

.....ಇದೆಲ್ಲ ಐದು ವರ್ಷದ ಹಿಂದಿನದ್ರಿ. ಈಗ ಅವರ್‍ಯಾರು ಇಲ್ಲ. ಆಮೇಲೆ ಅಂತದ್ದೇನೂ ಆಗಿಲ್ಲ. ದೇವ್ರು ಮೈಮೇಲೆ ಬಂದಿಲ್ಲ. ಆದ್ರೆ ಆಗಿಂದ ಬಂದ ರೂಢಿ. ಬೇರೆ ಯಾರು ಪೂಜೆ ಮಾಡಿದ್ರು ಆಗಲ್ಲ. ಅಮ್ಮಂಗೆ ನಾವೇ ಮಾಡಬೇಕ್ರಿ.... ನಾನೇ ಮಾಡ್ತೀನಿ... ಬೆಳಗ್ಗೆ ನಾಲ್ಕು ಗಂಟೆಗೆ ಎದ್ದು ಮನೆ ಕೆಲ್ಸ ಮುಗಿಸಿ ಆರು ಗಂಟೆಗೆಲ್ಲ ಬಂದು ಪೂಜೆ ಮಾಡಿ ವಾಪಸ್ಸು ಹೋಗಿ ಬಿಡ್ತೀವಿ. ಕೆಲ್ಸನೂ ಮನೆ ಮಾಡಬೇಕಲ್ಲ. ಹುಡುಗರನ್ನು ಸ್ಕೂಲಿಗೆ ಕಳುಹಿಸಬೇಕು.....ಕೆಲ್ಸನೂ ಎಲ್ಲ ಮುಗಿಸಿ ೯ ಗಂಟೆಗೆ ಪುನಃ ಗುಡಿಗೆ ಬರ್ತೀವಿ. ಶುಕ್ರವಾರ, ಮಂಗಳವಾರ ಮಾತ್ರ ಮನೆಗೆ ಹೋಗೋಕಾಗಲ್ಲ. ಜನ ಜಾಸ್ತಿ. ಅವತ್ತೊಂದಿನ ಕಷ್ಟ ಆಗುತ್ತೆ. ಮೊದಲಾದ್ರೆ ಅತ್ತೆ ಮನೇಲಿರ್ತಿದ್ರು... ಈಗ ಹುಡುಗರೇ ಹೊಂದ್ಸಿಕೊಳ್ತಾರೆ....ಕಷ್ಟ ಅದ್ರೂ ಅಮ್ಮನಿಗೆ ಕೋಪ ಬರದಿರಲಿ ಅಂತ ನಾನೇ ಮಾಡ್ತೀನಿ. ಅದ್ರೆ ತಿಂಗಳ ಮೈಲಿಗೆ ಆದಾಗ ಮಾತ್ರ ಗಂಡಸರೇ ಮಾಡ್ತಾರ್‍ರಿ.... ಈ ಅಮ್ಮನಿಗೂ ಮೈಲಿಗೆ ಆಗಬಾರದ್ರಿ... ಆದ್ರೆ ಈಗೇನಾಗಿದೆ. ಅಣ್ಣ ತಮ್ಮಂದಿರೆಲ್ಲ ಪೂಜೆನ ವಾರದ ಲೆಕ್ಕದಲ್ಲಿ ಹಂಚಿಕೊಂಡಿರೋದ್ರಿಂದ ಅದರದಷ್ಟು ತೊಂದರೆ ಇಲ್ರಿ. ಒಂದೊಂದು ವಾರ ಒಬ್ಬೊಬ್ರಿಗೆ ಅಲ್ವ... ಹಂಗೇ ಅಡ್ಜಸ್ಟ್ ಆಗಿ ಹೋಗುತ್ತೆ..... ಇಲ್ಲಿ ಹೆಂಗಸ್ರೆ ಪೂಜೆ ಮಾಡಬೇಕ್ರಿ. ಯಾಕಂದ್ರೆ ಅಮ್ಮಂಗೆ ಅಲಂಕಾರ ಜಾಸ್ತಿ. ಬೇರೆ ಕಡೆ ಬೆಳಗ್ಗೆ ಅಲಂಕಾರ ಮಾಡಿದ್ರೆ ಮುಗೀತು. ಇಲ್ಲಿ ನಾವು ಹಂಗಲ್ಲರಿ. ಭಕ್ತರು ಕೊಟ್ಟ ಕೊಟ್ಟಂಗೆಲ್ಲ ಮಾಡ್ತಾನೇ ಇರ್ತೀವಿ.... ಇದೆಲ್ಲ ಮಾಡಕ್ಕೆ ಹೆಂಗಸರೇ ಸರಿ....ಗಂಡಸರಿಗೆ ಚೆನ್ನಾಗಿ ಅಲಂಕಾರ ಮಾಡಕ್ಕೆ ಆಗಲ್ಲರಿ....ಅವರು ಮಾಡೋದೇ ಬೇರೆ ನಾವು ಮಾಡೋದೇ ಬೇರೆ.....ನಾನು ಎರಡು, ಮೂರು ಹೆಣ್ಣುಮಕ್ಕಳು ವಾರದ ದಿನ ಒಳಗಿರ್ತೀವ್ರಿ.... ಗಂಡಸರು ಹೊರಗಿರ್ತಾರ್‍ರಿ. .... ಇದು ಹಳ್ಳಿ ದೇವ್ರು ನೋಡಿ....ಹಳ್ಳಿ ಜನ ಜಾಸ್ತಿ. ಬ್ಯಾಟೆ, ಕೋಳಿ ಅಂತ ಮಾಡ್ತಾರ್‍ರಿ... ಅದೆಲ್ಲ ನಾವು ಮಾಡೋಕೆ ಹೋಗಲ್ಲ. ... ಅದು ನಮಗೆ ಸರಿ ಬರಲ್ಲರೀ. ಅದೆಲ್ಲ ಹೊರಗೆ ಗಂಡಸರು ಮಾಡ್ಕೊತಾರೆ. ನಾವೇನಿದ್ದರೂ ಒಳಗಿನ ಕೆಲಸ. ...ನಮಗೆ ಬರಲ್ಲ ಅಂತಲ್ರಿ... ಅಕಸ್ಮಾತ್ ಅವರಿರಲಿಲ್ಲ ಅಂದ್ರೆ ಮತ್ತೆ ನಾವೇ ಹೋಗಿ ನಿಲ್ತೀವ್ರಿ... ಹಳ್ಳಿ ಜನ ಕೇಳಬೇಕಲ್ರಿ.

ಹೀಗೆ ವಿವರಿಸುತ್ತ ಲಕ್ಷ್ಮೀದೇವಿಯೇ ಪಿತೃಪ್ರಧಾನ ನಂಬಿಕೆಗಳನ್ನು, ನಿಯಮಗಳನ್ನು ನನ್ನ ಮುಂದೆ ತೆರೆದು ಇಡ್ತಾ ಇದ್ರು. ಕುಟುಂಬದಲ್ಲಿ ಹೇಗೆ ಒಳ-ಹೊರ ವಿಭಜನೆ ಇದೆ. ಅದನ್ನೇ ಮುಂದುವರಿಸಿ ಇಲ್ಲೂ ಮಾಡಿಕೊಂಡಿರುವುದನ್ನು ವಿವರಿಸಿದ್ರು. ಈಗ ನನಗೆ ಅವರ ಗಂಡನ ನಿರಾಳತೆ, ಲಕ್ಷ್ಮೀಯ ನಿರ್ಲಿಪ್ತತೆ ಅರ್ಥವಾಗಲಾರಂಭಿಸಿತು. ಗಾಳಮ್ಮ, ಗಾಳಮ್ಮನ ಆರಾಧಕಿ ಇಬ್ಬರೂ ಇರುವ ವ್ಯವಸ್ಥೆಯೊಳಗೆ ಇದ್ದರು. ದೇವಾಲಯ ಕುಟುಂಬದ ಆಸ್ತಿ. ಆದಾಯ ಮೂಲ. ಯಾವುದೋ

ಕಾರಣದಿಂದಾಗಿ ಹೆಂಡತಿ ಈ ಕೆಲಸದಲ್ಲಿ ಕೈ ಹಾಕಬೇಕಾಗಿದೆ. ಗಂಡ ಹೆಂಡತಿಯರಿಬ್ಬರೂ ಸೇರಿ ಅದನ್ನು ಆರ್ಜಿಸಿಕೊಳ್ಳಬೇಕು. ದಾಯಾದಿಗಳೊಂದಿಗೆ ಹಂಚಿಕೊಳ್ಳಬೇಕು ಎಂಬ ಪ್ರಜ್ಞೆಯ ಒಳಗೆ ಲಕ್ಷ್ಮಿ ತನ್ನ ವೃತ್ತಿಯನ್ನು ಗ್ರಹಿಸಿದ್ದರು. ಈ ಗ್ರಹಿಕೆಯ ಒಳಗಿರುವವರೆಗೆ ಪುರುಷ ಭಯ ಪಡಬೇಕಾದುದೇನಿಲ್ಲ. ಗಾಳಮ್ಮನ ಮಹಿಮೆಯನ್ನು ಈ ಜನ ಭಾವಿಸಿರುವುದು, ಲಕ್ಷ್ಮಿ ವಿವರಿಸುತ್ತಿದ್ದದೂ ಅದೇ ನೆಲೆಯಲ್ಲಿತ್ತು. 'ಅಮ್ಮನ ಮಹಿಮೆ ಬಾಳಾರೀ.... ಮದುವೆ ಆಗದವರು ಬಳೆ ತೊಡಿಸಿ ಬೇಡಿಕೊಳ್ಳುತ್ತಾರ್ರಿ. ಮಕ್ಕಳಾಗದವರು ಕುಪ್ಪ ಕೊಡ್ತೀನಿ ಅಂತ ಹರಸ್ಕೊತ್ತಾರ್ರಿ.... ಅದರ ಬಗ್ಗೆ ಭಕ್ತರಿಗೆ ಬಾಳ ನಂಬೀರಿ...' ಹೀಗೆ ಪಿತೃಪ್ರಧಾನ ಬಯಕೆಗಳೇ ಭಕ್ತ ಬಯಕೆಗಳಾಗಿದ್ದವು. ಅದನ್ನು ಈಡೇರಿಸುವುದೇ ಈ ದೇವಿ ಮಹಾತ್ಮೆಯಾಗಿತ್ತು. ಲಕ್ಷ್ಮೀದೇವಿಯ ಬಾಯಲ್ಲಿ ಕೂಡ ಅವಳ ಮಹಿಮೆ ಹೀಗೆ ವರ್ಣಿತವಾಗುತ್ತಿತ್ತು.

'ಈ ಗಾಳಮ್ಮ ಜೀನಗಾರ್ರು ಮಾಡಿದ್ರಿ.... ಜೀನಗಾರ್ರು ಅಂದರೆ ಕೆತ್ತನೆಗಾರರು... ಅವರೇ ಮಾಂಗಲ್ಯ ಎಲ್ಲ ಮಾಡಿ ಕಳ್ಸಿಬಿಡ್ತಾರ್ರಿ. ಅಂದ್ರೆ ಯಾರು ಕೆತ್ತನೆ ಮಾಡಿರ್ತಾರೆ ಅವರೇ ಈ ಅಮ್ಮನ ಮದ್ವಿ ಆದಂಗೆ. ಮತ್ತೆ ಈ ಅಮ್ಮಗ ಬೇರೆ ಮದ್ವಿಲ್ಲರಿ... ಇವರು ೧೪ ಜನ ಅಕ್ಕತಂಗಿಯರು ಗಾಳಮ್ಮ, ಹುಲಗಮ್ಮ, ಮಾರಮ್ಮ, ಸಂಕಲಮ್ಮ, ಬಸರಮ್ಮ..... ಹೀಗೆ ಇವರಿಗೆ ಭಕ್ತರೇ ಆಸ್ತಿ. ಅವರಲ್ಲಿ ಬಸರಮ್ಮ ಮಾತ್ರ ಆಸ್ತಿ ಬೇಕಂತಾಳ್ರಿ. ಅವಳಿಗೆ ಆಸ್ತಿ ಬಿಟ್ಟಾರ್ರಿ.... ಹುಲಿಗಮ್ಮ ಮಾತ್ರ ಭಕ್ತರು ಬಾಳಬೇಕು ಅಂದಾಳ್ರಿ. ...ಅದಕ್ಕೆ ಹುಲಿಗಮ್ಮನಿಗೆ ಭಕ್ತರು ಜಾಸ್ತಿ... ಈ ಬಸರಮ್ಮ ಹುಲಿಗಮ್ಮಗೆ ಬೇರೆ ಬೇರೆ ಗುಡಿ ಮಾಡಿದಾರ್ರಿ. ಮಧ್ಯದಲ್ಲಿ ರೈಲ್ವೆ ಗೇಟ್ ಇದೆ. ಗಂಡು ಮಕ್ಕಳು ಇಲ್ದೆ ಇರೋದ್ರಿಂದ ಆಸ್ತಿಗೆ ಹೆಣ್ಣುಮಕ್ಕಳ ಜಗಳ ಇಲ್ಲಿ.... ಗಾಳಮ್ಮ ಅಂದ್ರೆ ಗಾಳಿ ಅವತಾರದಿಂದ ಮಕ್ಕಳ ಮೇಲೆ ಬರ್ತಾಳಲ್ರಿ ಅವಳು.... ಮೊದಲು ಹುಲಿಗಮ್ಮಗೂ ಹೆಂಗಸರು ಪೂಜೆ ಮಾಡ್ತಿದ್ದರಂತೆ ಆದ್ರೆ ಗೌರ್‌ಮೆಂಟ್ ಸೇರಿದಾಗಿನಿಂದ ಅದು ನಿಂತೋಯ್ತುರಿ.... ನಮ್ಮ ಮನೆದೇವ್ರು ಗಾಳಮ್ಮಾರಿ..... ಕಳಶ ಎಲ್ಲ ಇಟ್ಟು ಮನೇಲೂ ಪೂಜೆ ಮಾಡ್ತೀವಿ. ಜೊತೆಗೆ ಮಂಜುನಾಥ, ಶೃಂಗೇರಿ ಶಾರದಾ ಅಂತಾ ಪೋಟೋಗಳನ್ನು ಇಟ್ಟು ಪೂಜೆ ಮಾಡ್ತೀವಿ. ಅಲ್ಲಿಗೂ ಭಕ್ತಿ ಇದೆ... ಆದ್ರೆ ಹುಲಿಗಮ್ಮನಿಗೆ ಮಾತ್ರ ನಾವು ಹೋಗಲ್ಲ.... ಯಾಕೆಂದ್ರೆ ಇವರಿಬ್ಬರಿಗೂ ಆಗಲ್ರಿ ಅಂದ್ರೆ ಗಾಳಮ್ಮನಿಗೂ-ಹುಲಿಗಮ್ಮನಿಗೂ. ಅವರಿಬ್ಬರಿಗೆ ಮೊದಲಿನಿಂದಲೂ ಜಗಳ ಅಂತೇರಿ.. ಅಕ್ಕತಂಗೀರ ಜಗಳಾರಿ... ಹೋಗಬಾರದು ಅಂತ ಪದ್ಧತಿ ಆಗಿದೆ. ನಾವು ಈಗ ಅಲ್ಲಿಗೋದ್ರೆ ಏನಾದ್ರು ಕೆಟ್ಟದಾಗುತ್ತೆ. ಅದಕ್ಕೆ ನಾವು ಹೋಗಲ್ಲ.... ಇಲ್ಲಿಗೆ ಪೂಜೆಗೆ ಬರ್ತಾರಲ್ಲ ಭಕ್ತರೂ ಅವರೂ ಹೋಗಲ್ಲರಿ. ಹಂಗೇನಾದ್ರೂ ಹೋಗಬೇಕಾದ್ರೆ ಇಲ್ಲಿಂದ ಏನೂ ತಗೊಂಡೋಗಲ್ಲ... ಇಲ್ಲಾಂದ್ರೆ ಅಲ್ಲಿ ಮೊದಲು ಹೋಗಿ ಪೂಜೆ ಮಾಡಿಸಿ ಆಮೇಲೆ ಇಲ್ಲಿಗೆ ಬರಬೇಕು ಅಷ್ಟೆ... ೧೪ ಜನ ಅಕ್ಕತಂಗಿಯರಲ್ಲೆಲ್ಲ ಇವಳು ಸೋಲಲ್ಲರಿ. ಭಕ್ತರು ಮೊದಲೇ ಅಲ್ಲಿಗೆ ಹೋಗಿ ಬಂದ್ರೆ ಸರಿ. ಇಲ್ಲಿಗೆ ಬಂದ ಮೇಲೆ ಇವಳು ಕಳಿಸಲ್ಲ... ಗಾಳಮ್ಮ ಅಲ್ಲವಾ ಇವಳು ಸಡನ್‌ಗೆ ಎಲ್ಲ ಮಾಡಿ ಬಿಡ್ತಾಳೆ. ಬಾಳ ಜೋರು ಈ ಯಮ್ಮ. ಹುಲಿಗಮ್ಮ ಸ್ವಲ್ಪ ಶಾಂತರಿ... ಈ ಗಾಳಮ್ಮನಿಗೆ ಗಂಡು ದೇವ್ರು ಸರಿಬರಲ್ಲರಿ.

ಮೊದಲಿನಿಂದಲೂ ಹಾಗೇ ಬಂದಿದೆ. ವರ್ಷಕ್ಕೊಮ್ಮೆ ಬನ್ನಿ ಮಹಾಂಕಾಳಿ ಜಾತ್ರೆಯಲ್ಲಿ ಮಾತ್ರ ಅಕ್ಕತಂಗಿರೆಲ್ಲ ಸೇರ್ತಾರಿ. ಆಗ ಮಾತ್ರ ಅಲ್ಲಿಗೆ ಆಂಜನೇಯನೂ ಬರ್ತಾನೆ. ಅವನೂ ಮಾರುತಿ ನೋಡ್ರಿ ಅದಕ್ಕೆ... ಅದ್ರೂ ಈ ಯಮ್ಮ ಯಾವಾಗ್ರೂ ಒಬ್ಬಳೇರಿ... ಅಕ್ಕತಂಗಿ ಯರನ್ನೂ ಸೇರಲ್ಲ.

ಗಾಳಮ್ಮನ ಮಹಿಮೆಯನ್ನು ಈ ರೀತಿ ವರ್ಣಿಸುವ ನಡುವೆ ಎದುರಿಗಿದ್ದ ಅವರ ಗಂಡ ತಮ್ಮದೇ ಆದ ವ್ಯಾಖ್ಯಾನವೊಂದನ್ನು ನೀಡಿದರು. 'ಆಸ್ತಿ ಇದ್ದಲ್ಲಿ ಜಗಳ ಅಲ್ಲೇನ್ರಿ. ಗಂಡು ಮಕ್ಕಳಿಲ್ಲ ಅಂದ ಮೇಲೆ ಅವರೂ ಆಡ್ತಾರಲ್ರಿ. ನಾವು ಮನೇಲಿ ಆಡೋ ಹಾಗೆ. ಭಕ್ತರೇ ಅವರ ಆಸ್ತೀರಿ....' ಈ ಮಾತುಗಳು ಪಿತೃಪ್ರಧಾನತೆಯ ಒಳಗೇ ಹೆಣ್ಣು ದೇವತೆಗಳನ್ನು ಗ್ರಹಿಸುವ ಮಾದರಿಯೊಂದರ ಸುಳಿವನ್ನು ನೀಡುವುದಾಗಿತ್ತು. ಆದರೆ ಇದಕ್ಕೆ ಪರ್ಯಾಯವಾದ ವ್ಯಾಖ್ಯಾನವೊಂದು ಲಕ್ಷ್ಮೀದೇವಿಯ ಬಳಿ ಇರಲಿಲ್ಲ. ಆದ್ದರಿಂದಲೇ ಲಕ್ಷ್ಮೀದೇವಿ ಗಾಳಮ್ಮನನ್ನು, ತನ್ನ ವೃತ್ತಿಯನ್ನು ಭಿನ್ನವಾಗಿ ಗ್ರಹಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಈ ಸ್ಥಿತಿಯಲ್ಲಿ ಹೆಣ್ಣು ದೇವತೆ, ಮಾತೃಪ್ರಧಾನತೆ, ಸಬಲೀಕರಣ ಇತ್ಯಾದಿಗಳು ಬಹಳ ದೂರದ ನಿರೀಕ್ಷೆಗಳು ಎಂಬ ಅಂಶ ಬಲಗೊಂಡಂತೆನಿಸುತ್ತಿತ್ತು.

●

ಲೇಖನಗಳು

## ವ್ಯವಸ್ಥೆ ಮತ್ತು ಮಹಿಳಾ ಬರಹ*

ಸಬೀಹ ಭೂಮಿಗೌಡ

ವ್ಯವಸ್ಥೆ ಎನ್ನುವಾಗ ಅದು ಸಾಮಾಜಿಕ ವ್ಯವಸ್ಥೆಯಾಗಿರಬಹುದು, ಧಾರ್ಮಿಕ, ರಾಜಕೀಯ, ಆರ್ಥಿಕ, ಆಡಳಿತಾತ್ಮಕ ಮುಂತಾಗಿ ವಿವಿಧ ವ್ಯವಸ್ಥೆಗಳೂ ಆಗಿರಬಹುದು. ಸಮಾಜ ಜೀವಿಯಾದ ಪ್ರತಿಯೋರ್ವರ ವ್ಯಕ್ತಿತ್ವ ನಿರ್ಮಾಣದಲ್ಲಿ ಈ ಎಲ್ಲ ವ್ಯವಸ್ಥೆಗಳ ಪಾಲೂ ಗಣನೀಯವಾಗಿರುತ್ತದೆ ಎಂಬುದರಲ್ಲಿ ಭಿನ್ನಮತ ಇರಲಾರದು. 'ಹೆಣ್ಣು ಹೆಂಗಸಾಗುವುದು ಮತ್ತು ಗಂಡು ಗಂಡಸಾಗುವುದು' ಈ ಸಾಮಾಜೀಕರಣದ ಫಲವಾಗಿ ಎಂಬುದನ್ನು ಸ್ತ್ರೀವಾದ ಪ್ರತಿಪಾದಿಸುತ್ತದೆ. ಅಂತೆಯೇ ಸ್ತ್ರೀ-ಪುರುಷರ ಚಿಂತನೆಗಳು, ಧ್ಯೇಯಗಳು, ಕನಸುಗಳು, ನಂಬಿಕೆಗಳು ಮತ್ತು ಒಟ್ಟಾಗಿ ಜೀವನ ಕ್ರಮಗಳು ಅವರು ಬದುಕುತ್ತಿರುವ ಕಾಲದ ಮತ್ತು ಸಾಮಾಜಿಕ ವ್ಯವಸ್ಥೆಯ ನೆಲೆಗಳಿಂದ ನಿರ್ಧರಿತವಾಗುತ್ತವೆ. ಇದು ಭಾಷಿಕ ನೆಲೆಯಲ್ಲೂ ಸ್ಪಷ್ಟವಾದ ಅಭಿವ್ಯಕ್ತಿಯನ್ನು ಪಡೆದುಕೊಂಡಿದೆ. ಪುರುಷರ ಭಾಷಾ ನಮೂನೆಯಲ್ಲಿ ಖಚಿತತೆ, ನಿರ್ದೇಶನ ಮತ್ತು ಅಧಿಕಾರ ಸೂಚಕ ಕ್ರಿಯಾಪದಗಳು ಹೇರಳವಾಗಿ ಕಂಡು ಬಂದರೆ, ಮಹಿಳೆಯರ ಭಾಷಾ ನಮೂನೆಯಲ್ಲಿ ಅಸ್ಪಷ್ಟತೆ, ವಿಧೇಯತೆ ಹಾಗೂ ಅನುಮೋದನೆ ನಿರೀಕ್ಷೆಯ ಕ್ರಿಯಾ ಪದಗಳು ಸಹಜವೆಂಬಂತೆ ನುಸುಳುತ್ತವೆ. ಕಾರಣ ಕೇಳದಿದ್ದಾಗಲೂ, ಪ್ರಶ್ನೆಗೆ ಉತ್ತರಿಸುವ ಮೊದಲು ಕಾರಣ ನೀಡುವುದು ಮಹಿಳೆಯರಲ್ಲಿ ಕಂಡು ಬರುವುದಕ್ಕೆ, ವ್ಯವಸ್ಥೆಯಲ್ಲಿ ಸದಾ ಇನ್ನೊಬ್ಬರಿಗೆ ಉತ್ತರಿಸಬೇಕಾದ, ಅಥವಾ ಸದಾ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಬೇಕಾದ ಅನಿವಾರ್ಯತೆಯ ನೆಲೆಯಲ್ಲಿ ಮಹಿಳೆಯರು ಉಳಿದಿರುವುದೇ ಕಾರಣವಾಗಿದೆ. ಹೀಗಿರುವಾಗ ವ್ಯಕ್ತಿಯ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಒಂದಾದ ಬರಹ ಈ ಎಲ್ಲ ವ್ಯವಸ್ಥೆಗಳ ಪ್ರಭಾವಗಳಿಂದ ಹೊರಗೆ ಉಳಿಯಲು ಸಾಧ್ಯವಿಲ್ಲ. ಈ ಹಿನ್ನೆಲೆಯಿಂದಲೇ ವ್ಯವಸ್ಥೆ ಮತ್ತು ಮಹಿಳಾ ಬರಹದ ಇತಿಮಿತಿಗಳತ್ತ ಅವಲೋಕನ ಮಾಡುವುದು ನನ್ನ ಆಸಕ್ತಿಯಾಗಿದೆ.

---

*ದಿನಾಂಕ ೧೨.೦೩.೨೦೦೩ ರಂದು ಬೆಂಗಳೂರಿನಲ್ಲಿ ಜರುಗಿದ ಕರ್ನಾಟಕ ಲೇಖಕಿಯರ ಐದನೆಯ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧ.

ಹೀಗೆ ವ್ಯವಸ್ಥೆಯು ಮಹಿಳಾ ಬರಹಗಳ ಮೇಲೆ ಪ್ರಭಾವ ಬೀರಿದೆ ಮತ್ತು ಬೀಳುತ್ತದೆ ಎಂಬುದನ್ನು ಒಪ್ಪಿಕೊಂಡ ನಂತರ ಎದುರಾಗುವ ಪ್ರಶ್ನೆ ವ್ಯವಸ್ಥೆಯ ಪ್ರಭಾವ ಮಹಿಳೆಯರ ಬರಹಗಳಿಗೆ ಇತಿಮಿತಿಗಳನ್ನು ನಿರ್ಮಾಣ ಮಾಡಿದೆಯೇ? ಅಥವಾ ಮಹಿಳೆಯರ ಬರಹಗಳಿಗೆ ಒತ್ತಾಸೆಯಾಗಿ ನಿಂತಿದೆಯೇ? ಭಾರತದ ಸಂದರ್ಭದ ಸ್ತ್ರೀವಾದದ ವೈಶಿಷ್ಟ್ಯವೆಂದರೆ, ಇಲ್ಲಿ ಸ್ತ್ರೀಪರ ಹೋರಾಟ, ಚಳುವಳಿ, ಸಾಂವಿಧಾನಿಕ ಪರಿಹಾರ ಮುಂತಾದವು ಉದಾರವಾದಿ ಮಾನವತಾವಾದಿ ಪುರುಷರಿಂದಲೇ ಆರಂಭಗೊಂಡಿವೆ ಹಾಗೂ ಇವರೆಲ್ಲರ ಚಿಂತನೆಗಳ ಹಿಂದೆ ವಸಾಹತುಶಾಹಿ ಶಿಕ್ಷಣದ ಪ್ರಭಾವ ದಟ್ಟವಾಗಿದೆ. ಅಕ್ಷರ ಪ್ರಪಂಚಕ್ಕೇ ಮಹಿಳೆಯನ್ನು ಅನ್ಯಳನ್ನಾಗಿ ಮಾಡಿದ ಪುರುಷ ವರ್ಗದ ಅಂಗವಾದ ಸುಧಾರಣಾವಾದಿ ಗುಂಪಿನಿಂದಲೇ ಆಕೆಗೆ ಅಕ್ಷರಲೋಕದ ಬಾಗಿಲು ತೆರೆದುಕೊಂಡಿತು; ಅಭಿವ್ಯಕ್ತಿಗೆ ಮಾರ್ಗವನ್ನು ತೋರಿಸಿ ಕೊಟ್ಟು, ಪ್ರೋತ್ಸಾಹ ನೀಡಿತು. ಹೀಗೆ ಬರಹವನ್ನು ಆಯ್ಕೆ ಮಾಡಿಕೊಂಡ ಲೇಖಕಿಯರೆಲ್ಲ ಪುರಾಣ, ಇತಿಹಾಸ, ಧಾರ್ಮಿಕ ಮತ್ತು ಸ್ವಾತಂತ್ರ್ಯ ಹೋರಾಟದ ನಾಯಕ-ನಾಯಕಿಯರ ಜೀವನ ಚಿತ್ರದ ಬರವಣಿಗೆಯ ಮೂಲಕ ತಮ್ಮ ಮೊದಲ ಹೆಜ್ಜೆಗಳನ್ನು ಹಾಕಿರುವುದು ಸ್ಪಷ್ಟವಾಗಿದೆ. ಅವರ ಸಾಹಿತ್ಯ ಕೃಷಿಗೆ ಇದು ಪೂರ್ವಭಾವಿ ಸಿದ್ಧತೆಯಾಗಿ ರೂಪುಗೊಂಡಿದೆ.

ಆಂಗ್ಲ ಶಿಕ್ಷಣದ ಅವಕಾಶಗಳು ಹೆಚ್ಚಿದಂತೆ, ಮನೆಯ ಹೊರಗಿನ ದುಡಿಮೆಗೆ ನಿಧಾನವಾಗಿ ಬಾಗಿಲು ಮುಕ್ತವಾದುದರ ಪರಿಣಾಮವಾಗಿ ೫೦, ೬೦ರ ದಶಕಗಳಿಂದ ವಿವಿಧ ವಿಷಯಗಳ ಪಠ್ಯ ಪುಸ್ತಕ ರಚನೆಗಳಲ್ಲಿ ಮಹಿಳೆಯರು ತೊಡಗಿಸಿಕೊಳ್ಳಲು ಸಾಧ್ಯವಾಯಿತು. ೭೦ರ ದಶಕದ ಉತ್ತರಾರ್ಧದಿಂದ ವಿಮರ್ಶೆ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಮಹಿಳೆ ತೊಡಗಿಸಿ ಕೊಳ್ಳಲು ಸಾಧ್ಯವಾಗಿದೆ. ಎಂದರೆ ಇಂತಹ ಕಡೆಗಳಲ್ಲೆಲ್ಲ ವೈಯಕ್ತಿಕ ಪ್ರಯತ್ನಗಳ ಜೊತೆ ಜೊತೆಗೆ, ಶೈಕ್ಷಣಿಕ ವಲಯದ ಅನಿವಾರ್ಯ ಒತ್ತಡಗಳು ಮತ್ತು ಸಂಘಸಂಸ್ಥೆಗಳ ಒತ್ತಾಸೆಗಳು ಮಹಿಳಾ ಬರಹಗಳ ಭಿತ್ತಿಯನ್ನು ವಿಸ್ತರಿಸುವಲ್ಲಿ ಕೈಗೂಡಿಸಿವೆ ಎಂಬುದನ್ನು ಮರೆಯು ವಂತಿಲ್ಲ.

ಮಹಿಳೆ ಸಮಾಜದಲ್ಲಿ ನಿರ್ವಹಿಸುವ ಪಾತ್ರಗಳಲ್ಲಾದ ಬದಲಾವಣೆಗಳು ಅವಳ ಬರಹಗಳ ದಿಕ್ಕಿನ ಬದಲಾವಣೆಗೂ ಅನುವು ಮಾಡಿವೆ. ಶಾಸ್ತ್ರ ಸಂಬಂಧಿ ಬರಹಗಳು, ವೈದ್ಯಕೀಯ, ಕಾನೂನು, ಸಮಾಜ ವಿಜ್ಞಾನ ಮತ್ತು ವಿಜ್ಞಾನದ ಶಿಸ್ತುಗಳಿಗೆ ಸಂಬಂಧಿಸಿದ ಬರಹಗಳು ಮಹಿಳೆಯರಿಂದ ರಚಿತವಾಗಲು, ಅವರು ಆಯಾ ಕ್ಷೇತ್ರಗಳಲ್ಲಿ ವೃತ್ತಿಪರತೆಯ ನೆಲೆಯಿಂದ ಪ್ರವೇಶ ಪಡೆದುದು ಕಾರಣವಾಗಿದೆ. ಎಂದರೆ ವ್ಯವಸ್ಥೆಯು ಕೊಡಮಾಡಿದ ಅವಕಾಶಗಳ ಇತಿಮಿತಿಗಳು ಅಥವಾ ಸಾಧ್ಯತೆಗಳು ಮಹಿಳಾ ಬರವಣಿಗೆಯನ್ನು ಸದಾ ನಿಯಂತ್ರಿಸುತ್ತಾ ಬಂದಿದೆ.

ಈ ಶತಮಾನದ ಎಂಬತ್ತರ ದಶಕದಿಂದ ಕನ್ನಡ ಸಂಸ್ಕೃತಿಯಲ್ಲಿ ಸ್ತ್ರೀವಾದಿ ಚಿಂತನೆಯ ಅಲೆ ಆರಂಭವಾಯಿತು. ಆರಂಭದಲ್ಲಿ ಸಾಹಿತ್ಯದ ವಲಯವನ್ನು ತೆಕ್ಕೆಗೆ ತೆಗೆದುಕೊಂಡು, ಕ್ರಮೇಣ ಜನರ ಬದುಕಿನ ಎಲ್ಲ ರಂಗಗಳಲ್ಲೂ ಎಲ್ಲ ನೆಲೆಗಳಲ್ಲೂ ಸ್ತ್ರೀವಾದಿ ವಿಮರ್ಶೆ

ಮತ್ತು ವಿಶ್ಲೇಷಣೆಗಳು ವ್ಯಾಪಿಸಿದವು. ಇವುಗಳಿಂದಾಗಿ ಮಹಿಳೆಯ ಅಭಿವ್ಯಕ್ತಿಯ ಮೇಲೆ ವ್ಯವಸ್ಥೆಯ ಬಿಗಿಮುಷ್ಠಿಯ ಬಲವನ್ನು ವಿಶ್ಲೇಷಿಸಲು ಮತ್ತು ವ್ಯಾಖ್ಯಾನಿಸಲು ಸಾಧ್ಯವಾಯಿತು. ವಿಶೇಷವೆಂದರೆ ಕನ್ನಡ ವಿಮರ್ಶಾ ಮೀಮಾಂಸೆಗಳಲ್ಲಿ ಯಾವುದರ ಕಡೆಗೂ (ಗಾಂಧಿವಾದ, ಮಾರ್ಕ್ಸ್‌ವಾದ, ಲೋಹಿಯಾವಾದ, ಅಂಬೇಡ್ಕರ್‌ವಾದ) ವಿಶೇಷ ಆಸಕ್ತಿ ತೋರದ ಮಹಿಳಾ ವರ್ಗ ಸ್ತ್ರೀವಾದಿ ವಿಮರ್ಶಾ ಪಂಥಕ್ಕೆ ಆಸಕ್ತವಾದುದು ಮಾತ್ರವಲ್ಲ; ಅದರ ದಿಕ್ಕುಗಳನ್ನು ವಿಸ್ತರಿಸುವುದರಲ್ಲಿ ಮಹತ್ವದ ಕೊಡುಗೆಯನ್ನು ನೀಡಿದೆ. ಇದರ ವಿಪರ್ಯಾಸವೆಂಬಂತೆ ಸ್ತ್ರೀವಾದಿ ವಿಮರ್ಶೆಯ ಬಗ್ಗೆ ನಿರ್ಲಿಪ್ತತೆ ಮತ್ತು ದಿವ್ಯ ನಿರ್ಲಕ್ಷವನ್ನು ಆರಂಭದಲ್ಲಿ ತೋರಿದ ಪುರುಷ ವರ್ಗ (ಬಿ.ಎ. ವಿವೇಕ ರೈ ಮತ್ತು ಡಿ.ಆರ್. ನಾಗರಾಜ್ ಅವರ ಆರಂಭದ ಸ್ತ್ರೀವಾದಿ ಲೇಖನಗಳನ್ನು ಹೊರತುಪಡಿಸಿದಂತೆ), ಸ್ತ್ರೀವಾದವನ್ನು ನಿರ್ಲಕ್ಷಿಸುವುದು ಸಾಧ್ಯವೇ ಇಲ್ಲ ಎಂದಾದಾಗ ಮಾನ್ಯತೆ ನೀಡಿದೆ; ಆದರೆ ಆ ವರ್ಗದಿಂದ ಸ್ತ್ರೀವಾದಿ ಮೀಮಾಂಸೆಗೆ ಸಂಬಂಧಿಸಿದಂತೆ ಬರವಣಿಗೆ ಆದುದು ಅತ್ಯಲ್ಪ. ಇನ್ನೊಂದೆಡೆ ಸ್ತ್ರೀವಾದದ ಸೈದ್ಧಾಂತಿಕ ಚರ್ಚೆಗಳು ಹರಳುಗಟ್ಟಲು ಮತ್ತು ಹಲವು ಹೊಸ ದನಿಗಳು ಕೇಳಿ ಬರಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ವಿವಿಧ ವಿಶ್ವವಿದ್ಯಾನಿಲಯಗಳು ಮುಂತಾದ ಸರಕಾರಿ ಹಾಗೂ ಅರೆ ಸರಕಾರಿ ಸಂಸ್ಥೆಗಳು, ಕೆಲವು ಪ್ರಕಾಶನ ಸಂಸ್ಥೆಗಳು, ಒತ್ತಾಸೆಯಾಗಿ ನಿಂತವು. ಕರ್ನಾಟಕ ಲೇಖಕಿಯರ ಸಂಘ, ಜಾಗೃತಿ, ಮಾನಸ, ಸಮತಾ ಅಧ್ಯಯನ ಕೇಂದ್ರಗಳ ಕೆಲಸಗಳು, ವಿವಿಧ ಮಹಿಳಾ ಸಂಘಸಂಸ್ಥೆಗಳ ಮತ್ತು ಸರ್ಕಾರೇತರ ಸಂಸ್ಥೆಗಳ ಕಾರ್ಯಗಳು ವ್ಯವಸ್ಥೆಯೊಳಗಿನ ಮಹಿಳೆಯ ಇಕ್ಕಟ್ಟುಗಳನ್ನು ಅನಾವರಣ ಮಾಡಲು ಶ್ರಮಿಸಿವೆ. ಈ ಹಿನ್ನೆಲೆಯಿಂದಲೇ ಸಮಕಾಲೀನ ಸಂದರ್ಭದಲ್ಲಿ ವ್ಯವಸ್ಥೆ ಮತ್ತು ಮಹಿಳಾ ಬರಹಗಳು ಎಂಬ ಚರ್ಚೆಯನ್ನು ಆರಂಭಿಸುವುದು ಸೂಕ್ತ.

**ಸಾಮಾಜಿಕ ವ್ಯವಸ್ಥೆ**

ಮಹಿಳೆಯರ ಬರಹಗಳು ಸಾಮಾಜಿಕ ವ್ಯವಸ್ಥೆಯ ಜೊತೆ ಒಂದು ಶತಮಾನದಿಂದ ಅನುಸಂಧಾನವನ್ನು ನಡೆಸಿಕೊಂಡು ಬಂದಿವೆ. ಇದಕ್ಕೆ ಆ ದಿಕ್ಕಿನಲ್ಲಿ ಕೆಲಸ ಮಾಡಿದ ಉದಾರವಾದಿ ಸಮಾಜ ಸುಧಾರಕರ ಚಿಂತನೆಗಳು ಮತ್ತು ಹೋರಾಟಗಳು ಪ್ರೇರಣೆಯನ್ನು ನೀಡಿವೆ. ಇದರಿಂದಾಗಿ ವೈದಿಕ ಸಮಾಜದ ನಂಬಿಕೆಗಳು, ಆಚರಣೆಗಳು, ಮಹಿಳೆಯರ ಸಂದರ್ಭದಲ್ಲಿ ಊರ್ಜಿತವಾಗಿದ್ದ ಅನಿಷ್ಟ ಹಾಗೂ ಕ್ರೂರ ಸಾಮಾಜಿಕ ಪದ್ಧತಿಗಳ ವಿರುದ್ಧ ಚರ್ಚೆ, ಹೋರಾಟ ನಡೆಯಲು ಸಾಧ್ಯವಾಗಿದೆ. ಸಾಹಿತ್ಯಿಕ ವಲಯದಲ್ಲೂ ಈ ಚರ್ಚೆ ಸ್ಥಾಪಿತ ಮತ್ತು ಸ್ತ್ರೀಪರ ನೆಲೆ ಎರಡರಿಂದಲೂ ಸಾಧ್ಯವಾಗಿದೆ. ಇವೆಲ್ಲವುಗಳ ಪರಿಣಾಮವಾಗಿ ವರ್ತಮಾನದಲ್ಲಿ ಮಹಿಳೆಯ ಸ್ಥಾನಮಾನಗಳು ಬದಲಾಗಿವೆ ಮತ್ತು ಮುಕ್ತ ಸಂವಾದವೊಂದು ಏರ್ಪಡುವ ವಾತಾವರಣ ಸಾಮಾಜಿಕ ವ್ಯವಸ್ಥೆಯಲ್ಲಿ ನಿರ್ಮಾಣಗೊಂಡಿದೆ. ಆದರೆ ಇದೇ ಸ್ಥಿತಿಯನ್ನು ಬೇರೆ ವ್ಯವಸ್ಥೆಯೊಳಗೆ ಕಾಣಲು ಸಾಧ್ಯವಾಗಿಲ್ಲ.

## ಧಾರ್ಮಿಕ ವ್ಯವಸ್ಥೆ

ಸಮಾಜವೆಂಬ ಬೃಹತ್ ಸಂಸ್ಥೆಯ ಮುಂದುವರಿಕೆಯಲ್ಲಿ ಧಾರ್ಮಿಕ ವ್ಯವಸ್ಥೆಯ ಪಾತ್ರ ಎಲ್ಲ ಕಾಲಕ್ಕೂ ಪ್ರಧಾನವಾಗಿದೆ. ಜಾತ್ಯಾತೀತವೆಂದು ಗುರುತಿಸಿಕೊಂಡಿರುವ ಭಾರತದ ಸಮಕಾಲೀನ ಸಂದರ್ಭದಲ್ಲೂ ಧರ್ಮ ಮತ್ತು ಧಾರ್ಮಿಕ ವಲಯದ ಪುರೋಹಿತಶಾಹಿ ವರ್ಗ ತನ್ನ ಬಿಗಿ ಹಿಡಿತವನ್ನು ಮುಂದುವರಿಸಿಕೊಂಡು ಬರಲು ನಿರಂತರ ಹೋರಾಡುತ್ತಿರುವುದು ಕಂಡುಬರುತ್ತಿದೆ. ಇಂದಿಗೂ ನಮ್ಮಲ್ಲಿ ಎರಡು ಬಗೆಯ ಚಿಂತನೆಯ ವಲಯಗಳಿವೆ. ಮೊದಲನೆಯದು ಧಾರ್ಮಿಕ ಮೂಲಭೂತವಾದಿ ಗುಂಪಾದರೆ, ಎರಡನೆಯದು ಧರ್ಮದ ಚೌಕಟ್ಟಿನ ಒಳಗೇ ಅಲ್ಪ ಪ್ರಮಾಣದ ಸುಧಾರಣೆಗಳನ್ನು ಪ್ರತಿಪಾದಿಸುವ ಗುಂಪು. (ಧಾರ್ಮಿಕ ವ್ಯವಸ್ಥೆಯಿಂದ ಹೊರ ಜಿಗಿದು ಬದುಕಬಲ್ಲೆವು ಎಂಬವರ ಸಂಖ್ಯೆ ಇಂದಿಗೂ ಅತ್ಯಲ್ಪ ಪ್ರಮಾಣದಲ್ಲಿದೆ.) ಈ ಎರಡು ಗುಂಪುಗಳಲ್ಲಿ ತನ್ನ ಹಿತವರು ಎಂದು ಎರಡನೆಯ ಗುಂಪನ್ನು ಒಪ್ಪಿಕೊಂಡ ಮಹಿಳಾ ವರ್ಗವು ಆ ದಿಕ್ಕಿನಲ್ಲಿ ಬರುವ ಅಲ್ಪಸ್ವಲ್ಪ ಸ್ವಚ್ಛ ಗಾಳಿಯನ್ನೇ ಧನ್ಯತೆಯಿಂದ ಸ್ವೀಕರಿಸಬೇಕಾಗಿದೆ. ನಿದರ್ಶನಕ್ಕೆ ಮುಸ್ಲಿಂ ಸಮುದಾಯದಿಂದ ಕೆಲವು ಲೇಖಕಿಯರು ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದರೂ, ಧಾರ್ಮಿಕ ಆಚರಣೆಗಳ ನೆಲೆಯಿಂದ ಮಹಿಳೆಗೆ ಆಗುತ್ತಿರುವ ಅನ್ಯಾಯಗಳ ಬಗ್ಗೆ ಮಾತಾಡುವ ಹಾಗೂ ಬರೆಯುವ ಮಹಿಳೆಯರು ಎಷ್ಟು ಮಂದಿ ಎಂದಾಗ ಸಾರಾ ಅಬೂಬಕರ್ ಅವರನ್ನು ಬಿಟ್ಟರೆ ನಮಗೆ ಇನ್ನೊಂದು ಹೆಸರು ಸಿಗುವುದಿಲ್ಲ. (ಲೇಖನ ಗುಚ್ಛ.) ಸಾರಾ ಅವರು ಪ್ರತಿಪಾದಿಸ ಬಯಸುವ ಸುಧಾರಣೆಗಳಲ್ಲಿ ಹಲವು ಆ ಸಮುದಾಯದ ಪುರುಷ ವರ್ಗದಿಂದ ಮಾನ್ಯತೆ ಪಡೆಯುವುದಿಲ್ಲ; ತಾತ್ವಿಕವಾಗಿ ಕೆಲವೊಮ್ಮೆ ಒಪ್ಪಿಕೊಂಡರೂ ಆನ್ವಯಿಕತೆಯಲ್ಲಿ ಅಸಹಾಯಕತೆಯನ್ನೊ, ಸಮಯ ಸಾಧಕತೆಯನ್ನೊ ಅದು ಮೆರೆಯುವುದೇ ಅಧಿಕ. ಕ್ರೈಸ್ತ ಸಮುದಾಯದ ಮಹಿಳಾ ವರ್ಗವು ಹೆಚ್ಚು ವ್ಯಕ್ತಿ ಸ್ವಾತಂತ್ರ್ಯವನ್ನು ಅನುಭವಿಸುತ್ತದೆ ಎಂಬುದು ಹೊರಗಿನವರ ಗ್ರಹಿಕೆಯಾಗಿದೆ. ಆದರೆ ಕ್ರೈಸ್ತ ಧಾರ್ಮಿಕ ಸಮುದಾಯದೊಂದಿಗೆ ಅಲ್ಲಿಯ ಮಹಿಳೆಯರು ನಡೆಸಿರುವ ಅನುಸಂಧಾನದ ಎಳೆಗಳು ನಮಗೆ ದೊರೆಯುವುದಿಲ್ಲ. ಇದು ಹಿಂದೂ ಎಂದು ಕರೆಯಲಾಗುವ ಬೃಹತ್ ಗುಂಪಿಗೂ ಅನ್ವಯವಾಗುವ ಮಾತೇ ಆಗಿದೆ. ಎಲ್ಲ ಧರ್ಮಗಳಲ್ಲೂ ಮಹಿಳೆ ದ್ವಿತೀಯ ದರ್ಜೆಯ ಪ್ರಜೆಯಾಗಿಯೇ ಸ್ವೀಕೃತವಾಗಿರುವ ಪರಿಣಾಮವಾಗಿ ಅನುಸಂಧಾನದ ಸಾಧ್ಯತೆಗೆ ಅಡ್ಡಿಯಾಗಿದೆ.

ಇತ್ತೀಚೆಗೆ ಮಂಗಳೂರಿನಲ್ಲಿ ಜರುಗಿದ ಮತಧರ್ಮಗಳನ್ನು ಸ್ತ್ರೀವಾದಿ ನೆಲೆಯಿಂದ ವಿಶ್ಲೇಷಿಸುವ ಉದ್ದೇಶದಿಂದ ರೂಪಿತವಾಗಿದ್ದ ವಿಚಾರಗೋಷ್ಠಿಯಲ್ಲಿ ಪಾಲ್ಗೊಂಡಿದ್ದೆ. ವೇದಿಕೆಯಲ್ಲಿ ಮಾತನಾಡಿದ ಎಲ್ಲ ಮಹಿಳೆಯರೂ ತಾವು ಪ್ರತಿನಿಧಿಸುತ್ತಿದ್ದ ಧರ್ಮದಲ್ಲಿ ಸ್ತ್ರೀಪರ ನಿಲುವುಗಳು ಎಷ್ಟಿವೆ ಎಂಬ ಪಟ್ಟಿಯನ್ನು ಮಾಡುವುದರಲ್ಲೇ ಅತ್ಯಂತ ಆಸಕ್ತರಾಗಿದ್ದುದು ವ್ಯಕ್ತವಾಯಿತು. ಮಾತನಾಡಿದ ಪುರುಷ ಭಾಷಣಕಾರರು ಒಬ್ಬರು ಮಾತ್ರ ತಾವು ಪ್ರತಿನಿಧಿಸುವ ಧರ್ಮದಲ್ಲಿ ಅಡಕವಾಗಿರುವ ಸ್ತ್ರೀ ವಿರೋಧಿ ಸಂಹಿತೆಗಳತ್ತ ಬೆಳಕು

ಚೆಲ್ಲುವ ಪ್ರಯತ್ನ ಮಾಡಿದ್ದರು. ಎಂದರೆ ಇಂದಿಗೂ ಧರ್ಮದ ಯಾಜಮಾನ್ಯದಿಂದ ಬೌದ್ಧಿಕ ಮತ್ತು ಮಾನಸಿಕ ನೆಲೆಯ ಬಿಡುಗಡೆ ಮಹಿಳೆಗೆ ಸಾಧ್ಯವಾಗಿಲ್ಲ ಎಂಬುದನ್ನು ತಿಳಿಸುವುದಕ್ಕಾಗಿ ಮೇಲಿನ ಸಂದರ್ಭವನ್ನು ಉಲ್ಲೇಖಿಸಿದ್ದೇನೆ.

ಧಾರ್ಮಿಕ ಗ್ರಂಥಗಳನ್ನು ಆಮೂಲಾಗ್ರವಾಗಿ ಓದಿರುವ ಮಹಿಳೆಯರೇ ವಿರಳ. ಹೀಗಾಗಿ ಸಮಕಾಲೀನ ಪುರೋಹಿತಶಾಹಿ ವರ್ಗವು ಅವುಗಳ ಕುರಿತು ನಡೆಸುತ್ತಿರುವ ವ್ಯಾಖ್ಯಾನಗಳ ತಳಸ್ಪರ್ಶಿ ವಿಮರ್ಶೆ ಮಾಡುವುದು ಮಹಿಳೆಯರಿಗೆ ಅಸಾಧ್ಯವಾಗಿದೆ. (ನಿರುಪಮಾ ಅವರ 'ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ' (೧೯೯೬)ಯ ಹೊರತಾಗಿ.) ಇದರಿಂದಾಗಿ ಧಾರ್ಮಿಕ ವ್ಯವಸ್ಥೆಯು ಮಹಿಳಾ ವರ್ಗದ ಮೇಲೆ ಯಾಜಮಾನ್ಯವನ್ನು ಸುಲಭವಾಗಿ ದಕ್ಕಿಸಿಕೊಂಡು ಬಿಟ್ಟಿರುತ್ತದೆ. ಸ್ತ್ರೀವಾದಿ ನೆಲೆಯಿಂದ ಎಲ್ಲ ಧಾರ್ಮಿಕ ಗ್ರಂಥಗಳ ಪುನರ್ ಪರಿಶೀಲನೆ, ಮರುಮೌಲ್ಯಮಾಪನ ಇಂದು ಅಗತ್ಯವಾಗಿದೆ.

### ರಾಜಕೀಯ ವ್ಯವಸ್ಥೆ

ಗ್ರಾಮ ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳಲ್ಲಿ ೩೩% ಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಇಂದು ಮಹಿಳೆಯರು ರಾಜಕೀಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಆರಂಭದ ತೊಡಕುಗಳನ್ನು ನಿವಾರಿಸಿಕೊಳ್ಳುತ್ತ, ತಮ್ಮ ಕ್ಷೇತ್ರಗಳಲ್ಲಿ ಸ್ತ್ರೀಪರ ನೆಲೆಯ ಆದ್ಯತಾ ಕಾರ್ಯಕ್ರಮಗಳು ಅನುಷ್ಠಾನಗೊಳ್ಳುವಂತೆ ಮಹಿಳಾ ಚುನಾಯಿತ ಪ್ರತಿನಿಧಿಗಳು ಕ್ರಮಕೈಗೊಳ್ಳುತ್ತಿರುವ ವರದಿಗಳು ಬರುತ್ತಿವೆ. ಆದರೆ ಲೋಕಸಭೆ, ರಾಜ್ಯಸಭೆಗಳಲ್ಲಿ ಮಹಿಳಾ ಮೀಸಲಾತಿ ಮಸೂದೆ ಮಂಡನೆಯ ಪ್ರಹಸನ ಇನ್ನೂ ಮುಗಿದಿಲ್ಲ. ಸ್ವತಂತ್ರ, ಸಾರ್ವಭೌಮ, ಗಣರಾಜ್ಯವೆಂದಲ್ಲ ಗುರುತಿಸಿಕೊಂಡಿರುವ ಭಾರತದ ಚುನಾಯಿತ ಪುರುಷ ಪ್ರತಿನಿಧಿಗಳು ಮಹಿಳಾ ಮೀಸಲಾತಿ ಮಸೂದೆಯನ್ನು ಸಂಸತ್ತಿನಲ್ಲಿಯೇ ಹರಿದು ಹಾಕುವ, ಮಸೂದೆಯು ಚರ್ಚೆಗೆ ಬಾರದಂತೆ ಗದ್ದಲವೆಬ್ಬಿಸುವ ಮೂಲಕ ತಮ್ಮ ಯಾಜಮಾನ್ಯವನ್ನು ಸಾಬೀತುಪಡಿಸುತ್ತಿದ್ದಾರೆ. ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಸಂದರ್ಭಗಳಲ್ಲಿ ಮಹಿಳೆಗೆ ಎದುರಾಗುವ ಇಕ್ಕಟ್ಟುಗಳೂ ಹಲವು. ಅವಿವಾಹಿತೆಯರು, ವಿಧವಾ ಪತ್ನಿಯರು ಇಲ್ಲವೆ ಕುಟುಂಬ ಸಂಸ್ಥೆಯಿಂದ ದೂರ ಉಳಿದವರೇ ರಾಷ್ಟ್ರ ಮತ್ತು ರಾಜ್ಯಮಟ್ಟದ ಅಧಿಕಾರದ ಹುದ್ದೆಗಳನ್ನು ಪಡೆಯಲು ಸಾಧ್ಯವೆಂಬ ವಾತಾವರಣ ನಿರ್ಮಾಣವಾಗಿದೆ. ಉಳಿದವರೆಲ್ಲ ಆಯಾ ಪಕ್ಷದ ಮುಖವಾಣಿಗಳಾಗಿ ಇಲ್ಲವೆ ಅಲಂಕಾರಿಕ ಹುದ್ದೆಗಳಲ್ಲಿ ಸಂತೃಪ್ತಿಪಡಬೇಕಾದ ಸ್ಥಿತಿಯಿದೆ. ಹೀಗಾಗಿ ಇವರಿಗೂ ರಾಜಕೀಯ ವ್ಯವಸ್ಥೆಯ ಕುರಿತು ವಿಮರ್ಶಾತ್ಮಕ ನಿಲುವು ಕೈಗೊಳ್ಳಲು ಸಾಧ್ಯವಾಗಿಲ್ಲ.

ಇಂತಹ ಸಂದರ್ಭದಲ್ಲಿ ಮಹಿಳಾ ಬರಹಗಳು ಪ್ರಸ್ತುತ ವ್ಯವಸ್ಥೆಯ ಕುರಿತಂತೆ ಹಮ್ಮಿಕೊಳ್ಳಬೇಕಾದ ಕಾರ್ಯತಂತ್ರಗಳು ಏನಾಗಿರಬೇಕು? ಸಂವಿಧಾನದ ನೀತಿ ನಿರೂಪಣೆಯ ಹಂತದಲ್ಲಿ ಪಾಲ್ಗೊಳ್ಳುವಿಕೆಯ ಅವಕಾಶದಿಂದ ವಂಚಿತವಾದ ಸ್ತ್ರೀ ಸಮುದಾಯವು, ಮಹಿಳೆಯರ ಆರೋಗ್ಯದ ಮೇಲೆ ಚೆಲ್ಲಾಟವಾಡುವ ಔಷಧಿ ಕಂಪನಿಗಳ ವಿರುದ್ಧ, ಮಹಿಳಾ

ದೌರ್ಜನ್ಯದ ಪ್ರಕರಣಗಳು, ಅವುಗಳ ವಿಚಾರಣೆ ಹಾಗೂ ನ್ಯಾಯವಿಧಾನ ಕ್ರಮಗಳ ಸುಧಾರಣೆ ಕುರಿತು, ಆರ್ಥಿಕ ನೀತಿಗಳ ಕುರಿತು ಹೀಗೆ ಪ್ರತಿಯೊಂದರ ಕುರಿತು ಹೋರಾಟ ಮಾಡಬೇಕಾಗಿದೆ. ಇಂತಹ ಸಂದರ್ಭಗಳಲ್ಲೆಲ್ಲ ಮಹಿಳಾ ಸಮುದಾಯದ ಶ್ರಮ, ಸಮಯ ಹಾಗೂ ಶಕ್ತಿಗಳು ಅಗತ್ಯಕ್ಕಿಂತ ಹಲವು ಪಟ್ಟು ಹೆಚ್ಚು ವ್ಯಯವಾಗುವ ಸ್ಥಿತಿಯಿದೆ. ಈ ದಿಕ್ಕಿನಲ್ಲಿ ಮಹಿಳೆಯರ ಅನುಸಂಧಾನ ತಕ್ಕಮಟ್ಟಿಗಾದರೂ ಆರಂಭವಾಗಿದೆ. ಎನ್. ಗಾಯತ್ರಿ ಅವರ 'ಮಹಿಳಾ ಚಳುವಳಿಯ ಮಜಲುಗಳು' (೧೯೯೮), ಶಮಂತ ಅವರ 'ಕಟಕಟೆಯೊಳಗೆ ಕುಟುಂಬದ ಕಣ್ಣೀರು' (೧೯೯೯), 'ಕದನ ಕಾಶ್ಮೀರ' (೧೯೯೫), 'ಹಿಮದಗ್ನಿ' (೧೯೯೬), ಗೀತಾ ಕೃಷ್ಣಮೂರ್ತಿಯವರ 'ಮಹಿಳೆ ಕಾನೂನು ಮತ್ತು ರಾಜಕಾರಣ' (೨೦೦೧), ನೀಲಾ.ಕೆ ಅವರ 'ಬದುಕು ಬಂದೀಖಾನೆ' (೨೦೦೧), ಆರ್. ಪೂರ್ಣಿಮಾ ಅವರ 'ರಾಜಕೀಯ ಮಹಿಳೆ ಮೀಸಲಾತಿಯ ಅಗತ್ಯ' (೧೯೯೭), ನೇಮಿಚಂದ್ರ ಮತ್ತು ಹೇಮಲತಾ ಮಹಿಷಿಯವರ 'ನ್ಯಾಯಕ್ಕಾಗಿ ಕಾದಿರುವ ಬಾಂವ್ರಿದೇವಿ', ಸಂವೇದಿ ಪ್ರಕಾಶನದ 'ಕೆಲಸದ ಸ್ಥಳದಲ್ಲೂ ಲೈಂಗಿಕ ಕಿರುಕುಳ' (೨೦೦೧), ಜನವಾದಿ ಮಹಿಳಾ ಸಂಘಟನೆಯ ಪ್ರಕಟಣೆಯಾದ 'ಕ್ವಿನಾಕ್ರಿನ್-ಗರ್ಭ ನಿರೋಧಕ ಗುಳಿಗೆ' ಮುಂತಾದ ಕೃತಿಗಳೂ, ಮಾನಸ, ಅಚಲ, ಜಾಗೃತಿ, ಮಹಿಳಾ ಅಧ್ಯಯನ ಪತ್ರಿಕೆಗಳ ಬರಹಗಳು ರಾಜಕೀಯ ವ್ಯವಸ್ಥೆಯೊಳಗಿನ ಮಹಿಳಾ ನೆಲೆಗಳನ್ನು ಸೂಚಿಸುತ್ತವೆ.

### ಆರ್ಥಿಕ ವ್ಯವಸ್ಥೆ

ಆರ್ಥಿಕ ಸ್ವಾತಂತ್ರ್ಯವೇ ನಿಜವಾದ ಸ್ವಾತಂತ್ರ್ಯ ಎಂಬ ಮಾತಿದೆ. ವ್ಯಕ್ತಿ ಆರ್ಥಿಕ ಉತ್ಪಾದನೆಯಲ್ಲಿ ತೊಡಗಿದರೆ ಸಾಲದು, ತನ್ನ ದುಡಿಮೆಯ ಗಳಿಕೆಯ ನಿರ್ವಹಣೆಯಲ್ಲಿ ಸಕ್ರಿಯವಾದ ಪಾತ್ರವನ್ನು ವಹಿಸಬೇಕು. ಆಗ ಮಾತ್ರ ಸ್ವಾತಂತ್ರ್ಯಕ್ಕೆ ಅರ್ಥ ದೊರೆಯುತ್ತದೆ. ಮಹಿಳೆಯ ಖಾಸಗಿ ದುಡಿಮೆಯನ್ನು ದೇಶದ ಆದಾಯದ ಭಾಗವಾಗಿ ಗಣಿಸದೇ ಇರುವ ಸರಕಾರ, ಆಕೆಯ ದುಡಿಮೆಯನ್ನೇ ಅಮಾನ್ಯಗೊಳಿಸಿರುವ ಸಾಮಾಜಿಕ ವ್ಯವಸ್ಥೆಗಳಲ್ಲಿ ಆಕೆ ಯಾವ ಜಾತಿ ಮತ್ತು ವರ್ಗಕ್ಕೇ ಸೇರಿರಲಿ, ಮೂಲಭೂತವಾಗಿ ಅವಳ ಸ್ಥಿತಿ ಒಂದೇ ರೀತಿಯದಾಗಿರುತ್ತದೆ. ಬಹುತೇಕ ಕುಟುಂಬಗಳಲ್ಲಿ ಮಹಿಳೆ ಕುಟುಂಬದ ಆದಾಯದ ಆರ್ಥಿಕ ನಿರ್ವಹಣೆಯ ನಿರ್ಧಾರಗಳನ್ನು ಕೈಗೊಳ್ಳುವ ಸ್ಥಾನದಲ್ಲಿ ಇರುವುದಿಲ್ಲ. ಒಂದು ರಾಜ್ಯದ ಮತ್ತು ದೇಶದ ಬಜೆಟ್ ಕೂಡಾ ಈ ನೆಲೆಯಲ್ಲೇ ನಿಂತಿರುತ್ತದೆ. ಬಜೆಟ್ ಬಗೆಗಿನ ವಿಶ್ಲೇಷಣೆಗೆ ಆಹ್ವಾನಿತರಾಗುವವರು ಪುರುಷರೇ ಆಗಿರುತ್ತಾರೆ. ಸೀಮೆಎಣ್ಣೆ, ಗ್ಯಾಸು, ಗೃಹೋಪಯೋಗಿ ವಸ್ತುಗಳ ಬೆಲೆ ಏರಿಕೆ ಕುರಿತ ಪ್ರತಿಕ್ರಿಯೆಗಳು ಮಾತ್ರ ಖಾಯಂ ಆಗಿ ಮಹಿಳೆಯರಿಗೆ ಮೀಸಲಾಗಿರುತ್ತವೆ.

ಪಿತೃಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಆರ್ಥಿಕ ನೀತಿಗಳು ಮಹಿಳೆಯ ಚಲನವಲನಗಳನ್ನು ಗರಿಷ್ಠ ಪ್ರಮಾಣದಲ್ಲಿ ನಿಯಂತ್ರಿಸಿ ಬಿಡುತ್ತದೆ. ಇದು ತರುವ ಪರಾವಲಂಬಿತನವು ಅವಳ ಅಭಿವ್ಯಕ್ತಿಯನ್ನೂ, ಬರಹಗಳನ್ನೂ ನಿಯಂತ್ರಿಸಿದೆ. ನಮ್ಮಲ್ಲಿ ಅರ್ಥಶಾಸ್ತ್ರವನ್ನು

ಪದವಿ ಮತ್ತು ಸ್ನಾತಕೋತ್ತರ ಪದವಿ ಮಟ್ಟಗಳಲ್ಲಿ ಬೋಧಿಸುವ ಅರ್ಹ ಅಧ್ಯಾಪಕಿಯರಿದ್ದಾರೆ. ಆದರೆ ಆರ್ಥಿಕ ವಿಶ್ಲೇಷಕ ಮಹಿಳೆಯರಿಲ್ಲ. (ಸುಚೇತಾ ದಲಾಲ್ ಅವರ ಅಂಕಣ ಬರಹ 'ಅರ್ಥಾವಲೋಕನ' - ವಿಜಯ ಕರ್ನಾಟಕವನ್ನು ಹೊರತುಪಡಿಸಿದಂತೆ.) ಆರ್ಥಿಕ ವ್ಯವಹಾರಗಳ ಸಲಹೆಗಾರರೂ ಉನ್ನತಮಟ್ಟದಲ್ಲಿ ಇಲ್ಲವೆಂಬಷ್ಟು ವಿರಳ. ಇವೆಲ್ಲ ಅಘೋಷಿತ ನೆಲೆಯಲ್ಲಿ ಮಹಿಳೆಯರ ಚಿಂತನೆ ಮತ್ತು ಬರಹಗಳ ಮೇಲೆ ಪ್ರಭಾವ ಬೀರಿವೆ. ಶಮಂತ ಅವರ 'ದುಡಿತ ಮಿಡಿತ' (೨೦೦೧), ಮುಂತಾದ ಕೆಲವು ಪ್ರಯತ್ನಗಳನ್ನು ಬಿಟ್ಟರೆ, ಈ ಕ್ಷೇತ್ರದಲ್ಲಿ ಮಹಿಳಾ ಬರವಣಿಗೆ ಸಾಗಬೇಕಾಗಿರುವ ಹಾದಿ ಬಹು ದೊಡ್ಡದಿದೆ.

ಇಷ್ಟು ಚರ್ಚೆಯ ಹಿನ್ನೆಲೆಯಲ್ಲಿ ಕೆಲವು ತೀರ್ಮಾನಗಳಿಗೆ ಬರಲು ಸಾಧ್ಯವಾಗುತ್ತದೆ.

* ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳು ಮಹಿಳಾ ಬರವಣಿಗೆಗಳ ಮೇಲೆ ಧನಾತ್ಮಕ ಹಾಗೂ ಋಣಾತ್ಮಕ ನೆಲೆಗಳಿಂದ ಪ್ರಭಾವಿಸಿರುವುದು ಸ್ಪಷ್ಟವಾಗಿದೆ. ಕೆಲವು ಕ್ಷೇತ್ರಗಳಲ್ಲಿ ಆಕೆಯ ಪ್ರವೇಶಕ್ಕೆ ಮತ್ತು ಚಿಂತನೆ, ಬರಹಗಳಿಗೆ ಅವಕಾಶ ನೀಡಿ, ತೋರಿಕೆಯ ಮಾನ್ಯತೆಯನ್ನು ನೀಡಿ, ಹಲವು ಕ್ಷೇತ್ರಗಳಲ್ಲಿ ಅವಳ ಪಾಲ್ಗೊಳ್ಳುವಿಕೆಗೆ, ನಿಯಂತ್ರಣವನ್ನು ಹೇರಿವೆ. ಇದು ಯಾಜಮಾನ್ಯದ ಪ್ರಧಾನ ಗುಣಗಳಲ್ಲಿ ಒಂದಾಗಿದೆ.
* ಯಾಜಮಾನ್ಯವನ್ನು ಒಪ್ಪಿಕೊಂಡುದರ ಫಲವಾಗಿ ಹೇಗೆ ಸಾಹಿತ್ಯದ ಅಭಿವ್ಯಕ್ತಿಯಲ್ಲಿ ಮಹಿಳೆ ಸ್ವನಿಯಂತ್ರಣವನ್ನು ಆರೋಪಿಸಿಕೊಂಡು, ಅದೇ ಕ್ಷೇಮವೆಂದು ಭಾವಿಸಿದಳೋ ಅದು ಇತರ ಕ್ಷೇತ್ರಗಳ ಬರಹಗಳಿಗೂ ಅನ್ವಯವಾಗುತ್ತದೆ.
* ಮಹಿಳೆಯ ಚಲನವಲನ ಮತ್ತು ವೈಚಾರಿಕತೆಯನ್ನು ನಿಯಂತ್ರಿಸುವ ಆರ್ಥಿಕ ಮತ್ತು ಧಾರ್ಮಿಕ ವ್ಯವಸ್ಥೆಗಳ ಪ್ರಭಾವಲಯವನ್ನು ಅರಿಯುವ ಮೂಲಕವೇ, ಅಲ್ಲಿ ಮಹಿಳೆ ಸಾಧಿಸಬೇಕಾದ ಕೆಲಸಗಳ ಅಗತ್ಯ ಮತ್ತು ಅನಿವಾರ್ಯತೆಯನ್ನು ಗುರುತಿಸಬಹುದು.



# ಮಾರ್ಕ್ಸ್‌ವಾದೀ ಸ್ತ್ರೀವಾದ : ಒಂದು ತಾತ್ತ್ವಿಕ ಓದು

ಆನಂದ ಕೋಡಿಂಬಳ

ಸ್ತ್ರೀವಾದಿ ವಿಮರ್ಶೆಯು ಹಲವು ಸಿದ್ಧಾಂತಗಳ, ಜ್ಞಾನ ಕ್ಷೇತ್ರಗಳ ಸಹಯೋಗದಿಂದ ಸಂಯೋಜನೆಗೊಂಡ ಒಂದು ವಿಮರ್ಶಾ ಮಾದರಿ ಎಂದು ಒಪ್ಪಿಕೊಳ್ಳುವುದು ಅನಿವಾರ್ಯ. ಸ್ತ್ರೀವಾದದ ಮೇಲೆ ಗಾಢ ಪ್ರಭಾವವನ್ನು ಬೀರಿದ ಸೈದ್ಧಾಂತಿಕ ಮಾದರಿಗಳೆಂದರೆ, ಮಾರ್ಕ್ಸ್‌ವಾದ, ರಚನಾವಾದ-ರಾಚನಿಕೋತ್ತರವಾದ ಅಥವಾ ನಿರಚನಾವಾದಗಳು. ಅಂದರೆ, ಬ್ರಿಟನ್ನಿನ 'ಪ್ರಾಯೋಗಿಕ ವಿಮರ್ಶೆ, (Practical Criticism) ಮತ್ತು ನಾರ್ತ್ ಅಮೇರಿಕಾದ 'ನವ್ಯ ವಿಮರ್ಶೆ' (New Criticism)ಯನ್ನು ಪ್ರತಿರೋಧಿಸಿ ನಿಂತ ವಿಮರ್ಶಾ ವಿಧಾನಗಳು ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ಮೇಲೆ ಗಾಢ ಪ್ರಭಾವವನ್ನು ಬೀರಿದೆ. 'ತೀವ್ರಗಾಮಿ ಸ್ತ್ರೀವಾದ'ವು (Radical Feminism) ಕಾರ್ಲ್‌ಮೆಕ್‌ಮಿಲನ್ (Caral Mcmillan) ಗುರುತಿಸುವಂತೆ 'ಎಡಪಂಥೀಯ ಕ್ರಾಂತೀಯತೆಯ ರಾಜಕೀಯದ ಬೆನ್ನೆಲುಬು'. ಇದರ ಉಗಮ ೧೯೬೦ರ ಅಮೇರಿಕಾದ ಮಧ್ಯಮ ವರ್ಗದ ಬಿಳಿಯ ಮತ್ತು ಕರಿಯ ಕಾರ್ಮಿಕ ಮಹಾಕ್ರಾಂತಿ. ಹೆಚ್ಚಿನ ಕಾರ್ಮಿಕರು ಮಧ್ಯಮ ವರ್ಗದ ಅಥವಾ ವರ್ಗರಹಿತ (Class less) ನೆಲೆಯಿಂದಲೇ ಬಂದವರಾಗಿದ್ದು, ಅವರ ಮೂಲಭೂತ ಹೋರಾಟವೇ ಸಮಾಜದಲ್ಲಿ 'ಉತ್ಪಾದನಾ ಮರುಹಂಚಿಕೆಯಾಗಬೇಕು' ಎಂಬುದೇ ಆಗಿತ್ತು. ಪುರುಷ ಮತ್ತು ಸ್ತ್ರೀಯ ನಾಗರಿಕ ಹಕ್ಕು (Civil rights)ಗಳ ಹೋರಾಟವೂ ಉತ್ಪಾದನಾ ಮರುಹಂಚಿಕೆಯ ಆಂತರ್ಯದಿಂದಲೇ ಅಮೇರಿಕಾದ ವಿಯಟ್ನಾಂ ಅಲ್ಲಿ ಮೊದಲು ಕಾಣಿಸಿಕೊಂಡಿತು. ಈ ಚಳವಳಿಯಲ್ಲಿ ಸ್ತ್ರೀಯರು ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡರು. ತೀವ್ರಗಾಮಿ ಸ್ತ್ರೀವಾದಿಗಳೆಂದು ಗುರುತಿಸಿಕೊಂಡ ಸ್ತ್ರೀವಾದಿಗಳು ಕರಿಯವರ್ಣೀಯರು ಶ್ವೇತವರ್ಣೀಯರನ್ನು ಪ್ರತಿರೋಧಿಸುವಷ್ಟೇ ತೀವ್ರವಾಗಿ 'ಪುರುಷ'ರನ್ನು ವಿರೋಧಿಸಿದರು. ಈ ಹೊಸ ಎಡಪಂಥೀಯ ಲಿಂಗಾಧಾರಿತ ಆಲೋಚನೆಯು ರೇಖಾತ್ಮಕವಾಗಿ ಹಲವು ಪ್ರಶ್ನೆಗಳನ್ನು ಮುಂದಿಟ್ಟಿತು. ಮಾರ್ಕ್ಸ್‌ವಾದದ ಜೊತೆಗೆ ತನ್ನನ್ನು ಸಮೀಕರಿಸಿಕೊಳ್ಳುವುದರಿಂದ ಸ್ತ್ರೀವಾದ ಪಡೆಯುವುದೇನು? ಬಂಡವಾಳ ಮತ್ತು ಅದನ್ನು ಪ್ರಚೋದಿಸುವ ಉತ್ಪಾದನೆಯ ಮೂಲಕವಾಗಿ ಗುರುತಿಸಿಕೊಳ್ಳುವ ಮಾರ್ಕ್ಸ್‌ವಾದದ ಭೌತಸ್ತರದ ವರ್ಗ ವ್ಯವಸ್ಥೆಯ ಸ್ತ್ರೀಯರನ್ನು

ಒಟ್ಟಂದದಲ್ಲಿ ಗ್ರಹಿಸುವುದಾದರೆ, 'ಸ್ತ್ರೀಯರ ನಿಲುವೇನು'? ಇದಕ್ಕೆ ಪ್ರತಿಕ್ರಿಯೆ ಎಂಬಂತೆ ನ್ಯೂಯಾರ್ಕ್ ರಾಡಿಕಲ್ ಫೆಮಿನಿಸ್ಟ್‌ಗಳು ೧೯೬೯ ರಲ್ಲಿ ಕೆಳಗಿನಂತೆ ಪ್ರತಿಕ್ರಿಯಿಸಿದರು.

> ಬಂಡವಾಳಶಾಹಿ ಅಥವಾ ಇನ್ನಾವುದೇ ಆರ್ಥಿಕ ವ್ಯವಸ್ಥೆಗಳು, ಸ್ತ್ರೀ ಶೋಷಣೆಯ ಪ್ರಮುಖ ಕಾರಣಗಳು. ಆದರೆ ಆರ್ಥಿಕ ಕ್ಷೇತ್ರದಲ್ಲಿ ವಿಕಾಸ ಮತ್ತು ಬದಲಾವಣೆಗಳಿಂದ, ಸ್ತ್ರೀ ಶೋಷಣೆಯನ್ನು ಕಿತ್ತೊಗೆಯ ಬಹುದೆಂದು ಹೇಳಲಾಗುವುದಿಲ್ಲ.[೧]

ಅವರ ಪ್ರಕಾರ 'ಪಿತೃಸತ್ತೆ'ಯೇ ಸಮಸ್ಯೆಯ ಬೇರು; ಆರ್ಥಿಕತೆ ಅಲ್ಲ. ಭೌತಮಾರ್ಕ್ಸ್‌ವಾದದ ದೃಷ್ಟಿಕೋನವನ್ನು ವಿಶ್ಲೇಷಿಸುತ್ತಾ ಸಿಮೋನ್ ದಿ ಬೋವಾ :

> ಮಹಿಳೆಯರ ಸ್ಥಾನಮಾನದಲ್ಲಿ ಬದಲಾವಣೆ ಉಂಟಾಗಬಹುದೆಂಬ ಯಾವುದೇ ಭ್ರಮಣೆಗೆ ಸ್ತ್ರೀಯರು ಒಳಗಾಗಲಿಲ್ಲ. ಏಕೆಂದರೆ, ಉತ್ಪಾದನೆ ಯಲ್ಲಿ ಯಾವಾಗ ಕ್ರಾಂತಿ ಆಗುತ್ತದೊ ಆಗ ಮಾತ್ರ ಬದಲಾವಣೆಗೆ ಆಸ್ಪದವಿರುತ್ತದೆ ಎಂದು ನಂಬುವವರು ಮಾರ್ಕ್ಸ್‌ವಾದಿಗಳು. ಆದ್ದರಿಂದ ಅವರು ಹೇಳುವುದು, ಸ್ತ್ರೀವಾದಕ್ಕೆ ಮಾರುಹೋಗುವುದನ್ನು ನಿಯಂತ್ರಿಸಿಕೊಂಡೆ.[೨]

ಎಂದು ಅಭಿಪ್ರಾಯ ಪಡುತ್ತಾಳೆ. ಸಾಮಾಜಿಕ ಪರಿವರ್ತನೆ ಮತ್ತು ಸ್ತ್ರೀಯರ ಸ್ವಾತಂತ್ರ್ಯದ ಮೂಲಾಧಾರ ಮಾರ್ಕ್ಸ್‌ವಾದ ಎಂದಾದರೂ, ಇದರಲ್ಲಿ 'ಪುರುಷರ ಪ್ರಾಧಾನ್ಯ' (Male domination)ವೇ ಅಂತರ್ ಕೇಂದ್ರ. ಸಮಾಜದಲ್ಲಿ ಲಿಂಗಾಧಾರಿತ ವ್ಯವಸ್ಥೆಯೇ ಮೇಲ್‌ರಚನೆ ಎಂದು ಹೇಳುವಲ್ಲಿ ಶೈಲಾ ದಿಲಾನಿ 'Is whether bottom line is the sex line or the class line' ಎನ್ನುವ ಪ್ರಶ್ನೆಯನ್ನು ಮುಂದಿಡುತ್ತಾಳೆ. ಇಲ್ಲಿ

> ಮಾರ್ಕ್ಸ್ ಮತ್ತು ಏಂಗೆಲ್ಸ್‌ರಿಗೆ ಮಹಿಳಾ ವಿಮೋಚನೆಯೆನ್ನುವುದು ಒಂದು ಅಂಚಿನ ನೆಲೆಯ ಪ್ರಶ್ನೆಯಾಗಿ ಮಾತ್ರ ಕಂಡಿತು. ಈ ವಿಷಯವನ್ನು ಕುರಿತ ಅವರ ಆಲೋಚನೆಗಳು ಎಂದೂ ಸ್ತ್ರೀ ವಿರೋಧಿಯೇನೂ ಆಗಿರಲಿಲ್ಲ. ಮಾರ್ಕ್ಸ್ ತನ್ನ 'The Holy Family' ಕೃತಿಯಲ್ಲಿ ಫೂರ್ಯೇನ ಮಹಿಳಾ ವಿಮೋಚನೆಯ ವಿಚಾರಗಳನ್ನು ಬೆಂಬಲಿಸುತ್ತಾ ಅದಕ್ಕೆ ಸಾರ್ವತ್ರಿಕವಾದ ದಾರ್ಶನಿಕ ಅರ್ಥವನ್ನು ನೀಡಿದ. ಸ್ತ್ರೀ ವಿಮೋಚನೆಯೆನ್ನುವುದು ಮಾನವೀಕರಣದ ಮಾನದಂಡವಷ್ಟೇ ಅಲ್ಲ, ಅದಕ್ಕಿಂತ ಮೂಲಭೂತವಾದ ಅರ್ಥದಲ್ಲಿ ಮಾನವತೆ ಪಶುತ್ವವನ್ನು ಜಯಿಸುವುದಕ್ಕೆ, ಸಂಸ್ಕೃತಿಯು ಪ್ರಕೃತಿಯನ್ನು ಗೆದ್ದದ್ದಕ್ಕೆ ಮಾನದಂಡ ಎಂದು ಮಾರ್ಕ್ಸ್ ಬರೆದ. ಏಂಗೆಲ್ಸ್‌ನ ಅಭಿಪ್ರಾಯದಲ್ಲಿ ಮಹಿಳೆಯರ ಅಸಮಾನತೆಗೆ ಮುಖ್ಯ ಕಾರಣ, ಅವರನ್ನು ಸಾಮಾಜಿಕವಾಗಿ ಉತ್ಪಾದನಾ

ಕಾರ್ಯದಿಂದ ದೂರ ಸರಿಸಿದ್ದೇ ಆಗಿತ್ತು. ಗೃಹಕೃತ್ಯದ ಚಾಕರಿಯಿಂದ ಅವರನ್ನು ಬೇರ್ಪಡಿಸಿ ಸಾಮಾಜಿಕ ಉತ್ಪಾದನೆಯಲ್ಲಿ ಅವರನ್ನು ಹೆಚ್ಚಿನ ಪ್ರಮಾಣದಲ್ಲಿ ತೊಡಗಿಸುವುದರಿಂದ ಮಹಿಳಾ ವಿಮೋಚನೆ ಸಾಧ್ಯ ಎಂಬ ತಿಳುವಳಿಕೆ ಅವನದು. ಈ ಪ್ರಕ್ರಿಯೆಯಲ್ಲಿ ಮನೆಗೆಲಸ ಮತ್ತು ಶಿಶುಪಾಲನೆ ಯೆರಡೂ ಸಾಮೂಹಿಕ ಕಾರ್ಯ ಮತ್ತು ಸಾರ್ವಜನಿಕ ಜವಾಬ್ದಾರಿ ಯಾಗುತ್ತದೆ. ಇಂತಹ ಸ್ಥಿತಿಯ ಸಾಧ್ಯತೆಯು ಉಂಟಾಗುವುದು ಖಾಸಗಿ ಆಸ್ತಿ ಮತ್ತು ಸಮಾಜವಾದದ ಉಗಮದ ನಂತರ, ಎಂಬುದು ಏಂಗೆಲ್ಸನ ಅಭಿಪ್ರಾಯ. ಆದ್ದರಿಂದ ದುಡಿಯುವ ವರ್ಗದ ಭವಿಷ್ಯದೊಂದಿಗೆ ಹೆಣ್ಣಿನ ಅದೃಷ್ಟವನ್ನು ಜೋಡಿಸಲಾಗಿದೆ. ಸಮಾಜವಾದ ಮತ್ತು ಮಹಿಳೆಯ ಅಧ್ಯಯನವನ್ನು ಕುರಿತು ಎರಡು ಹಂತಗಳಲ್ಲಿ ಚರ್ಚಿಸಬಹುದು: ಮಾರ್ಕ್ಸ್‌ವಾದಕ್ಕೆ ಬದ್ಧರಾದ, ಮಾರ್ಕ್ಸ್‌ವಾದಿ ಚಳುವಳಿಗಳಲ್ಲಿ ಭಾಗ ವಹಿಸಿದ ಸ್ತ್ರೀವಾದಿಗಳು, ಮತ್ತೆ ಕೆಲವರು ಮಾರ್ಕ್ಸ್‌ವಾದವನ್ನು ಒಪ್ಪಿಕೊಂಡರೂ ಅದು ಮಹಿಳಾ ಪ್ರಶ್ನೆಯನ್ನು ಅರ್ಥೈಸಲು ಅಪರಿಪೂರ್ಣ ವೆಂದು ಮಾರ್ಕ್ಸ್‌ವಾದವನ್ನು ಸ್ತ್ರೀವಾದಿ ನೆಲೆಯಿಂದ ವಿಸ್ತರಿಸಿದವರು. ಪ್ರಭುತ್ವವು ವರ್ಗ ಶೋಷಣೆಯ ಸಾಧನವಾದರೆ, ಕುಟುಂಬವು ಸ್ತ್ರೀಯನ್ನು ಶೋಷಿಸಲು ಪುರುಷನ ಸಾಧನವಾಯಿತು. ಈ ಎರಡರ ವಿಕಾಸವನ್ನು ವೈಜ್ಞಾನಿಕ ದೃಷ್ಟಿಯಿಂದ ನೋಡಿ ಅವುಗಳ ಬಗ್ಗೆ ವಸ್ತುನಿಷ್ಠ ಅಧ್ಯಯನ ನಡೆಸಿದ ಕೀರ್ತಿ ಫ್ರೆಡರಿಕ್ ಏಂಗೆಲ್ಸ್‌ಗೆ ಸೇರುತ್ತದೆ.[೩]

ಕುಟುಂಬದೊಳಗೆ ಪುರುಷನು ಬೂರ್ಷ್ವಾ ಆಗಿದ್ದರೆ, ಮಹಿಳೆ ಶ್ರಮಜೀವಿಯಾಗಿದ್ದಾಳೆ, ಎಂಬ ವರ್ಗ ವಿಶ್ಲೇಷಣೆಯನ್ನು ಕೊಡುವುದರ ಮೂಲಕ ಮಹಿಳಾ ಸಮಸ್ಯೆಗೆ ಒಂದು ಭೌತವಾದಿ ಸೈದ್ಧಾಂತಿಕ ನೆಲೆ ಒದಗಿಸಿದ್ದು ಎಂಗೆಲ್ಸ್. ಮಾರ್ಕ್ಸ್‌ನ ಮರಣದ ನಂತರ ಏಂಗೆಲ್ಸ್ ಬರೆದ 'The origin of the family private property and the state' ಎಂಬ ಮಹಾಪ್ರಬಂಧದಲ್ಲಿ ತನ್ನ ವಿಚಾರಗಳನ್ನು ವ್ಯವಸ್ಥಿತವಾಗಿ ಪ್ರತಿಪಾದಿಸಿದ್ದಾನೆ. ಎರಡೂ ಲಿಂಗ ಪ್ರಭೇದಗಳ ನಡುವಿನ ಅಸಮಾನತೆಯೇ ಮಾನವ ಜನಾಂಗದಲ್ಲಿ ಹುಟ್ಟಿದ ಮೊದಲ ವೈರುಧ್ಯವಾಗಿರಬೇಕು. ಏಕಪತ್ನಿತ್ವದ ವಿವಾಹ ಪದ್ಧತಿಯೊಳಗೆ ಸ್ತ್ರೀ ಮತ್ತು ಪುರುಷನ ನಡುವೆ ಹುಟ್ಟಿದ ವೈಮನಸ್ಯವು ವ್ಯಕ್ತಿಗಳೊಳಗೆ ಕಾಣಿಸಿಕೊಂಡ ಮೊಟ್ಟ ಮೊದಲ ವರ್ಗ ವೈಮನಸ್ಯದ ಬೆಳವಣಿಗೆಗೆ ಹೊಂದಿಕೊಂಡಿದೆ, ಎಂದು ಏಂಗೆಲ್ಸ್ ಪ್ರತಿಪಾದಿಸಿದ. ಆತನ ಆರ್ಥಿಕ ವ್ಯವಸ್ಥೆಯ ವ್ಯಾಖ್ಯಾನ ಕೀಲಿ ಕೈ ಆಸ್ತಿಯ ಉತ್ತರಾಧಿಕಾರಿತ್ವ. ಇದು ಮೊದಲು ಮಾತೃವಂಶೀಯವಾಗಿತ್ತು. ಆದರೆ ಆಸ್ತಿ ಬೆಳೆದಂತೆ ಅದು ಪಿತೃವಂಶೀಯ ಹಕ್ಕಾಯಿತು. ಮಹಿಳೆಯರಿಗೆ ಉಂಟಾದ ಅತ್ಯಂತ ದೊಡ್ಡ ಪೆಟ್ಟು ಇದು. ಪತ್ನಿಯ ಪತಿನಿಷ್ಠೆ ಅತ್ಯವಶ್ಯಕವೆನಿಸಿ, ಏಕಪತಿತ್ವ ವ್ಯವಸ್ಥೆ ಅಲುಗಿಸಲು ಸಾಧ್ಯವಿಲ್ಲದಷ್ಟು ಬಲವಾಗಿ ಬೆಳೆಯಿತು.

ಮೂಲದ ಸಮುದಾಯ ರೂಪದ ಪಿತೃಪ್ರಧಾನ ಕುಟುಂಬಗಳಲ್ಲಿ ಹೆಂಡತಿಯಾದವಳು ಒಬ್ಬ ಸಾರ್ವಜನಿಕ ದಾಸಿ. ಏಕಪತಿತ್ವ ಪದ್ಧತಿಯೊಂದಿಗೆ ಆಕೆ ಪುರುಷನ ಖಾಸಗಿ ಆಸ್ತಿಯಾದಳು; ಸೇವಕಿಯಾದಳು. ಈ ವಾದದಲ್ಲಿ ಏಂಗೆಲ್ಸ್ ಮಹಿಳೆಯ ಸಮಸ್ಯೆಯನ್ನು ಆಕೆಯ ದುಡಿಮೆಯ ಸಾಮರ್ಥ್ಯಕ್ಕೆ ಇಳಿಸುತ್ತಾನೆ. ಆದ್ದರಿಂದ ಆಕೆಯ ಶಾರೀರಿಕ ದುರ್ಬಲತೆಯ ಅವಕಾಶ ಶೋಷಣೆಯ ಮೂಲವೆನ್ನುತ್ತಾನೆ. ಸಾಮುದಾಯಿಕ ಆಸ್ತಿ ಖಾಸಗಿ ಅಸ್ತಿಯಾಗಿ ಮಾರ್ಪಟ್ಟ ಗಳಿಗೆಯೇ ಹೆಣ್ಣಿನ ಶೋಷಣೆಯ ಗಳಿಗೆಯೂ ಆರಂಭವಾಯಿತು ಎಂದು ಹೇಳುತ್ತಾನೆ. ದುಡಿಮೆಯ ಅಸಾಮರ್ಥ್ಯವೇ ಶೋಷಣೆಯ ಮೂಲ ಕಾರಣವೆಂದಾದಲ್ಲಿ ಆ ದುಡಿಮೆಯ ಸಾಮರ್ಥ್ಯದ ಮೂಲಕವೇ ಆಕೆಯ ವಿಮೋಚನೆ ಸಾಧ್ಯ. ಆದ್ದರಿಂದ :

> ಸಾಮಾಜಿಕ ಉತ್ಪಾದನೆಯಲ್ಲಿ ಸ್ತ್ರೀಯರು ಬೃಹತ್ ಪ್ರಮಾಣದಲ್ಲಿ ಪಾಲ್ಗೊಳ್ಳಲು ತೊಡಗಿದಾಗಲೇ ಮಹಿಳೆಯರ ವಿಮೋಚನೆ ಸಾಧ್ಯ. ಆ ರೀತಿ ತೊಡಗಿದಾಗ ಗೃಹ ಕೃತ್ಯದ ಕರ್ತವ್ಯದ ಹೊರೆ ತೀರಾ ಕಡಿಮೆ ಯಿರುತ್ತದೆ. ಸ್ತ್ರೀ ವಿಮೋಚನೆಯ ಮೊಟ್ಟ ಮೊದಲ ಹಂತವೆಂದರೆ, ಇಡೀ ಸ್ತ್ರೀ ಜಾತಿಯನ್ನು ಸಾರ್ವಜನಿಕ ಕೈಗಾರಿಕೆಯೊಳಗೆ ಮತ್ತೆ ಪ್ರವೇಶಿಸುವಂತೆ ಮಾಡುವುದೇ ಆಗಿದೆ. ಒಂದೊಂದು ಕುಟುಂಬವೂ ಸಮಾಜದ ಆರ್ಥಿಕ ಘಟಕವಾಗುವಂತೆ ಪಡೆದಿರುವ ಗುಣವು ರದ್ದಾಗಬೇಕು.[೪]

ಎಂಬುದು ಏಂಗೆಲ್ಸ್ ವಾದ.

ಮಾರ್ಕ್ಸ್‌ವಾದ ಸ್ತ್ರೀವಾದವನ್ನು ಪ್ರೋತ್ಸಾಹಿಸುತ್ತದೆ ಮತ್ತು ಮುನ್ನಡೆಸುತ್ತದೆ ಎಂದು ಸಮರ್ಥಿಸಿಕೊಳ್ಳುವಲ್ಲಿ ಎರಡು ರೀತಿಯಿಂದ ಪ್ರವೇಶವನ್ನು ಪಡೆಯಬೇಕಾಗುತ್ತದೆ. ಇದನ್ನು ಹೈಡಿ ಹರ್ಟ್‌ಮನ್ (Heide Hertmann) ಗುರುತಿಸುವಂತೆ,

> ಎರಡು ವಿಭಿನ್ನ ಆದರೆ ಪರಸ್ಪರ ಸಮ್ಮತಿ ಸೂಚಿಸುವ ಸಾಮಾಜಿಕ ಸಂಬಂಧ ಗಳು. ಬಂಡವಾಳಶಾಹಿ ಮತ್ತು ಪುರುಷ ಪ್ರಧಾನ ವಿಚಾರಗಳು ಇವು ತಮ್ಮದೇ ಆದ ನೆಲೆಗಳಲ್ಲಿ ಚಲನಶೀಲವೆಂದು ಗುರುತಿಸಿಕೊಳ್ಳುತ್ತವೆ.[೫]

ಎಂದರೆ, ಇಲ್ಲಿ ವರ್ಗ ಮತ್ತು ಲಿಂಗವನ್ನು ಏಕ ರೀತಿಯಲ್ಲಿ ಪರಿಭಾವಿಸಲಾಗಿದೆ ಮತ್ತು ನಿರೂಪಿಸಲಾಗಿದೆ ಎಂದು ಅರ್ಥವಲ್ಲ. ಮಾರ್ಕ್ಸ್‌ವಾದ ಮತ್ತು ಸ್ತ್ರೀವಾದವು ಹೇಗೆ ಯಾವುದನ್ನು 'Inter locket' ಮಾಡುತ್ತದೆ ಎಂಬ ಸೂಕ್ಷ್ಮತೆಯನ್ನು ಬಿಡಿಸಿ ಗ್ರಹಿಸುವುದು ಕಷ್ಟ. ಆದರೆ, ಲಿಂಗ ಭಿನ್ನತೆ (Sexism) ಗುಲಾಮಗಿರಿ (Slavery) ಮತ್ತು ಜನಾಂಗವಾದ (Racism)ವನ್ನು ಸೂಕ್ತ ಸಾಂದರ್ಭಿಕತೆಯಿಂದ ಗ್ರಹಿಸುವಲ್ಲಿ ಈ ಎರಡೂ ಸಿದ್ಧಾಂತಗಳು ಒಂದನ್ನೊಂದನ್ನು ಅವಲಂಬಿಸಿ ಇರಬೇಕಾಗುತ್ತದೆ. ಈ ಮೂಲದಿಂದಲೇ 'ಸಾಮಾಜಿಕ ಬದಲಾವಣೆ' (Social change)ಯ ಹುನ್ನಾರಗಳನ್ನು ಗ್ರಹಿಸಬೇಕಾಗುತ್ತದೆ. ಈ ಗ್ರಹಿಕೆಯಲ್ಲಿ

> ಮಾರ್ಕ್ಸ್ ಬರೆದಂತೆ ಬದಲಾವಣೆಯೇ ಪ್ರಮುಖ ಅಂಶ. ಇದನ್ನೇ

> ಸ್ತ್ರೀವಾದಿ ವಿಮರ್ಶಕಿ ಆ್ಯಂಡ್ರಿಯಾ ಡ್ವಾರ್ಕಿನ್ ಈ ರೀತಿ ಅರ್ಥೈಸುತ್ತಾಳೆ. ಕೆಲವೊಮ್ಮೆ ನಾವು ಈ ಬದಲಾವಣೆಗೆ ಎಷ್ಟೊಂದು ಬದ್ಧರಾಗಿರುತ್ತೇವೆಂದರೆ, ಲೇಖಕರು ಕೂಡ ಮಾನವಿಕ ಕುತೂಹಲಗಳನ್ನು ತಮ್ಮ ಕೃತಿಯಲ್ಲಿ ಬಿಂಬಿಸುತ್ತಾರೆ ಎನ್ನುವ ಅಂಶವನ್ನು ಸಹ ಬದಲಾಯಿಸ ಹೊರಟಿರುತ್ತೇವೆ. ಆದ್ದರಿಂದ ಪ್ರತಿಯೊಂದು ಕ್ರಿಯೆಯೂ ಅಂತ್ಯದಲ್ಲಿ ಕಾರಣಿಕತೆಯ ಸ್ವಭಾವವನ್ನು ಪಡೆಯುತ್ತದೆ. ಅವುಗಳಲ್ಲಿ ಸಾಹಿತ್ಯಾಧ್ಯಯನವೂ ಒಂದು. ಆದರೆ ಇದನ್ನು ಸೌಂದರ್ಯ ಪ್ರಜ್ಞೆಯಲ್ಲಿ ಕ್ಷುಲ್ಲಕ ಎಂದೆಣಿಸಲಾಗದು. ಬದಲಿಗೆ ಓದುಗನೊಬ್ಬನನ್ನು ಇನ್ನೊಂದು ಪ್ರಪಂಚಕ್ಕೆ ಕೊಂಡೊಯ್ಯುವ ಮಾಧ್ಯಮದಂತೆ ಪರಿಗಣಿಸಬೇಕು.[೬]

ಎಂಬ ಪ್ರಜ್ಞೆ ಇರಲೇ ಬೇಕಾಗುತ್ತದೆ. ಅಲ್ಲದೆ, ಇಲ್ಲಿ 'I am very much conccerned that feminist critics become a useful part of the womens movement' ಎಂಬ ಲಿಲ್ಲಿಯನ್ ಎಸ್. ರಾಬಿನ್‌ಸನ್ (Lillian S. Robinson)ನ ಮಾತುಗಳು ಮುಖ್ಯವಾಗುತ್ತದೆ. ರಾಜಕೀಯ ನೆಲೆಯಿಂದ ಇದನ್ನು ಪರಿಭಾವಿಸುವುದಾದರೆ, 'ಎಲ್ಲವೂ ರಾಜಕೀಯ'ವಾಗಿ ವ್ಯಕ್ತವಾಗುವ ಸಂದರ್ಭದಲ್ಲಿ ಸಾಹಿತ್ಯವನ್ನು ನಿರ್ವಚಿಸುವ ವಿಮರ್ಶೆಯ 'ಸತ್ಯಗಳನ್ನು' 'ಸಾರ್ವತ್ರಿಕ'ವಾಗಿ ವಿಶ್ಲೇಷಿಸುವಲ್ಲಿ 'ಆಂತರಿಕ'ವಾಗಿ ಕಾರ್ಯಪ್ರವೃತ್ತಗೊಳ್ಳುವ 'ರಾಜಕೀಯ'ವನ್ನು ಮಾನ್ಯ ಮಾಡಬೇಕಾಗುತ್ತದೆ. ವಿಶಾಲಾರ್ಥದಲ್ಲಿ ಇದನ್ನು 'ಅಧಿಕಾರ' 'ಅಧಿಕಾರದೊಂದಿಗೆ ಸಂಬಂಧ' ಎನ್ನಬಹುದು. ವ್ಯಕ್ತಿಗಳ ಸಂಬಂಧಗಳು ಅನಿವಾರ್ಯವಾಗಿ ವೈಯಕ್ತಿಕತೆಗೆ ಒಳಪಡುವಲ್ಲಿ 'ವೈಯಕ್ತಿಕವೂ ರಾಜಕೀಯ'ವಾಗಿದೆ. (ಇದು ಆಲ್ಥೂಸರ್‌ನ ಅಭಿಪ್ರಾಯ) ಇದೇ ೧೯೬೦ ರ ಸ್ತ್ರೀವಾದಿ ಘೋಷಣೆಯಾಗಿ ಪರಿಣಮಿಸಿದೆ. ಸಂಬಂಧಗಳಲ್ಲಿನ ಈ ಲಿಂಗಾಧಾರಿತ ಭಿನ್ನತೆಯನ್ನು ವಿಲಿಯಂ ರೀಚ್ (Willeam Reich) ಎಂಬ ಮಾರ್ಕ್ಸ್‌ವಾದಿ 'Sexual Politics' ಆಗಿ ಗುರುತಿಸುತ್ತಾನೆ. ಇದನ್ನೇ ಕೇಟ್ ಮಿಲೆಟ್ (Kate Millett) ೧೯೭೦ರಲ್ಲಿ ಆಕೆಯ ಕೃತಿಯ ಶೀರ್ಷಿಕೆಯಾಗಿ ಬಳಸುತ್ತಾಳೆ. ಇಲ್ಲಿ 'ಲಿಂಗಾಧಾರಿತ' ರಾಜಕೀಯವನ್ನು ಸಾಹಿತ್ಯ ಅಧ್ಯಯನದಲ್ಲಿ 'ಪರಿಚಯಿಸುವ' ಮೂಲಕವಾಗಿ ಪುರುಷ ವಿಮರ್ಶಕರ ಪಕ್ಷಪಾತ ಧೋರಣೆಯನ್ನು ನಿಖರವಾಗಿ ಕಂಡುಕೊಳ್ಳುವುದು ಸಾಧ್ಯವಾಗುತ್ತದೆ. ಸಾಮಾಜಿಕ ಸಂರಚನೆಯಲ್ಲಿ 'ತಾತ್ತ್ವಿಕತೆ (Ideology) ಎಂಬುದು ಸಂಪೂರ್ಣವಾಗಿ ಸಂವಿಧಾನಗೊಂಡ ನಿಬಂಧನೆಯಾಗುವುದಿಲ್ಲ. ಕಾರಣ ಎಲ್ಲವೂ ಉತ್ಪಾದನೆಗಳಾದಾಗ (ಸಾಹಿತ್ಯವೂ ಸೇರಿದಂತೆ) ಸಮರ್ಥನೆ ಎನ್ನುವುದು ಸಂವೇದನೆಯ ನೆಲೆಯಲ್ಲಿ ಸೀಮಿತಗೊಳ್ಳುವುದಿಲ್ಲ. ಈ ಪರಿಗ್ರಹಿಕೆಯ ನೆಲೆಯಲ್ಲಿಯೆ ಲೂಯಿಸ್ ಆಲ್ಥೂಸರ್ 'ತಾತ್ತ್ವಿಕತೆ' (Ideology) ಯನ್ನು ಬಳಸಿರುವುದು ಕೂಡ. ಅಲ್ಲದೆ ಪಿಯರೆ ಮ್ಯಾಷರೆ, ಟೆರ್ರಿ ಈಗಲ್ಟನ್ ಇವರು ಪರಿಭಾವಿಸುವ 'ಐಡಿಯಾಲಜಿ'ಯೂ ಆಲ್ಥೂಸರ್‌ನ ಮೂಲದಿಂದಲೇ ಬಂದಿರುವುದಾಗಿದೆ. 'Ideology' ಎಂಬುದು ನಿಸ್ಸಂದಿಗ್ಧವಾಗಿ 'ಲಿಂಗಾಧಾರಿತ ತಾತ್ತ್ವಿಕತೆ'ಯನ್ನು ಪ್ರತಿಬಿಂಬಿಸುವ ಘೋಷಣೆಯಾಗಿದೆ.

ಉದಾಹರಣೆಗೆ ಸಾಮಾಜಿಕವಾಗಿ ಮಾನ್ಯ ಮಾಡಲಾಗಿರುವ ಸ್ತ್ರೀ-ಪುರುಷರ ವರ್ತನಾ ವಿನ್ಯಾಸಗಳು. 'ತಾತ್ತ್ವಿಕತೆ'ಯೆಂಬುದು 'ಅಧಿಕಾರ ರಹಿತ' ಪ್ರತಿಷ್ಠೆಯಿಂದಲೇ ಸಮರ್ಥನೆಗೆ ಒಳಪಡುತ್ತದೆ. 'ಪ್ರತಿಷ್ಠಿತ ತಾತ್ತ್ವಿಕತೆ'ಯು ಬರಹಗಾರನಿಂದ ಗುರುತಿಸಲಾಗುವ ಪ್ರೇರಣೆಯಾಗಿ ಉಳಿದ ಭಾಗವಾಗುತ್ತದೆ. ಇದನ್ನೇ ಕನ್‌ರಡ್ (Conered) 'ಸಾರ್ವಭೌಮ ತಾತ್ತ್ವಿಕತೆ' (Supereor ideology)ಯೆಂದು 'Heart of darkness'ನಲ್ಲಿ ೧೯೦೨ರಲ್ಲಿ ಗುರುತಿಸುತ್ತಾನೆ. ಮಾರ್ಕ್ಸ್‌ವಾದಿ ಸ್ತ್ರೀವಾದಿ ವಿಮರ್ಶಕರು 'ತಾತ್ತ್ವಿಕತೆ'ಯ ಗ್ರಹಿಕೆಯನ್ನು 'ಕನ್‌ರಡ್'ನ ಪ್ರಭಾವದಿಂದಲೇ ಮುಂದಿಡುತ್ತಾರೆ. ಥಾಮಸ್ ಹಾರ್ಡಿ (Thomas Hord)ಯನ್ನು ಅಧ್ಯಯನ ಮಾಡಿದ ಪೆನ್ನಿ ಬೂಮ್ಲ್ಹಾ (Penny Bonmelha) ತಾತ್ತ್ವಿಕತೆಯನ್ನು 'A complex system representations by which people are insterted as individual subjects into the social formation' ಎಂದು ವ್ಯಾಖ್ಯಾನಿಸುತ್ತಾಳೆ. ಎಲ್ಲಾ ತಾತ್ತ್ವಿಕತೆಯಂತೆ, ಲಿಂಗಾಧಾರಿತ ತಾತ್ತ್ವಿಕ (Sexist ideology)ಯು ಕೂಡ ಪುರುಷನ ಪರಮಾಧಿಕಾರದ ತಾತ್ತ್ವಿಕತೆಯೇ ಆಗಿದೆ. ಈ ತಾತ್ತ್ವಿಕತೆಯು ಸಮಾಜದಲ್ಲಿ ಯಾವುದು, ಹೇಗಿರಬೇಕು ಎಂದು ಪೂರ್ವಭಾವಿಯಾಗಿ ನಿರ್ಧರಿಸುವುದರಿಂದ ನಾಮಕಾವಸ್ಥೆಯಾಗಿ ಹುಸಿ ಪರಿವರ್ತನಿಯಾ ಉತ್ಪಾದನಾ ಘೋಷಣೆಗಳನ್ನು ಸಮಾಜಕ್ಕೆ ಕೊಡುಗೆಯಾಗಿ ನೀಡುತ್ತದೆ. ಇಂತಹ ವೈರುಧ್ಯಗಳು ಲಿಂಗ ಸಮಾನತೆಯ ಆಶಯವನ್ನು, ಕಾರ್ಮಿಕ ಬಲವನ್ನು ಮತ್ತು ಲಿಂಗ ಅಸಾಮಾನತೆಯ ವಾಸ್ತವತೆಯ ನಡುವೆ ಅಂತರವನ್ನು ಉಂಟು ಮಾಡುತ್ತದೆ. ಸಮಾನತೆಯ ಹುಸಿ ನೈಜತೆಗಳೇ 'ಸಮಾಜ ಅವಕಾಶಗಳ' ತಾತ್ತ್ವಿಕತೆಯನ್ನು ಸದಾ ಅದುಮುತ್ತದೆ. ಸ್ತ್ರೀಯರನ್ನು ಹೇಗೆ ನೋಡಲಾಗುತ್ತದೆ ಎಂಬುದನ್ನು ಸಾಹಿತ್ಯ ಬರಹಗಳು ಪ್ರತಿಬಿಂಬಿಸುತ್ತವೆ ಅಲ್ಲದೆ ಈ ಅಂತರ್ಗತ ಗ್ರಹಿಕೆ ವಿಮರ್ಶೆಯ ಆಯಾಮದಿಂದಲೂ ಕಾಣಿಸಿಕೊಳ್ಳುತ್ತದೆ. ಸೂಕ್ಷ್ಮವಾಗಿ 'ಓದುವಿಕೆ'ಯು ಇದನ್ನು ವ್ಯಕ್ತಗೊಳಿಸುತ್ತದೆ.

> ವಿವಿಧ ಸ್ತರದ ವಿಮರ್ಶಾ ಪದ್ಧತಿಗಳಲ್ಲಿ 'ಏಕೀಭಾವ' ಪದ್ಧತಿಯಿಂದ ಸಾಕಷ್ಟು ರೂಪಕಾಲಂಕಾರಗಳನ್ನು ಪೇರಿಸಿಟ್ಟು, ಉನ್ನತ ಸ್ತರದ ಸಾಹಿತ್ಯ ಕೃತಿಗಳು ತಮ್ಮ ರಚನೆಯಲ್ಲಿ ಒಕ್ಕಟ್ಟನ್ನು ಸಾಧಿಸುವಂತೆ, ಸ್ತ್ರೀವಾದಿ ವಿಮರ್ಶೆಯಲ್ಲಿ 'ಅಸಂಗತತೆ' ಆ ಮಟ್ಟದ ಪ್ರಭಾವವನ್ನು ಗುರುತಿಸುತ್ತದೆ. ಈ ಎರಡು ನಿರ್ಣಾಯಕ ಅಂಶಗಳನ್ನು ಅರ್ಥವತ್ತಾಗಿ ಬಳಸಿಕೊಳ್ಳುವಾಗ ಮಾತ್ರ ವಿಭಿನ್ನತೆ ಕಂಡುಬರುತ್ತದೆ. ಇದು ಉದಾರವಾದಿ ಮಾನವತಾ ವಿಮರ್ಶೆಯಲ್ಲ, ಏಕೀಭಾವ ಸಿದ್ಧಾಂತವು ಕೃತಿಯ ಸಾಮಾನ್ಯ ಓದುಗನೊಬ್ಬನಿಗೆ ತೋರುವ, ಅಂತರಗಳನ್ನು ಒಂದುಗೂಡಿಸುವ ಕಾರ್ಯ ನಿರ್ವಹಿಸುತ್ತದೆ. ಇದರ ಪ್ರಮುಖ ಉದ್ದೇಶವೆಂದರೆ, ಕೃತಿಯಲ್ಲಿ ಕಂಡು ಬರುವ ಎರಡು ವಿವಿಧ ದೃಷ್ಟಿಕೋನಗಳ ಅಂಶಗಳನ್ನು ಒಂದುಗೂಡಿಸಿ, ಅದರ ಸಹಬದ್ಧತೆಯನ್ನು ಎತ್ತಿ ಹಿಡಿಯುವುದು, ಇಲ್ಲವಾದಲ್ಲಿ ಯಾವುದು ಶ್ರೇಷ್ಠವಲ್ಲವೊ ಅದನ್ನು ಸಾಹಿತ್ಯವೆಂದು ಪರಿಗಣಿಸಲಾಗುವುದಿಲ್ಲ. ಇನ್ನು

> ಮಾರ್ಕ್ಸ್‌ವಾದಿ ವಿಮರ್ಶೆಯ ಮತ್ತು ಇದರ ವಿಚಾರಗಳಿಂದ ಹೊರ ಬಂದಂತಹ ಸ್ತ್ರೀವಾದಿ ವಿಮರ್ಶೆಯ ಉದ್ದೇಶವೆಂದರೆ, ಕೃತಿಯನ್ನು ಆದಷ್ಟು ವಿಭಜಿಸುವುದೇ ಹೊರತು, ಅದನ್ನು ಲೇಖಕನ ದೃಷ್ಟಿಕೋನಕ್ಕಿಂತ ಹೆಚ್ಚಿನ ಮಟ್ಟದಲ್ಲಿ ಒಂದುಗೂಡಿಸುವುದಲ್ಲ.[೭]

ಥಿಯಾಡರ್ ಡಬ್ಲೂ ಅಡ್ರಿನೊ (Theodor W.Adorno) ಪ್ರಕಾರ 'ಸಫಲ ಕಾರ್ಯ'ವೆನ್ನುವುದು 'ಸೌಹಾರ್ದತೆಯ ಕೃತಕತೆ'ಯ ವೈರುಧ್ಯಗಳಲ್ಲಿ ಇರುವುದಿಲ್ಲ; ಬದಲಾಗಿ ಆರಂಭದ ಬಿಂದುವಿನ ವೈರುದ್ಧ್ಯಗಳ ಮೂಲಕ ಸೌಹಾರ್ದತೆಯ ಹೊಳಪು ನೈಜವಾಗಿ ಹಾಗೂ ಹೊಂದಿಕೆಯಾಗದಿರುವ ಋಣಾತ್ಮಕವಾದ ಅದರ ಅಣುಮೂಲದ ರಚನೆ, ಇವುಗಳ ಕಾರ್ಯದಲ್ಲಿ ಹುದುಗಿವೆ. ವಿಮರ್ಶೆಯ ಕಾರ್ಯವೇ ಅದು ಏನು ಎಂಬುದನ್ನು ಬಹಿರಂಗ ಪಡಿಸುತ್ತವೆ. ಇದಕ್ಕೆ ಉದಾಹರಣೆಯಾಗಿ ಮೇರಿ ಪೂವ್ಹೆ (Mary Poovey)ಯ ಜೇನ್ ಆಸ್ಟಿನ್‌ಳ ಕಾದಂಬರಿಯ ಕುರಿತ ಪ್ರತಿಕ್ರಿಯೆಯನ್ನು ಗಮನಿಸಬಹುದು.

> ಜೇನ್ ಆಸ್ಟಿನ್ ಕಾದಂಬರಿಗಳಲ್ಲಿ ಸುಖಾಂತ್ಯದ ಮದುವೆಗಳ ಬಗ್ಗೆ ಯಾವುದೇ ಉದಾಹರಣೆ ಇಲ್ಲ. ಆದರೂ ಪರಿಸ್ಥಿತಿಯ ಒತ್ತಡಗಳಿಂದಾಗಿ ಉಂಟಾಗುವ ಶುಭ ವಿವಾಹಗಳು ಅಂತಹ ಅವಶ್ಯಕ ಸಮಾರಂಭಗಳ ಅರ್ಥ, ಪ್ರಾಮುಖ್ಯತೆಯನ್ನು ಬಿಂಬಿಸುತ್ತವೆ.[೮]

ಬಂಡವಾಳಶಾಹಿಯ ವೈರುದ್ಧ್ಯಗಳ ಯಾವುದೇ ವಿಧಾನಗಳ ಪ್ರಾತ್ಯಕ್ಷಿಕೆಗಳು ತಕ್ಷಣದ ಹಾಗೂ ನಿಧಾನಗತಿಯ ವೈರುದ್ಧ್ಯಗಳ ಆತ್ಯಂತಿಕ ಪರಿಣಾಮವನ್ನು ಗ್ರಹಿಸಲಾರವು. 'ಸಮಾನತೆಯ ಪ್ರಾತ್ಯಕ್ಷಿಕೆ'ಯ ಮಾರ್ಕ್ಸ್‌ವಾದಿಯ ವೈರುದ್ಧ್ಯಗಳ ನೆಲೆಯಲ್ಲಿ (Contradiction of marxism) ಪರಿಭಾವಿಸುವುದು ಅಸಾಧ್ಯ. ವಿಶಿಷ್ಟವಾದ ವಿಧಾನಗಳ ವಿಮರ್ಶೆಯ ವೈರುದ್ಧ್ಯಾತ್ಮಕತೆಯ ಅದರ ಕೆಲವು ಸಮಸ್ಯೆಗಳನ್ನು ಸೇರಿಸಿಕೊಳ್ಳದೆ ಇರುವುದಿಲ್ಲ. ಪಿತೃಸತ್ತೆಯ ವೈರುದ್ಧ್ಯಗಳನ್ನು ವಿರೋಧಿಸಿಯೇ ಸ್ತ್ರೀವಾದದ ವೈರುದ್ಧ್ಯಗಳು ರಚನೆಗೊಳ್ಳಬೇಕಾಗುತ್ತದೆ. ಇದನ್ನು ನಿಖರವಾಗಿ ಗುರುತಿಸುವುದು ಕಷ್ಟ. ಸ್ತ್ರೀಯರ ವ್ಯಕ್ತಿತ್ವದ ಬೆಳವಣಿಗೆಯಲ್ಲಿ 'ತಂದೆ'ಯ ವ್ಯಕ್ತಿತ್ವವು ಗಾಢವಾಗಿ ಪ್ರಭಾವಿಸುವ ಕಾರಣ ಉತ್ತಮ ವ್ಯಕ್ತಿತ್ವದ ತಂದೆಯ ಗುಣಲಕ್ಷಣಗಳು ಮಗಳನ್ನು ಅರಿವಿಲ್ಲದೆ ನಿಯಂತ್ರಿಸುವುದು. ಇದನ್ನು ಜೆಲ್ ಜ್ವೀಡಿ (Jill Jweedie)ಯು Letters from a fainthearted feminist' ಎಂಬ ಕೃತಿಯಲ್ಲಿ ಸ್ತ್ರೀಯರ ಮಾನಸಿಕ ರೋಗಗಳ ಹಲವು ಲಕ್ಷಣಗಳ ಮೇಳೈಸುವಿಕೆ (Syndrome)ಯಲ್ಲಿ ನಿಖರವಾಗಿ ಗುರುತಿಸುತ್ತಾಳೆ.

> ಬಲ-ಪಂಥೀಯ ಪ್ರತಿಪಾದಕರಾದ ಸ್ಕಾಫ್ಲ ಮತ್ತು 'ಮಹಿಳೆ ಮಹಿಳೆಯಾಗಿ' ಎಂಬ ಸಂಘಟನೆಗಳು ಸ್ತ್ರೀವಾದದ ಬಗೆಗಿನ ಇವರ ವಿರೋಧ ಅಭಿಪ್ರಾಯಗಳನ್ನು The Female Woman (1973)ಯಲ್ಲಿ ಅರಿಯನ್ನ ಸ್ಟಾಟಿಸ್ಸಿನೊಪೌಲಸ್ ವ್ಯಕ್ತಪಡಿಸಿದ್ದಾರೆ. ಇದು ಜರ್ಮನ್ನೈನ್‌ಯ ಗ್ರೀರ್ಸ್

> The female eunuch (1970) ಗೆ ಉತ್ತರ ನೀಡುತ್ತದೆ. ಮಿಡ್ಜ್ ಡಕ್ಟರ್‌ನ The New Chastity (1972) ಪತ್ರಿಕೆಗಳು ಸ್ತ್ರೀ ವಿಮೋಚನೆಯ ವಿರುದ್ಧದ ವಾದಗಳನ್ನು ಒಳಗೊಂಡಿದ್ದವು. ಇವರಲ್ಲಿ ವಿಶ್ರಾಂತ ಸ್ತ್ರೀವಾದ ಪ್ರತಿಪಾದಕರು ಹಲವರಿದ್ದರು. ಅವರಲ್ಲಿ ಪ್ರಮುಖರಾದವರೆಂದರೆ ಬೆಟ್ಟಿ ಪ್ರೈಡಾನ್. ೧೯೬೩ರಲ್ಲಿ ಸ್ತ್ರೀ ಅನುಭವದ ಒರತೆಯಲ್ಲಿ 'ನಮ್ಮ' ಸ್ತ್ರೀವಾದಕ್ಕೆ ಹುಟ್ಟು ನೀಡಿದ್ದವರಲ್ಲಿ ಇವರು ಪ್ರಮುಖರು. ೧೯೮೧ ರಲ್ಲಿ ಸ್ತ್ರೀವಾದವನ್ನು ಹಾದಿ ತಪ್ಪಿಸುವ ಪ್ರಯತ್ನ ದಿಂದಾಗಿ, ಲಿಂಗಾಧಾರಿತ ರಾಜಕೀಯವು ಸ್ತ್ರೀವಾದಿಗಳ ಪ್ರತಿಕ್ರಿಯೆಯ ಉಗ್ರ ಪ್ರತಿರೂಪ ಎಂದು ವಾದಿಸಲಾಯಿತು[೮]

ಎಂಬ ಸರ್ವೇಕ್ಷಣೆ ಮುಖ್ಯವಾಗುತ್ತದೆ.

ಪಿತೃಸತ್ತೆಯನ್ನು ಮಾರ್ಕ್ಸ್‌ವಾದಿ ಸ್ತ್ರೀವಾದವು 'Ideology' (ಅಲ್ಥೂಸರ್‌ನ ಗ್ರಹಿಕೆಯಂತೆ)ಯನ್ನು ಆಂಟೋನಿಯೋ ಗ್ರಾಂಶಿ (Antonio Gramsci) ಹೇಳುವ 'Hegemony'ಯ ಪರಿಗ್ರಹಿಕೆಯ ನೆಲೆಯಿಂದ ಪ್ರತಿಬಿಂಬಿಸುತ್ತದೆ. ಯಾವುದನ್ನು ರೇಮಂಡ್ ವಿಲಿಯಮ್ಸ್ (Raymond Williams) 'ಅರ್ಥಗಳ ಮತ್ತು ಮೌಲ್ಯಗಳ ಒಂದು ಜೀವಂತ ವ್ಯವಸ್ಥೆ' ಎಂದು ಹೇಳುತ್ತಾನೋ, ಅವುಗಳ 'ಸಂಯೋಜನೆ ಮತ್ತು ಸಂರಚನೆ' ಅಲ್ಲದೆ ಅವುಗಳ ಕಾರ್ಯಗತಗೊಳ್ಳುವಿಕೆಯ ಅನುಭವ ಮತ್ತು ಖಚಿತ ಗ್ರಹಣ ಸಾಮರ್ಥ್ಯ' : ಈ ಹೆಜಮನಿ ಎಂಬುದು 'ವಾಸ್ತವತೆಯನ್ನು ನೈಜರೂಪದಲ್ಲಿ ಗ್ರಹಿಸುವ ಸಾಮಾಜಿಕ ಪ್ರಜ್ಞೆಯನ್ನು ವ್ಯಕ್ತಿಗಳಲ್ಲಿ ಮೂಡಿಸುತ್ತದೆ'. ಇಲ್ಲಿ :

> ಮೂಲಭೂತ ಸ್ತ್ರೀವಾದದ ಪ್ರಮುಖ ಉದ್ದೇಶವೆಂದರೆ, ಪುರುಷ ಪ್ರಧಾನ ವ್ಯವಸ್ಥೆಯ ಪರಿಣಾಮವಾಗಿ ಸ್ತ್ರೀಯ ಬದುಕಿನಲ್ಲಿ ಉಂಟಾಗುವ ವಾಸ್ತವಿಕತೆಯ ಅವ್ಯವಸ್ಥೆಯನ್ನು ಸರಿದೂಗಿಸುವುದಾಗಿದೆ. ಆದ್ದರಿಂದ ಸ್ತ್ರೀವಾದಿ ವಿಮರ್ಶೆಯು ಪ್ರಬಲ ಯಾಜಮಾನಿಕ ವ್ಯವಸ್ಥೆಯನ್ನು ಅಥವಾ ಓದುಗನನ್ನು ತಡೆಗಟ್ಟಿ ಅದಕ್ಕೆ ಸಂವಾದಿಯಾಗಿ ನಿಲ್ಲಬಲ್ಲ ಶಕ್ತಿ ಹೊಂದಿದೆ.[೧೦]

ಇದನ್ನೇ ಪೌಲ್ ರಿಕೊರ್ (Paul Ricoeur) 'Hermeneutics of suspicion' ಎಂದು ಕರೆಯುತ್ತಾಳೆ. ಈ ನೆಲೆಯಲ್ಲಿ ಸ್ತ್ರೀವಾದಿ 'Gynoumtric' ಸ್ತ್ರೀ-ಕೇಂದ್ರಿತ ನಿರ್ವಚನಗಳು ಪುರುಷರ ವಿಮರ್ಶೆಗಳು ಲಿಂಗ ಮುಕ್ತವಾಗಿ ಮತ್ತು ಸಾರ್ವತ್ರಿಕವಾಗಿ ವಿಶ್ಲೇಷಣೆಗಳಾಗ ಬಾರದೆಂದು ಒಪ್ಪಿಸುತ್ತವೆ. ಆಯಾ ನೆಲೆಗಳಲ್ಲಿ ಪುರುಷಾತ್ಮಕ ರಚನೆಗಳು ಎಂದೂ 'ಮಾನವ ಸ್ಥಳಾವಕಾಶಗಳನ್ನು' ಪ್ರತಿನಿಧಿಸಲಾರವು ಎಂಬುದು ಇಲ್ಲಿ ಮುಖ್ಯ. ಪಿತೃಸತ್ತೆಯು ಸಾಂಸ್ಕೃತಿಕ ಅಂಶಗಳಿಂದ ನಿಯಂತ್ರಿತವಾಗಿದ್ದು ಅದು ಅಪ್ರಜ್ಞಾಪೂರ್ವಕ ನೆಲೆಯಲ್ಲಿ ಕಾರ್ಯ ಪ್ರವೃತ್ತ ಗೊಳ್ಳುವುದರಿಂದ ಸ್ತ್ರೀಯರ ಕುರಿತ ಭಾಷಿಕ ರಚನೆಗಳೆಲ್ಲ ಅಪರಿಪೂರ್ಣ ರಚನೆಗಳಾಗಿವೆ.

ಪಿತೃಸತ್ತೆಯು ನಿರಂತರವಾಗಿ ಸ್ತ್ರೀಯರ ಉತ್ಪಾದನಾ ಶಕ್ತಿಯ ಮೇಲೆ, ಅವರ ವ್ಯಕ್ತಿತ್ವದ ಮೇಲೆ ನಿಯಂತ್ರಣವನ್ನು ಸಾಧಿಸಿರುವುದು ಇದಕ್ಕೆ ಮುಖ್ಯ ಕಾರಣವಾಗಿವೆ. ಬಂಡವಾಳಶಾಹಿ ಸಮಾಜದಲ್ಲಿ ಸ್ತ್ರೀವಾದವಾಗಲಿ, ಮಾರ್ಕ್ಸ್‌ವಾದವಾಗಲಿ ಸಂಪೂರ್ಣ ಸ್ವಾಯತ್ತ ವಿಚಾರಗಳಾಗಿ ಉಳಿಯಲು ಸಾಧ್ಯವಿಲ್ಲ. ಲಿಂಗಕ್ಕೆ ಸಂಬಂಧಿಸಿದ ಸಿದ್ಧಾಂತವು ಸಾಂಸ್ಕೃತಿಕ ಬಳಕೆಯಲ್ಲಿ ಪುನರ್‌ಸೃಷ್ಟಿಯಾಗಿ ರೂಪುಗೊಳ್ಳುತ್ತಿರುತ್ತದೆ. ಈ ನೆಲೆಯಲ್ಲಿ ಸಂರಚನಾ ವಾದವು ಉಳಿದೆಲ್ಲ ವಿಮರ್ಶಾ ಪರಂಪರೆಗಳನ್ನು ತಿರಸ್ಕರಿಸಿದೆ, ಸ್ಥಳಾಂತರಿಸಿದೆ. ಸಾಂಸ್ಕೃತಿಕ ಪ್ರಶ್ನೆಯನ್ನು ಪಠ್ಯಕ್ಕಷ್ಟೇ ಮೀಸಲಾಗಿರಿಸಿದರೆ, ಆಗ ಆರ್ಥಿಕ ಸಂಬಂಧಗಳ ಯಾಂತ್ರಿಕ ಅಭಿವ್ಯಕ್ತಿಯಾಗಿ ಸಾಹಿತ್ಯ ನಿಂತುಬಿಡುತ್ತದೆ. ಆ ಅರ್ಥದಲ್ಲಿ ಟೆರ್ರಿ ಈಗಲ್‌ಟನ್ ಕೃತಿ ಯೊಂದನ್ನು ವಿವಿಧ ರಚನೆಗಳ ಸಂಕೀರ್ಣವಾದ ಚಾರಿತ್ರಿಕ ಅಭಿವ್ಯಕ್ತಿಯಾಗಿ ನೋಡುತ್ತಾನೆ. ಪಠ್ಯವೊಂದು ಸೃಷ್ಟಿಯಾಗುವ ಚಾರಿತ್ರಿಕ ಹಿನ್ನೆಲೆಯಲ್ಲಿರುವ ಸಾಹಿತ್ಯಿಕ ಪ್ರತಿಬಂಧಕಗಳನ್ನು ಶೋಧಿಸುವ ಉಪಯುಕ್ತ ಮಾರ್ಗವಾಗಿ ಅದನ್ನು ಬಳಸಬಹುದು. ಪಠ್ಯದ ಕೇಂದ್ರವನ್ನು ಸಂಪೂರ್ಣವಾಗಿ ಸ್ಥಳಾಂತರಿಸದಿದ್ದರೂ ಈಗಲ್‌ಟನ್ ವ್ಯಾಖ್ಯೆಯೇ ಉತ್ಪಾದನೆಯ ಸ್ಥಿತಿಯನ್ನು 'ಕಲೆ'ಯು ಪರಿವರ್ತಿಸಬಹುದೆಂಬ ಆದರ್ಶದ ದೃಷ್ಟಿಕೋನವನ್ನು ಪ್ರಶ್ನಿಸುತ್ತದೆ. ಯಾವುದೇ ನಿರ್ದಿಷ್ಟ ಕಾಲಾವಧಿಯು ಅದಕ್ಕಿಂತ ಪೂರ್ವದ ಸಾಹಿತ್ಯಕ ಉತ್ಪಾದನಾ ವಿಧಾನದ ಅವಶೇಷಗಳನ್ನು ಹೊಂದಿರುತ್ತವೆ. ಅಥವಾ ಮುಂದೆ ರೂಪಗೊಳ್ಳಬಹುದಾದ ವಿಧಾನಗಳನ್ನು ತನ್ನೊಳಗೆ ಹೊಂದಿರುತ್ತವೆ. ಮತ್ತು ಅದರಿಂದ ಪ್ರಧಾನ ಮಾದರಿಯ ಲಕ್ಷಣಗಳು ಸೃಷ್ಟಿಯಾಗಬೇಕಾದ ಪಠ್ಯದ ಅಂತರ್ಯದಲ್ಲೇ ಅದು ಯಾವ ರೀತಿ ಕಾರ್ಯ ಪ್ರವೃತ್ತವಾಗ ಬೇಕೆಂಬುದನ್ನು ನಿರ್ದೇಶಿಸುತ್ತವೆ. ಅದರೊಳಗೆ ಯಾರಿಂದ, ಯಾರಿಗಾಗಿ ಉತ್ಪಾದಿತ 'ಗೊಂಡಿದೆ ಎಂಬ ಅಂಶಗಳನ್ನು ಒಳಗೊಂಡಿರುತ್ತವೆ. ಆದ್ದರಿಂದ ಪುರುಷರಿಗಿಂತ ವಿಭಿನ್ನ ರೀತಿಯಲ್ಲಿ ಸ್ತ್ರೀಯರ ಸಾಹಿತ್ಯ ಉತ್ಪಾದನೆಯ ಸಂಬಂಧಗಳು ಮತ್ತು ಶಕ್ತಿಗಳೊಂದಿಗೆ ನೆಲೆಸಿದ್ದರೆ, ಆಗ ಅದು ಪಠ್ಯದೊಳಗೆ ಅಂತರ್ಗತವಾಗಿರುತ್ತದೆ. ಸಮಾಜವಾದಿ ಸ್ತ್ರೀವಾದಿ ವಿಮರ್ಶಕಿಯರಲ್ಲೊಬ್ಬಳಾದ ಕೋರಾ ಕಾಪ್ಲಾನ್ ಸ್ತ್ರೀವಾದಿ ವಿಮರ್ಶೆಯಲ್ಲಿ ಉಂಟಾಗಿರುವ ಎರಡು ಭಿನ್ನ ಮಾರ್ಗಗಳನ್ನು ಗುರುತಿಸುತ್ತಾಳೆ: ಒಂದು, ಉದಾರವಾದಿ ಮಾನವತಾವಾದಿ, ಮನೋಲೈಂಗಿಕ ಅನುಭವವು ಸಾಮಾಜಿಕ ಶೋಷಣೆಗಿಂತ ಮುಖ್ಯವಾದದ್ದೆಂದು ತಿಳಿಯುವ ಬಗೆ. ಮತ್ತೊಂದು ಸಮಾಜವಾದಿ ಸ್ತ್ರೀವಾದಿಗಳು ಪಠ್ಯದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಅಂಶಗಳನ್ನು ಗುರುತಿಸಿ, ಕಲ್ಪಕತೆ ಮತ್ತು ಅಭಿಲಾಷೆಯೆರಡೂ ಅರಾಜಕತೆ ಮತ್ತು ಹಿನ್ನೆಲೆಯನ್ನುಂಟು ಮಾಡುವಂಥದ್ದು ಎಂಬುದನ್ನು ಗುರುತಿಸುವುದು. ಉದಾರವಾದಿ ಮಾನವತಾವಾದಿಗಳು ಸ್ತ್ರೀಯರ ವ್ಯಕ್ತಿತ್ವದ ಐಕ್ಯತೆಯನ್ನು ಒಂದು ವಿಚಾರಧಾರೆಯನ್ನಾಗಿ ಪರಿಗಣಿಸಲು ಸಾಧ್ಯವೇ ಎಂಬುದನ್ನು ಪರೀಕ್ಷಿಸಲು ಸೋಲುತ್ತಾರೆ. ಭಾವನೆಗಳ ಸಾಹಿತ್ಯಕ ಅಭಿವ್ಯಕ್ತಿಯನ್ನು ಸಮಾಜವಾದಿ ಸ್ತ್ರೀವಾದಿಗಳು ಬೂರ್ಷ್ವಾಗುಣವುಳ್ಳದ್ದು ಎಂದು ನಿಂದಿಸುತ್ತಾರೆ. ಈ ಭಿನ್ನತೆಯ ಮೂಲವನ್ನು ರೂಸೋ ಮತ್ತು ವುಲ್ ಸ್ಟನ್‌ಕ್ರಾಫ್ಟ್‌ರ

ವಿಚಾರಗಳಲ್ಲಿ ಗುರುತಿಸುವ ಕಾಪ್ಲಾನ್ ಸ್ತ್ರೀಯರ ವೈಯಕ್ತಿಕತೆ ಮತ್ತು ವರ್ಗೀಯ ಗುಣವನ್ನು ಹೊಂದುವ ವಿಮರ್ಶೆಯ ಅಗತ್ಯತೆಗಾಗಿ ವಾದಿಸುತ್ತಾಳೆ. ಸ್ತ್ರೀವಾದಿ ವಿಮರ್ಶೆಯು ವ್ಯಾಪಕವಾಗಿ ಬೆಳೆಯುತ್ತಿರುವ ಇಂದಿನ ಸಂದರ್ಭದಲ್ಲಿ ಈ ವಿಧಾನದ ಸ್ವಾಯತ್ತತೆಗೆ ಪುರುಷ ಕೇಂದ್ರಿತ ವಿಮರ್ಶೆಯಿಂದ ಅಪಾಯವೊದಗಬಹುದೆಂದು ಕೋರಾ ಕಾಪ್ಲಾನ್ ಭಾವಿಸುವುದಿಲ್ಲ. ಆದರೆ ನಿಜವಾದ ಹೆದರಿಕೆಯಿರುವುದು ಲಿಂಗ ಪ್ರಭೇದದ ಸಮಸ್ಯೆಯನ್ನು ಕುರಿತ ತೀವ್ರಗಾಮಿ ದೃಷ್ಟಿಕೋನದ ಬಗ್ಗೆ. ಇದು, ಸ್ತ್ರೀಯರ ವೈಯಕ್ತಿಕತೆಗೆ ಸಾಕಷ್ಟು ಗಮನಕೊಡದೆ ಸ್ತ್ರೀವಾದಿ ಸಿದ್ಧಾಂತಕ್ಕೆ ಕಂಟಕವಾಗಬಹುದು. ಆದ್ದರಿಂದ ಸ್ತ್ರೀವಾದದೊಳಗೇ ಇರುವ ಪ್ರತಿಕೂಲಾತ್ಮಕ ಪರಿಣಾಮವನ್ನು ನಿಗ್ರಹಿಸುತ್ತಲೇ ವಿಶಾಲವಾದ ಸಮಾಜವಾದಿ ಸ್ತ್ರೀವಾದದ ಚೌಕಟ್ಟಿನೊಳಗೆ ವಿಮರ್ಶೆಯ ಮೌಲ್ಯಮಾಪನ ನಡೆಸಬೇಕಾಗುತ್ತದೆ.

> ಸಾಮಾಜಿಕ ಶ್ರೇಣೀಕರಣವನ್ನು ಹೆಣ್ಣಿನ ವಿಭಿನ್ನ ಲೈಂಗಿಕತೆ ಎಂಬುದಕ್ಕೆ ಸಂಕುಚಿತಗೊಳಿಸುವ ತೀವ್ರಗಾಮಿ ಸ್ತ್ರೀವಾದಿಗಳು ವಿಭಿನ್ನ ಲೈಂಗಿಕತೆಯ ಮೂಲದ ಸಾಪೇಕ್ಷ ಅನುಭವಗಳನ್ನೇ ಮಹಿಳೆಯ ಸಾರ್ವತ್ರಿಕ, ಸಾರ್ವಕಾಲಿಕ, ಅನುಭವಗಳ ಸತ್ಯ ರೂಪವೆಂದು ಸಾಧಿಸಲು ಹೊರಡುತ್ತಾರೆ. ಮಹಿಳೆಯ ವ್ಯಕ್ತಿತ್ವದತ್ತ ಗಮನಕೊಡದಿರುವ ಮೂಲಕ ಶೋಷಣೆಯ ಬಹುಸ್ತರೀಯ ರೂಪಗಳನ್ನೇ ನಿರ್ಲಕ್ಷಿಸುತ್ತಾರೆ. ಸ್ತ್ರೀವಾದಿ ಚಿಂತನೆಯೊಳಗೇ ಇರುವ ಈ ಪ್ರತಿಗಾಮಿ ವಿಚಾರಗಳು ತುಂಬಾ ಅಪಾಯಕಾರಿ ಪರಿಣಾಮಗಳನ್ನು ಬೀರುತ್ತವೆಂದು ಗುರುತಿಸಿ, ಇವುಗಳನ್ನು ತಡೆಗಟ್ಟುವುದು ಮತ್ತು ವಿಶಾಲವಾದ ಸಮಾಜವಾದಿ ಚೌಕಟ್ಟಿನಲ್ಲಿ ಸ್ತ್ರೀವಾದಿ ವಿಮರ್ಶೆಯನ್ನು ಜೋಡಿಸುವುದು ಮಾರ್ಕ್ಸ್‌ವಾದಿ ಸ್ತ್ರೀವಾದದ ಉದ್ದೇಶವೆಂದು ಕಾಪ್ಲಾನ್ ಸೂಚಿಸುತ್ತಾಳೆ. ಆದರೆ ಮಾರ್ಕ್ಸ್‌ವಾದಿ ಸ್ತ್ರೀವಾದದ ಸಮಕಾಲೀನ ಚಿಂತಕರು, ಈ ರೀತಿ ತೀವ್ರಗಾಮಿಗಳನ್ನು ವಿಮರ್ಶಿಸುವಷ್ಟಕ್ಕೆ ತಮ್ಮ ಯತ್ನಗಳನ್ನು ಸೀಮಿತಗೊಳಿಸಿಲ್ಲ. ಅವರು ಸಾಹಿತ್ಯದ ಪಠ್ಯದೊಳಗಿನ ಭಿನ್ನ ಲಿಂಗೀಯ (Hetero Sexual) ಸಂಬಂಧಗಳು ಹೊಮ್ಮಿಸುವ ಸಾಮಾಜಿಕ, ಮನಃಶಾಸ್ತ್ರೀಯ ಅರ್ಥಗಳನ್ನು ಗುರುತಿಸುವುದರಲ್ಲಿ ಪಠ್ಯದ ಭಾಷಿಕ ಪ್ರಕ್ರಿಯೆಯಲ್ಲಿ ಶಬ್ದಗಳ ನಡುವೆ, ಸಾಲುಗಳ ಮಧ್ಯೆ ಹುದುಗಿರುವ ಅರ್ಥವೈವಿಧ್ಯದ ಸಂರಚನೆಗಳನ್ನು ಗುರುತಿಸುವುದರಲ್ಲಿ ಹೆಚ್ಚು ಕಾಳಜಿವಹಿಸುತ್ತಾರೆ. ಕಥಾ ಸಾಹಿತ್ಯದ ಶೈಲಿಯ ಸಾಮಾಜಿಕ ಆರ್ಥಿಕ ಅಂಶಗಳತ್ತ ಗಮನಹರಿಸಿ ಮಾನಸಿಕ ಅಂಶಗಳ ಸಾಮಾಜೀಕರಣಕ್ಕೆ ಸಮಾಜವಾದಿ ಸ್ತ್ರೀವಾದಿಗಳು ಯತ್ನಿಸುತ್ತಾರೆ.[೧೧]

ಒಟ್ಟಿನಲ್ಲಿ

ಸ್ತ್ರೀವಾದಿ ವಿಮರ್ಶೆಯು ಎರಡು ಪರಸ್ಪರ ವಿಭಿನ್ನ ವಿಚಾರಗಳ ನಿರ್ವಹಣ

> ತಂತ್ರವನ್ನು ಅಭ್ಯಸಿಸುವುದರ ಸಲುವಾಗಿ, ಮಾರ್ಕ್ಸ್‌ವಾದದ ಕಡೆಗೆ ಹೊರಳಿದ ನಂತರ, ತನ್ನ ಪ್ರಾಮುಖ್ಯತೆ ಕಳೆದುಕೊಂಡಿತು. ಇಂತಹ ವಿಮರ್ಶೆಯೆಂಬುದು ಉದ್ದೇಶ ಪೂರ್ವಕವಾಗಿ, ಕ್ರಾಂತಿಯನ್ನು ಉಂಟು ಮಾಡುವ ಪ್ರಯತ್ನವೆಂದು ಮಾರ್ಕ್ಸ್‌ವಾದಿಗಳು ಪ್ರತಿಪಾದಿಸಿದ್ದರು. ಆದರೆ ಸ್ತ್ರೀವಾದಿ ವಿಮರ್ಶೆಯ ಜನಪ್ರಿಯತೆಗೆ ಪ್ರಮುಖ ಕಾರಣವೆಂದರೆ, ಸ್ತ್ರೀವಾದಿಗಳು ಮಾರ್ಕ್ಸ್‌ವಾದದ ಎಲ್ಲಾ ತತ್ತ್ವಾಂಶಗಳನ್ನು ೬೦ ರ ೭೦ರ ದಶಕಗಳಲ್ಲಿ ಜನಪ್ರಿಯವಾಗಿದ್ದ ಇತರೆ ವಿಶ್ಲೇಷಣಾ ವ್ಯವಸ್ಥೆಗಳ ಜೊತೆ ಸಮ್ಮಿಲನಗೊಳಿಸಿದರು. ಅವುಗಳಲ್ಲಿ ಸಂರಚನಾ ಶಾಸ್ತ್ರ ಮತ್ತು ಶೈಲಿಶಾಸ್ತ್ರ ಪ್ರಕಾರಗಳೂ ಪ್ರಮುಖವಾದವು.[೨]

ಎಂಬುದು ಇಲ್ಲಿ ಬಹುಮುಖ್ಯ ಅಂಶವಾಗಿದೆ. 'ತಾತ್ತ್ವಿಕತೆ'ಯ ಚರ್ಚೆಯನ್ನು ಮಾರ್ಕ್ಸ್‌ವಾದ ಮತ್ತು ಸ್ತ್ರೀವಾದಗಳೆರಡೂ ಸೈದ್ಧಾಂತಿಕವಾಗಿ ನಡೆಸುತ್ತವೆ. ಇಲ್ಲಿ ಮಾರ್ಕ್ಸ್‌ವಾದದ ತಾತ್ತ್ವಿಕತೆಯು 'ವರ್ಗಾಧಾರಿತ' ಮೂಲೀಯವಾಗಿದ್ದರೆ, ಸ್ತ್ರೀವಾದದ ತಾತ್ತ್ವಿಕತೆಯು 'ಲಿಂಗಾಧಾರಿತ'ವಾದುದು. ಇದನ್ನೇ ಮಹಿಳಾ ಅಧ್ಯಯನಗಳು ಕಲೆಗಳನ್ನು ಮತ್ತು ಸಮಾಜ ವಿಜ್ಞಾನಗಳನ್ನು ನೋಡುವ ಪ್ರಾತಿನಿಧಿಕ ವಸ್ತುನಿಷ್ಠತೆಯ ಸ್ವರೂಪದಲ್ಲಿ ಮೊದಲು ಮಾನ್ಯ ಮಾಡುತ್ತವೆ. ಜೈವಿಕ ಭಿನ್ನತೆಯ ಆಧಾರದಿಂದ ಆರಂಭದ ಸ್ತ್ರೀವಾದಿಗಳು 'ತಾತ್ತ್ವಿಕತೆ'ಯನ್ನು 'Energy source of patriarchal domination' ಎಂದು ಗುರುತಿಸುತ್ತಾರೆ. ತಾತ್ತ್ವಿಕತೆಯೆಂಬುದು ಪುರುಷರ ಅಧಿಕಾರ ಮತ್ತು ಯಾಜಮಾನ್ಯತೆಯ ಭೌತ ಸ್ವರೂಪಗಳಲ್ಲಿ ಪ್ರತಿಬಿಂಬಿತಗೊಳ್ಳುತ್ತದೆ. ಭೌತ ಉತ್ಪಾದನೆಯ ನೆಲೆಯಲ್ಲಿ ತಾತ್ತ್ವಿಕತೆಯೆಂಬುದು ಹೇಗೆ ಲಿಂಗಾಧಾರಿತವಾಗಿದೆ ಎಂಬುದನ್ನು ವಿವರಿಸುತ್ತಾರೆ. ಆಲ್ಥೂಸರ್‌ನ ನಂತರದಲ್ಲಿ ಈ 'ತಾತ್ತ್ವಿಕತೆ'ಯನ್ನು ಪರಿಕಲ್ಪಿಸಿದ ಗ್ರಹಿಕೆಗಳ ನೆಲೆಯಿಂದ ಇತ್ತೀಚಿನ ಬ್ರಿಟಿಷ್ ಸ್ತ್ರೀವಾದಿ ವಿಮರ್ಶಕರಾದ ಬೆರಿ ಹಿಂಡೀಸ್ (Barry Hindess) ಮತ್ತು ಪೌಲ್ ಹರ್ಸ್ಟ್ (Paul Harst) ಇವರ ವಿಮರ್ಶೆಗಳು 'M/F'ಎಂಬ ನಿಯತಕಾಲಿಕದಲ್ಲಿ ಪ್ರಕಟಗೊಳ್ಳುತ್ತಿವೆ. ಸ್ತ್ರೀವಾದಿ ವಿಮರ್ಶೆಯಲ್ಲಿ ತಾತ್ತ್ವಿಕತೆಯ ಸೈದ್ಧಾಂತಿಕ ನಿಲುವನ್ನು ಪರ್ವಿನ್ ಆಡಮ್ಸ್ (Parveen Adams)ಳ ಮಾತಿನಲ್ಲಿ ಹೀಗೆ ಗುರುತಿಸಬಹುದು. ಈ ವಿವರಣೆಯು ಹಲವು ಮೂಲಗಳಲ್ಲಿ ಸ್ತ್ರೀವಾದದ ಆಯಾಮವನ್ನು ವಿಸ್ತರಿಸುತ್ತದೆ. ಅಂದರೆ, ೧. ತಾತ್ತ್ವಿಕತೆಯನ್ನು ಕುರಿತ ಸಿದ್ಧಾಂತಗಳ ಪ್ರತಿನಿಧೀಕರಣ; ೨. ಅಲ್ಲದೆ, ಪ್ರತಿನಿಧೀಕರಣವೆನ್ನುವುದು ಯಾವುದರ ನಡುವಣ ಸಂಬಂಧವನ್ನು ಕುರಿತು ಪ್ರಸ್ತಾಪಿಸುತ್ತದೆ ಎಂಬುದು. ಪರ್ವಿನ್ ಆಡಮ್ಸ್ ಹೇಳುವಂತೆ ಪ್ರತಿನಿಧೀಕರಣ ಸಾಂಪ್ರದಾಯಿಕ ಸಿದ್ಧಾಂತಗಳನ್ನು ನಿರಾಕರಿಸುವುದು ಮುಖ್ಯ ವಾಗುತ್ತದೆ. 'ವಾಸ್ತವ'ವನ್ನು ಅದರ ಮೂಲದಲ್ಲಿ ಪ್ರತಿನಿಧಿಸಲು ಸಾಧ್ಯವಾಗದಿರುವುದು ಇದರ ಪ್ರಮುಖ ಕಾರಣ. 'ಲಿಂಗಾಧಾರಿತ' ಗುರುತಿಸುವಿಕೆಯನ್ನು 'Post feminism' ಮತ್ತು 'Post Political' ಸ್ಥಿತಿಯ ನಿರ್ವಚನಗಳು ತೀವ್ರವಾಗಿ ವಿರೋಧಿಸುತ್ತವೆ.

ಸಮಾಜದಲ್ಲಿ ರಾಜಕೀಯ ಆರ್ಥಿಕತೆಯ ಕೇಂದ್ರದಲ್ಲಿ ಲಿಂಗಾಧಾರಿತ ಗುರುತಿಸುವಿಕೆಯಿಂದ ಸ್ತ್ರೀಯರು ಹೆಚ್ಚಿನ ದಮನೀಯತೆಗೆ ಒಳಗಾಗಬೇಕಾಗುತ್ತದೆ. ರಾಚನಿಕೋತ್ತರ ಹಾಗೂ ಆಧುನಿಕೋತ್ತರ ವಿಧಾನಗಳಿಂದ ರೂಪಗೊಂಡಿರುವ ಸ್ತ್ರೀವಾದವು ಜಾಗತಿಕ, ಸಾರ್ವತ್ರಿಕ ಮಾನವತಾವಾದದ ತಾತ್ತ್ವಿಕತೆಯನ್ನು ಅನುಮಾನದಿಂದ ನೋಡುತ್ತದೆ. ಏಕೆಂದರೆ ವ್ಯತ್ಯಾಸಗಳು ಗಣನೆಗೆ ಬಾರದಲ್ಲಿ ಬಹುಮುಖತೆ ನಿರ್ಲಕ್ಷಿತಗೊಳ್ಳುತ್ತದೆ. ಎಲ್ಲ ಯಾಜಮಾನೀ ಪ್ರವಚನಗಳನ್ನು ಧಿಕ್ಕರಿಸುವ ಸ್ತ್ರೀವಾದವು 'ವಿಕೇಂದ್ರೀಕೃತವಾದ' 'ಬೇರೆ ರೀತಿಯ' 'ಸೋದರಿತನ'ಕ್ಕೆ ಬೆಂಬಲ ಕೊಡುತ್ತಿದೆ. 'ವಿಕೇಂದ್ರೀಕರಣ'ವನ್ನು ಅಧಿಕಾರದಲ್ಲಿ ಅಭಿಮತ ಮಾಡುವ ಸ್ತ್ರೀವಾದಿ ಸೂಸನ್ ಫಿಲ್‌ಮನ್ (Shoshana Felman) ಆಶಿಸುವಂತೆ ಅಧಿಕಾರದ ಪ್ರಶ್ನೆಯಾಗಿ ಸ್ತ್ರೀಯರು ಏನನ್ನು ಬಯಸುತ್ತಾರೆ ಎಂದರೆ,

> ಒಬ್ಬ ಮಹಿಳೆಯ ದನಿಯನ್ನು, ಪ್ರಧಾನ ವಿಷಯವೆಂದು ಗುರುತಿಸುವುದಾದರೆ ಅದು ಸಾಹಿತ್ಯಕ ಅಥವಾ ಮನಃಶಾಸ್ತ್ರೀಯ ಕ್ರಿಯೆಯ ಮೂಲಕ[೧೩]

ಎಂಬುದು ಗಮನಾರ್ಹ ಅಂಶವಾಗಿದೆ.

## ಟಿಪ್ಪಣಿಗಳು

೧. Amiran Minda Rae; (1978) **What Women's Lierature** : College English, London. (Page 303)

೨. Beaubior, Simone de ; (1972) **The Second Sex** : penguin books, New Delhi. (Page 511)

೩. ಸುಮಿತ್ರಾ ಬಾಯಿ ಬಿ.ಎನ್ ಮತ್ತು ಎನ್. ಗಾಯತ್ರಿ (ಸಂ.), ೧೯೯೫, **ಸ್ತ್ರೀವಾದಿ ಪ್ರವೇಶಿಕೆ:** ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು. (ಪು.ಸ. ೧೧೮)

೪. ಸುಮಿತ್ರಾ ಬಾಯಿ ಬಿ.ಎನ್ ಮತ್ತು ಎನ್. ಗಾಯತ್ರಿ (ಸಂ.) (೧೯೯೫) **ಸ್ತ್ರೀವಾದಿ ಪ್ರವೇಶಿಕೆ:** ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು. (ಪು.ಸಂ. ೧೧೯)

೫. Auerbach, Nina ; (1980) **Feminist Criticism Reviewed** : Gender and Literary voice, New York. (Page 299)

೬. Auerbach, Nina; (1980) **Feminist Criticism Reviewed** : Gender and Literary Voice, New York. (Page 299-300)

೭. Ruthven K.K; (1984) **Feminist Literary Studies : An Introduction** : University of Adelaide, Australia. (Page 301)

೮. Ruthven K.K; (1984) **Feminist Literary Studies : An Introduction** : University of Adelaide, Australia. (Page 316-317)

೯. Ruthven K.K; (1984) **Feminist Literary Studies : An Introduction** : University of Adelaide, Australia. (Page 316)

೧೦. Ruthven K.K; (1984) **Feminist Literary Studies : An Introduction :** University of Adelaide, Australia. (Page 320)

೧೧. ಸುಮಿತ್ರಾ ಬಾಯಿ ಬಿ.ಎನ್; (೧೯೯೯) ಸ್ತ್ರೀವಾದ : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. (ಪು.ಸ.೮೬)

೧೨. Ruthven K.K; (1984) **Feminist Literary Studies : An Introduction :** University of Adelaide, Australia. (Page 418)

೧೩. Ruthven K.K; (1984) **Feminist Literary Studies : An Introduction :** University of Adelaide, Australia. (Page 422)



## ಪ್ರಸ್ತುತ ಸಂದರ್ಭದಲ್ಲಿ ಲೇಖಕಿಯರ ಅಭಿವ್ಯಕ್ತಿ*

ಎಲ್.ಸಿ. ಸುಮಿತ್ರಾ

'ಲೇಖಕಿಯರ ಅಭಿವ್ಯಕ್ತಿ' ಅಂದಾಗ ಅಭಿವ್ಯಕ್ತಿ ಎಲ್ಲರಿಗೂ ಒಂದೇ ಅಲ್ಲವೆ? ಎಂಬ ಪ್ರಶ್ನೆ ಮೂಡಬಹುದು. ಬೇರೆ ಬೇರೆ ಕಾರಣಗಳಿಂದಾಗಿ ಇಬ್ಬರ ಅಭಿವ್ಯಕ್ತಿಯಲ್ಲಿಯೂ ವ್ಯತ್ಯಾಸವಿರುವುದರಿಂದ ಲೇಖಕಿಯರ ಅಭಿವ್ಯಕ್ತಿ ಎಂಬ ಪದ ಬಳಸಬೇಕಾಯಿತು. ನಮ್ಮ ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಕ ಸಂದರ್ಭಗಳಲ್ಲಿ ಲಿಂಗಾಧಾರಿತ ಅಸಾಮಾನತೆ ಎಲ್ಲಿಯವರೆಗಿರುತ್ತದೋ ಅಲ್ಲಿಯವರೆಗೂ ಲೇಖಕಿಯರಿಗೆ ಅಭಿವ್ಯಕ್ತಿಯಲ್ಲಿ ತೊಡಕುಗಳು ಇದ್ದೇ ಇರುತ್ತವೆ.

ಈ ಅಭಿವ್ಯಕ್ತಿಯ ತೊಡಕುಗಳನ್ನು ಲೇಖಕಿಯರು ಹೇಗೆ ಬಗೆಹರಿಸಿಕೊಂಡಿದ್ದಾರೆಂದು ಇಲ್ಲಿ ಗಮನಿಸಲು ಪ್ರಯತ್ನಿಸಿದ್ದೇನೆ. ೨೦ನೇ ಶತಮಾನದ ಐವತ್ತು ಅರವತ್ತನೇ ದಶಕದ ಲೇಖಕಿಯರಿಗೆ ಹೋಲಿಸಿದರೆ ಎಂಬತ್ತು ಮತ್ತು ತೊಂಬತ್ತನೇ ದಶಕದಲ್ಲಿ ಲೇಖಕಿಯರು ಸ್ವಲ್ಪ ಹೆಚ್ಚು ಸ್ವಾತಂತ್ರ್ಯ ವಹಿಸಿ ಬರೆದಿರುವುದನ್ನು ನೋಡಬಹುದು. ೧೯೭೫ರ ನಂತರ ಲೇಖಕಿಯರ ಸಾಹಿತ್ಯ ವಿಪುಲವಾಗಿ ಬಂದರೂ ಗೃಹೀತ ಮಾರ್ಗವನ್ನು ಬಿಟ್ಟು ಹೊಸದನಿಯನ್ನು ವ್ಯಕ್ತಪಡಿಸುವ ಲೇಖಕಿ ಮತ್ತು ತನ್ನ ಅಸ್ಮಿತೆಗಾಗಿ ಪ್ರಯತ್ನಿಸುವ ಇಂದಿನ ಲೇಖಕಿಯ ಎದುರಿಗೆ ಸಂಕೀರ್ಣವಾದ ಸವಾಲುಗಳಿವೆ. ಲೇಖಕಿಯರ ಗ್ರಹಿಕೆ, ಓದು, ಬರಹಗಳನ್ನು ಸಮಾಜ ಮತ್ತು ಸಂಸ್ಕೃತಿಗಳು ಅವ್ಯಕ್ತವಾಗಿ ನಿಯಂತ್ರಿಸುತ್ತಿರುತ್ತವೆ. ಬರಹಗಾರನೊಬ್ಬನಷ್ಟು ಮುಕ್ತವಾಗಿ ಬರಹಗಾರ್ತಿಯೊಬ್ಬಳು ತನ್ನನ್ನು ಅಕ್ಷರಗಳಲ್ಲಿ ಅಭಿವ್ಯಕ್ತಿಸುವುದು ಸುಲಭ ಸಾಧ್ಯವಲ್ಲ. ಈ ನಿಬಂಧನೆಗಳು, ನಿಯಂತ್ರಣಗಳು ಲೇಖಕಿಯರ ಸಾಹಿತ್ಯ ಸೃಷ್ಟಿಯ ಮೇಲೆ ಹೇಗೆ ಪರಿಣಾಮ ಬೀರುತ್ತವೆ ಎಂದು ಗಮನಿಸಿದರೆ ಈ ನಿರ್ಬಂಧಗಳನ್ನು ಹೀಗೆ ಪಟ್ಟಿ ಮಾಡಬಹುದು. ಸಾಮಾಜಿಕ, ಸಾಂಸ್ಕೃತಿಕ, ಕೌಟುಂಬಿಕ, ಸ್ವಯಂ ನಿರ್ಬಂಧ (Self

---

*ದಿನಾಂಕ ೧೨.೦೩.೨೦೦೩ ರಂದು ಬೆಂಗಳೂರಿನಲ್ಲಿ ಜರುಗಿದ ಕರ್ನಾಟಕ ಲೇಖಕಿಯರ ಐದನೆಯ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧ.

censor), ಒಳ್ಳೆಯವಳೆನಿಸಿಕೊಳ್ಳುವ ಹಂಬಲಿಕೆ (good girl syndrome). ಈ ನಿರ್ಬಂಧಗಳಿಂದಾಗಿ ಸ್ತ್ರೀಯರು ರಾಜಕೀಯ, ಧರ್ಮ, ಲೈಂಗಿಕತೆಯಂತಹ ವಸ್ತುಗಳನ್ನು ಕುರಿತು ಬರೆಯುವುದು ಬಹಳ ಜನರಿಗೆ ಇಷ್ಟವಾಗುವುದಿಲ್ಲ.

೨೦ನೇ ಶತಮಾನದ ಕನ್ನಡ ಸಾಹಿತ್ಯದ ಸಂಪುಟಗಳು ಈಗ ಹೊರ ಬಂದಿವೆ. ನೂರು ವರ್ಷಗಳ ಅವಧಿಯಲ್ಲಿ ಬಂದ ಮಹತ್ವದ ಕವಿತೆ, ಕತೆ, ವಿಮರ್ಶೆ, ಪ್ರಬಂಧಗಳ ಪ್ರಾತಿನಿಧಿಕ ಸಂಗ್ರಹಗಳು ಇವು. ಇವುಗಳಲ್ಲಿ ಕಾವ್ಯ ಸಂಗ್ರಹದಲ್ಲಿ ೧೧೭ ಜನ ಕವಿಗಳಿದ್ದರೆ ಕವಿಯತ್ರಿಯರು ಕೇವಲ ಹದಿನಾಲ್ಕು, ಸಣ್ಣಕತೆಯಲ್ಲಿ ಕತೆಗಾರರು ನಲವತ್ತೈದು ಜನರಾದರೆ ಕತೆಗಾರ್ತಿಯರು ಕೇವಲ ಆರು. ವಿಮರ್ಶೆಯ ಸ್ಥಿತಿ ಇನ್ನೂ ಶೋಚನೀಯ. ವಿಮರ್ಶೆಯ ವಿಭಾಗದಲ್ಲಿ ವಿಮರ್ಶಕರು ತೊಂಭತ್ತೊಂದು, ವಿಮರ್ಶಕಿಯರು ಇಬ್ಬರು. ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಸಾಕಷ್ಟು ಜನ ಲೇಖಕಿಯರು ಸತ್ವಯುತವಾದ ಕತೆ, ಕವಿತೆ, ಕಾವ್ಯ, ಕಾದಂಬರಿಗಳ ರಚನೆ ಮಾಡಿದ್ದಾರೆ. ಆದರೂ ಮುಖ್ಯ ವಾಹಿನಿಯ ಲೇಖಕರನ್ನು ಪರಿಗಣಿಸುವಾಗ ಇಂತಹವರೂ ಲೆಕ್ಕಕ್ಕೆ ಸಿಗದೇ ಹೋದರೆ ಹೇಗೆ? ಉದಾಹರಣೆಗೆ ಕನ್ನಡದ ಸಣ್ಣ ಕತೆಗಾರರಲ್ಲಿ ನೇಮಿಚಂದ್ರ ಗಮನಿಸಲೇಬೇಕಾದ ಹೆಸರು. "ಶತಮಾನದ ಕಥೆ"ಗಳಲ್ಲಿ ನೇಮಿಚಂದ್ರ ಅವರ ಹೆಸರೇ ಇಲ್ಲ. ಅವರ ನಾಲ್ಕು ಕಥಾ ಸಂಗ್ರಹಗಳು ಪ್ರಕಟವಾಗಿದ್ದು., ಇಂದಿನ ಹೊಸ ವಾಸ್ತವಗಳು ಅವರ ಕಥೆಗಳಲ್ಲಿ ಅಭಿವ್ಯಕ್ತಿ ಪಡೆದಿವೆ. ಮಹಿಳೆಯ ಅಸ್ತಿತ್ವದ ಶೋಧವನ್ನು ಗಮನಿಸಿದರೆ ಇಡೀ ಸಮಾಜ ವ್ಯವಸ್ಥೆಯೇ ಒಂದು ರಾಜಕಾರಣದಿಂದ ಕೂಡಿದೆ. ಸಾಹಿತ್ಯ ಚರಿತ್ರೆಯಲ್ಲಿ ಈ ಲಿಂಗ ರಾಜಕೀಯವೂ ಇದೆ. ಆದ್ದರಿಂದಲೇ ಮಹಿಳಾ ಸಾಹಿತ್ಯ ಚರಿತ್ರೆಯ ರಚನೆಯ ಅಗತ್ಯ ಇದೆ.

ಈಗ ವಿಸ್ತೃತ ಜಗತ್ತಿನ ಆಗುಹೋಗುಗಳಲ್ಲಿ ಭಾಗವಹಿಸುತ್ತಿರುವ ಲೇಖಕಿಯ ಅನುಭವಗಳು ವೈವಿಧ್ಯಮವಾಗಿದೆ. ಆದರೆ ಇದು ಮೀಡಿಯಾಗಳ ಕಾಲವಾಗಿರುವುದರಿಂದ ಇಂದಿನ ಲೇಖಕಿ ಭಿನ್ನ ರೀತಿಯ ಸವಾಲುಗಳನ್ನೆದುರಿಸಬೇಕಾಗಿದೆ.

ಈ ಸವಾಲುಗಳ ಜೊತೆಗೆ ಲಿಂಗಾಧಾರಿತ ನಿರ್ಬಂಧಗಳನ್ನು ಕೆಲವು ಲೇಖಕಿಯರು ಯಶಸ್ವಿಯಾಗಿ ಎದುರಿಸಿದ್ದಾರೆ. ಕಾವ್ಯದಲ್ಲಂತೂ ಹೊಸತನ ಎದ್ದು ಕಾಣುವುದು ಕವಿಯತ್ರಿಯರಲ್ಲೇ. ಇದುವರೆಗೆ ಅನಾವರಣಗೊಳ್ಳದ ತಮ್ಮ ಅಂತರಂಗದ ಸ್ತರಗಳನ್ನು ಇಂದಿನ ಲೇಖಕಿಯರ ಕಾವ್ಯ ಅನಾವರಣಗೊಳಿಸುತ್ತದೆ. ಪ್ರತಿಭಾ ನಂದಕುಮಾರ್ ಅವರ 'ಆಹಾ ಪುರುಷಾಕಾರಂ' ಇದಕ್ಕೊಂದು ನಿದರ್ಶನ. ಲೇಖಕಿಯರು ಮಹಾಕಾವ್ಯವನ್ನು ಬರೆಯಲು ಸಾಧ್ಯ. ಡಾ. ಎಂ.ಪಿ. ಉಮಾದೇವಿ 'ಶೈವವಾತ್ಸಲ್ಯ'ವೆಂಬ ಮಹಾಕಾವ್ಯವನ್ನು ರಚಿಸಿದ್ದಾರೆ. ಸವಿತಾ ನಾಗಭೂಷಣ ಅವರ ಪ್ರಕಾರ ಅಭಿವ್ಯಕ್ತಿ ಕಾವ್ಯದಲ್ಲಿ ಸುಲಭ. ಕಾವ್ಯದ ಭಾಷೆ ಮುಚ್ಚಿಟ್ಟು ಹೇಳಬಹುದಾದಂತಹುದು.

ವೈದೇಹಿ ತಮ್ಮ ಸಣ್ಣ ಕತೆಗಳಲ್ಲಿ ಹೆಣ್ಣಿನ ಅಂತರಂಗದ ಪುಟಗಳನ್ನು ತೆರೆದಿಟ್ಟಿದ್ದಾರೆ. 'ಅಮ್ಮಚ್ಚಿಯೆಂಬ ನೆನಪು', 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ' ಸಂಗ್ರಹದ ಕತೆಗಳಲ್ಲಿ

ಕತ್ತಲೆಯ ಮೂಲೆಗಳಿಗೆ ಬೆಳಕು ಚೆಲ್ಲುವ ಕೆಲಸ ಮಾಡಿದ್ದಾರೆ. ಅಭಿವ್ಯಕ್ತಿಯ ಹೊಸ ಸಾಧ್ಯತೆಗಳನ್ನು ವೈದೇಹಿ ಅನ್ವೇಷಿಸಿದ್ದಾರೆ. 'ಅಕ್ಕು ಮತ್ತು ಅಮ್ಮಚ್ಚಿ'ಯರಂತಹ ಉನ್ಮಾದಿನಿಯರ ಪಾತ್ರ ಸೃಷ್ಟಿಯ ಮೂಲಕ ತಾವು ಹೇಳಬೇಕಾದುದನ್ನು ಹೇಳುತ್ತಾರೆ. ಪುರುಷ ಲೇಖಕರು ಚಿತ್ರಿಸದೇ ಉಳಿದು ಹೋದ ಹೆಣ್ಣಿನ ಜಗತ್ತು ಈ ಲೇಖಕಿಯ ಕತೆಗಳಲ್ಲಿದೆ.

ವೈದೇಹಿಯವರ 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ' ಸಂಗ್ರಹದ 'ಒಂದು ಕಳ್ಳ ವೃತ್ತಾಂತ' ಕತೆಯಲ್ಲಿ ಸಂಬಂಧ ಇಲ್ಲದ ವ್ಯಕ್ತಿಯೂ ಕೂಡ ಪುರುಷನೆಂಬ ಒಂದೇ ಕಾರಣಕ್ಕೆ ಸ್ತ್ರೀಗೆ ನಿರ್ದೇಶನವನ್ನು ನೀಡಬಲ್ಲ ವ್ಯವಸ್ಥೆಯನ್ನು ವಿಡಂಬಿಸಿದ್ದಾರೆ. (ಪು. ೧೨೨) ಬೇಸಿಗೆಯಲ್ಲಿ ಅನಿರೀಕ್ಷಿತವಾಗಿ ಬಂದ ಮಳೆ ಮದುವೆ ಚಪ್ಪರದಲ್ಲಿ ಗೊಂದಲಕ್ಕೆ ಕಾರಣವಾದಾಗ ರೇಷ್ಮೆ ಸೀರೆಗಳನ್ನು ರಕ್ಷಿಸಿಕೊಳ್ಳುವ ತರಾತುರಿಯಲ್ಲಿ ಹೆಂಗಸರೆಲ್ಲ ಮನೆಯೊಳಕ್ಕೆ ಹೋಗಲು ಅವಸರಿಸುತ್ತಾರೆ. ನರಸಿಂಹರಾಯನೆಂಬಾತ ಮಧ್ಯ ಪ್ರವೇಶಿಸಿ 'ದೊಡ್ಡಂಚಿನ ದೊಡ್ಡ ಕ್ರಯದ ಸೀರೆಯವರು ಮೊದಲು ಒಳಗೆ ಹೋಗಲಿ' ಎಂದಾಗ ಕಡ್ಡಿಯಂಚಿನ ಕಡಿಮೆ ಕ್ರಯದ ಸೀರೆಯವರು ಗಲಿಬಿಲಿಯಿಂದ ತಂತಾನೆ ಹಿಂದೆ ಸರಿದುಬಿಟ್ಟರು. 'ಮುಖದಲ್ಲಿ ಒಂದು ರೀತಿಯ ಮುಜುಗರದ ಮೋಡ ಕವಿಸಿಕೊಂಡು.......ನರಸಿಂಹರಾಯ ಹೇಳಿದ ಕ್ರಮದಲ್ಲಿಯೇ ತಗ್ಗಿಸಿದ ತಲೆ ಎತ್ತದೇ ಒಳಗೆ ಹೋಗುವುದೇ ಒಂದು ದೊಡ್ಡ ದೃಶ್ಯವಾಗಿಬಿಟ್ಟಿತು'.

ಈ ಸನ್ನಿವೇಶ ಚಿತ್ರಿಸುವುದು ಅರ್ಧ ಶತಮಾನದ ಹಿಂದಿನ ದೃಶ್ಯವನ್ನಾದರೂ ಇಂದೂ ಕೂಡ ಸಾಹಿತ್ಯ ಜಗತ್ತಿನಲ್ಲಿ 'ಸ್ತ್ರೀಯರ ಬರವಣಿಗೆ ಮಾತೃ ಸ್ವರೂಪದ್ದಾಗಿರಬೇಕು', 'ಸಾಮಾಜಿಕ ಸ್ವಾಸ್ಥ್ಯ ಕಾಪಾಡಬೇಕು'. 'ಯಾವುದೇ ಸ್ತ್ರೀವಾದ ಇತ್ಯಾದಿ ಇಸಂಗಳಿರಬಾರದು' (ಈ ಮೂರು ಹೇಳಿಕೆಗಳು ನಾನು ಭಾಗವಹಿಸಿದ್ದ ಸಾಹಿತ್ಯ ಗೋಷ್ಠಿಗಳಲ್ಲಿ ಲೇಖಕರ ಬಾಯಿಂದ ಬಂದ ಮಾತುಗಳು.) ಇತ್ಯಾದಿ ನಿರ್ದೇಶನಗಳನ್ನು ನೀಡುವ ಪುರುಷ ಲೇಖಕರನ್ನು ನೋಡಿದಾಗ ವೈದೇಹಿಯವರ ಕಥೆಯ ಸಂದರ್ಭ ಇವೆಲ್ಲ ನಿರ್ಬಂಧಗಳಿಗೂ ಒಂದು ಪ್ರತಿಮೆಯಾಗಿದೆ ಅನ್ನಿಸುತ್ತದೆ.

ನೇಮಿಚಂದ್ರರ ಕತೆಗಳಲ್ಲಿ ಹೆಣ್ಣಿನ ಬೌದ್ಧಿಕ ಜಗತ್ತು ಅನಾವರಣಗೊಂಡಿದೆ. ಇಲ್ಲಿ ಹೆಣ್ಣಿಗೆ 'ಮದುವೆ ನಡೆಯುವ ದಾರಿಯಷ್ಟೇ ಹೊರತು ಅದೇ ಜೀವನದ ಗುರಿಯಲ್ಲ'-ಹೆಣ್ಣಿಗಿರುವ ಜೈವಿಕ ಸೃಷ್ಟಿ ಶಕ್ತಿಯಷ್ಟೇ; ಸೃಜನಶೀಲತೆಯೂ ಮುಖ್ಯ ಎಂದು ಪ್ರತಿಪಾದಿಸುವ 'ಹೊಸಹುಟ್ಟು' ಕಥೆ ಸಾಂಪ್ರದಾಯಿಕವಾದ ಹೆಣ್ಣಿನ ವ್ಯಕ್ತಿತ್ವದ ಟೊಳ್ಳುತನವನ್ನು ವಿಡಂಬಿಸುವ ಕಥೆಯಾಗಿದೆ. ಲೇಖಕಿಯರು ಎದುರಿಸುವ ನಿರ್ಬಂಧಗಳನ್ನು ಮೀರಿರುವ ನೇಮಿಚಂದ್ರರ ಕತೆಗಳಲ್ಲಿ ೨೧ನೇ ಶತಮಾನದ ಗಂಡು ಹೆಣ್ಣಿನ ಸಂಬಂಧದ ಒಂದು ಮಾದರಿ ಇದೆ.

"ಏನೊಂದೂ ಆಗದೆ ಗಂಡಂದಿರ ಹೆಂಡತಿ ಮಾತ್ರ ಆಗಿ, ತಮ್ಮ ಸತೀತ್ವವನ್ನು ಪ್ರಶಸ್ತಿಯಂತೆ ಧರಿಸಿ ಬೀಗುವ ಹೆಂಗಸರನ್ನು ಕಂಡರೂ ನನಗೆ ಆಗದು" (ಏನೊಂದೂ

ಆಗದವರು) ಎಂಬ ಮಾತು ಇಂದಿನ ಸ್ತ್ರೀಯ ಮಹತ್ವಾಕಾಂಕ್ಷೆಗಳನ್ನು ಅಭಿವ್ಯಕ್ತಿಸುತ್ತದೆ. ಕನ್ನಡ ಸಣ್ಣ ಕಥೆಗೆ ಹೊಸ ತಿರುವನ್ನು ಕೊಟ್ಟ ಲೇಖಕಿ ವೀಣಾ ಶಾಂತೇಶ್ವರ 'ಮುಳ್ಳುಗಳು' ಸಂಗ್ರಹದಿಂದ ಸ್ತ್ರೀ ಸಂವೇದನೆಯನ್ನು ಸಾಹಿತ್ಯದ ಸಂದರ್ಭದಲ್ಲಿ ಪ್ರಸ್ತುತಪಡಿಸಿ 'ಬಿಡುಗಡೆ' (೧೯೬೪)ಯಂತಹ ಕತೆ ಬರೆಯುವ ವೇಳೆಗೆ ಲೇಖಕಿಯರ ಬರವಣಿಗೆ ತನ್ನ ಅಸ್ಮಿತೆಯನ್ನು ಗುರುತಿಸಿಕೊಂಡಿತ್ತು.

ಭಾನು ಮುಷ್ತಾಕ್ 'ನಮ್ಮೊಳಗೊಬ್ಬ ಝುರೀನಾ' ದಂತಹ ವಿಶಿಷ್ಟ ಕತೆಗಳನ್ನು ಬರೆದಿದ್ದಾರೆ. ಲಲಿತಾನಾಯಕ್ ತಮ್ಮ ಲಂಬಾಣಿ ಸಂಸ್ಕೃತಿಯ ಹಿನ್ನೆಲೆಯ ಕತೆಗಳಲ್ಲಿ ಹೊರಜಗತ್ತಿಗೆ ಅಪರಿಚಿತವಾದ ಸಾಂಸ್ಕೃತಿಕ ಹಿನ್ನೆಲೆ ಒದಗಿಸಿದ್ದಾರೆ.

ಸಾರಾ ಅಬೂಬಕರ್ ಧಾರ್ಮಿಕ ಶೋಷಣೆಯ, ದಮನಿತ ಪ್ರಪಂಚವೊಂದರ ಅಭಿವ್ಯಕ್ತಿ ಇರುವ ಕಥೆ, ಕಾದಂಬರಿಗಳನ್ನು ಬರೆದಿದ್ದಾರೆ. ಮುಸ್ಲಿಂ ಸ್ತ್ರೀಯರ ಅಭದ್ರ ವೈವಾಹಿಕ ಜೀವನ, ವಿಚ್ಛೇದನದ ಸಮಸ್ಯೆ, ಅನಕ್ಷರತೆ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಕಾರಣಗಳಿಂದ ಪರದೆಯ ಹಿಂದೆ ಇದ್ದ ಮುಸ್ಲಿಂ ಸ್ತ್ರೀಯರ ನೋವು ಸಾರಾ ಅವರ ಲೇಖನಿಗೆ ಶಕ್ತಿ ನೀಡಿದೆ. ಬೇರೆ ಲೇಖಕಿಯರು ಮುಟ್ಟದೇ ಬಿಟ್ಟ ಆಡಳಿತ ವ್ಯವಸ್ಥೆಯಂತಹ ವಸ್ತುವನ್ನು ಕೇಂದ್ರವಾಗಿಟ್ಟುಕೊಂಡು ಸಾರಾ 'ತಳ ಒಡೆದ ದೋಣಿ'ಯಂತಹ ಕಾದಂಬರಿ ಬರೆದಿದ್ದಾರೆ. (ಬರಗಾಲ ಪ್ರದೇಶದ ನೀರಾವರಿ ಯೋಜನೆಯ ಹಿನ್ನೆಲೆ) ಈ ಕಾದಂಬರಿ ಪರಿಣಾಮಕಾರಿಯಾಗಿದೆ. ಕನ್ನಡ ಲೇಖಕಿಯರ ಸಂದರ್ಭದಲ್ಲಿ 'ನಾನ್ ವೆಜ್' ಅಡಿಗೆ ಮನೆಯೊಂದು ಸಾಹಿತ್ಯ ಲೋಕ ಪ್ರವೇಶಿಸಿದ್ದು ಸಾರಾ ಅವರಿಂದಲೇ.

ಸಾಮಾಜಿಕ ಚಳುವಳಿಗಳ ಹಿನ್ನೆಲೆಯಲ್ಲಿ ಬರೆದಾಗ ಬರವಣಿಗೆ ಪ್ರತಿಭಟನೆಯ ಸ್ವರೂಪ ಪಡೆದಿದೆ. ಶೋಷಿತ, ದಲಿತ ಲೋಕದ ಸ್ತ್ರೀಯರ ಕುರಿತು ಗೀತಾ ನಾಗಭೂಷಣ ಬರೆದಿದ್ದಾರೆ. 'ಬದುಕು' ಅವರ ಮಹತ್ವಾಕಾಂಕ್ಷೆಯ ಕಾದಂಬರಿ.

ಎಚ್. ನಾಗವೇಣಿ 'ನಾಕನೇ ನೀರು' ಕಥಾ ಸಂಗ್ರಹ ಮತ್ತು 'ಗಾಂಧಿ ಬಂದ' ಕಾದಂಬರಿ ಗಳಲ್ಲಿ ಕರಾವಳಿಯ ಶ್ರಮ ಜೀವಿಗಳ ಜಗತ್ತು ಮತ್ತು ಅಲ್ಲಿನ ಪ್ರಾದೇಶಿಕ ಚಿತ್ರಣವನ್ನು ಮಾಡುವ ಮೂಲಕ ಕಾರಂತರು ಬರೆಯದೇ ಬಿಟ್ಟದ್ದನ್ನು ತುಂಬಿಕೊಂಡಿದ್ದಾರೆ.

ಸವಿತಾ ನಾಗಭೂಷಣ ಹೆಣ್ಣು ಪಾತ್ರಗಳೇ ಇರುವ 'ಸ್ತ್ರೀ ಲೋಕ'ದಂತಹ ವಿಶಿಷ್ಟ ಕಾದಂಬರಿ ಬರೆದಿದ್ದಾರೆ.

ಪುರಾತನವಾದ ತ್ಯಾಗಮಯೀ ಸ್ತ್ರೀಯ ಮಾದರಿಗೆ ವಿರುದ್ಧವಾದ ಸ್ವಂತಿಕೆಯುಳ್ಳ, ಬೌದ್ಧಿಕ ಚಿಂತನೆಯ, ಸ್ವಸಾಮರ್ಥ್ಯದ ಸ್ತ್ರೀ ಇವತ್ತಿನ ಲೇಖಕಿಯರ ಸಾಹಿತ್ಯದ ಆದರ್ಶವಾಗಿದ್ದಾಳೆ. ಈ ಬಗೆಯ ಪಾತ್ರಗಳನ್ನು ಕೇಂದ್ರವಾಗಿರಿಸಿ ಸುನಂದಾ ಬೆಳಗಾಂವ್‌ಕರ್‌ರವರು 'ನಾಸೂ' 'ಝುವಾದಿ'ಯಂತಹ ವಿಶಿಷ್ಟ ಕಾದಂಬರಿಗಳನ್ನು ಬರೆದಿದ್ದಾರೆ. ಸಾಂಪ್ರದಾಯಿಕ ಪರಿಸರದಲ್ಲಿ ಮಹಿಳೆಯೊಬ್ಬಳು ಪುರುಷನಷ್ಟು ನಿಸ್ಸಂಕೋಚವಾಗಿ ಬರೆಯುವುದು ಕಷ್ಟ. ಅವಳು ಸ್ವಯಂ ನಿರ್ಬಂಧ ವಿಧಿಸಿಕೊಳ್ಳುತ್ತಾಳೆ. ತಾನು ಹೀಗೆ ಬರೆದರೆ ಯಾರು ಏನೆಂದುಕೊಳ್ಳುತ್ತಾರೋ

ಎಂದು ಯೋಚಿಸುವ ಲೇಖಕಿಗೆ ಕುಟುಂಬವೇ ಮೊದಲ ಆದ್ಯತೆಯಾಗಿರುವುದರಿಂದ ತಾಯಿ, ಮಗಳು, ಹೆಂಡತಿ ಎಂಬ ತನ್ನ ವ್ಯಕ್ತಿತ್ವ ಮುಕ್ಕಾಗದಂತೆ ಬರೆಯಲು ಪ್ರಯತ್ನಿಸಿದಾಗ ಅಭಿವ್ಯಕ್ತಿ ಸಶಕ್ತವಾಗದೇ ಹೋಗಬಹುದು. ಈ good girl syndrome ಅನ್ನು ಕೆಲವು ಲೇಖಕಿಯರು ಮೀರಲು ಸಾಧ್ಯವಾಗಿರುವುದು ಸ್ವಾಗತಾರ್ಹ.

ಎಷ್ಟೋ ಸಲ ಅವಳ ಲೇಖನಿಗೆ ಶಕ್ತಿಯಿರುವುದೇ ಒಂದು ಅಪರಾಧವಾಗಿ ಕಾಣತೊಡಗುತ್ತದೆ. ಒಳ್ಳೆಯ ಬರವಣಿಗೆಯನ್ನು ಪ್ರಶಂಸಿಸಬೇಕಾದರೆ 'ಗಂಡಸರಂತೆ ಬರೆಯುತ್ತಾಳೆ' ಎಂದು ಗುರುತಿಸಲಾಗುತ್ತದೆ. ಒಳ್ಳೆಯ ಬರವಣಿಗೆ ಗಂಡಸರದ್ದು ಎಂಬ ತಪ್ಪು ತಿಳುವಳಿಕೆ.

ನೈತಿಕತೆಯ ಮಾನದಂಡವೂ ಇಬ್ಬರಿಗೂ ಬೇರೆ ಬೇರೆ. ಲೈಂಗಿಕತೆಯಂತಹ ವಸ್ತುವನ್ನು ಕುರಿತು ಬರೆದಾಗ ಲೇಖಕಿ ಟೀಕೆಗೆ ಒಳಗಾಗಬೇಕಾಗುತ್ತದೆ. ಅವಳ ನೈತಿಕತೆಯನ್ನು ಸಂಶಯಿಸುವುದರ ಮೂಲಕ ಅವಳ ಲೇಖನಿಯನ್ನು ನಿರ್ಬಂಧಿಸಲಾಗುತ್ತದೆ.

ಆದರೆ, ಇಂದಿನ ಲೇಖಕಿ ಈ ಎಲ್ಲ ನಿರ್ಬಂಧಗಳನ್ನು ದಾಟುವುದರಲ್ಲಿ ಯಶಸ್ವಿಯಾಗಿದ್ದಾಳೆ. ಪುರುಷ ವಿಮರ್ಶಕರು ನಿರೀಕ್ಷಿಸುವಂತೆ ಅವಳ ಕಾವ್ಯದಲ್ಲಿ ಬಳೆಯ ಸದ್ದು, ಹೂವಿನ ಪರಿಮಳ ಕಾಣಲಾರದು. (ವಿವಿಧ ಕವಯಿತ್ರಿಯವರ ಕವನ ಸಂಗ್ರಹ 'ಪ್ರಣಯಿನಿ'ಗೆ ವಿಮರ್ಶೆ ಬರೆಯುತ್ತಾ "ಇದು ಕವಯಿತ್ರಿಯೊಬ್ಬಳು ಬರೆದಿದ್ದು ಅನ್ನಿಸುವುದಿಲ್ಲ. ಬಳೆಯ ಸದ್ದಿಲ್ಲ, ಹೂವಿನ ಪರಿಮಳವಿಲ್ಲ" ಎಂಬ ಅಭಿಪ್ರಾಯವನ್ನು ವಿಮರ್ಶಕರೊಬ್ಬರು ಬರೆದಿದ್ದರು.)

ಸಂಪ್ರದಾಯ ನಿರ್ದೇಶಿಸುವ ಸ್ತ್ರೀ ಪ್ರತಿಮೆಯನ್ನೇ ಉಳಿಸಿಕೊಳ್ಳುವ ಪ್ರಯತ್ನವನ್ನು ಲೇಖಕರ ಬರಹ ಮಾಡುತ್ತಿದ್ದರೆ ವರ್ತಮಾನದ ತಿಳಿವಿನ ಬೆಳಕಿನಲ್ಲಿ ಸ್ತ್ರೀ ವ್ಯಕ್ತಿತವನ್ನು ಪುನರ್ ನಿರ್ಮಿಸುವ ಕೆಲಸವನ್ನು ಲೇಖಕಿಯರು ಮಾಡುತ್ತಿದ್ದಾರೆ.

ಆದರೆ, ಈ ಪ್ರಯತ್ನದಲ್ಲಿ ಅವರು ಸಾಮಾಜಿಕ ಸ್ವಾಸ್ಥ್ಯವನ್ನು ಗಮನದಲ್ಲಿಟ್ಟುಕೊಂಡು ಜವಾಬ್ದಾರಿಯುತ ಬರವಣಿಗೆಯನ್ನು ಮಾಡುತ್ತಿದ್ದಾರೆ. ಇಂದಿನ ಲೇಖಕಿ ಸ್ವಾತಂತ್ರ್ಯವನ್ನು ಇಚ್ಛಿಸುತ್ತಾಳೆಯೇ ಹೊರತು ಸ್ವೇಚ್ಛೆಯನ್ನಲ್ಲ.

ವೀಣಾ, ವೈದೇಹಿ, ಪ್ರತಿಭಾ, ನೇಮಿಚಂದ್ರ ಮೊದಲಾಗಿ ಸಮರ್ಥವಾಗಿ ಭಿನ್ನವಾಗಿ ಬರೆಯುವ ಲೇಖಕಿಯರನ್ನು ಗಮನಿಸಿದರೆ ಆಧುನಿಕ ಶಿಕ್ಷಣದಿಂದ ಬದಲಾದಂತಹ ಸ್ತ್ರೀಯ ಸ್ಥಾನದಿಂದಾಗಿ ಬರವಣಿಗೆ ಶಕ್ತಿಯುತವಾಗಿ ವೈವಿಧ್ಯಮಯವಾಗಿ ಹೊಮ್ಮಿದೆ.

ಸಾಮಾಜಿಕ ಬದಲಾವಣೆಗಳು, ಆರ್ಥಿಕ ಸ್ವಾತಂತ್ರ್ಯ, ವಿಜ್ಞಾನ, ತಂತ್ರಜ್ಞಾನ, ರಾಜಕೀಯ ಹೀಗೆ ವಿವಿಧ ಕ್ಷೇತ್ರಗಳ ಹಿನ್ನೆಲೆಯಿಂದ ಲೇಖಕಿಯರು ಬರೆಯುತ್ತಿರುವುದು ಇವೆಲ್ಲವುಗಳಿಂದಾಗಿ ಇಂದು ಅಕ್ಷರ ಲೋಕದ ಸ್ತ್ರೀ ಅಭಿವ್ಯಕ್ತಿ ಹಲವು ಆಯಾಮಗಳನ್ನು ಪಡೆದುಕೊಂಡಿದೆ. ದಲಿತ, ಮುಸ್ಲಿಂ ಹಿನ್ನೆಲೆಯ ಲೇಖಕಿಯರು ೨೦ನೇ ಶತಮಾನದ ಕೊನೆಯ ದಶಕಗಳಲ್ಲಿ ಗಮನಾರ್ಹ ಕೃತಿಗಳನ್ನು ರಚಿಸಿದ್ದಾರೆ.

ಉಮಾರಾವ್, ಬಿ.ಟಿ. ಜಾಹ್ನವಿ, ಮಿತ್ರಾ ವೆಂಕಟರಾಜ್, ತುಳಸಿ ವೇಣುಗೋಪಾಲ್ ಮುಂತಾದವರು ಆಧುನಿಕ ಸಂವೇದನೆಯ ಕತೆಗಳನ್ನು ಬರೆದಿದ್ದಾರೆ. ಎಂ.ಎಸ್. ವೇದಾ, ವಸುಮತಿ ಉಡುಪ ಗ್ರಾಮೀಣ ಹಿನ್ನೆಲೆಯ ಕಥೆ, ಕಾದಂಬರಿ ರಚಿಸಿದ್ದಾರೆ.

ಪ್ರತಿಭೆಯುಳ್ಳ ಲೇಖಕಿಗೆ ಪರಿಸರವೂ ಪ್ರೋತ್ಸಾಹದಾಯಕವಾಗಿದ್ದು, ವೈವಿಧ್ಯಮಯ ಅನುಭವಗಳು ಸಾಧ್ಯವಾದರೆ, ಅವಳ ಸಾಧನೆ ಬೆಲೆಯುಳ್ಳದಾಗುತ್ತದೆನ್ನುವುದು ನಿರ್ವಿವಾದ, ಇಪ್ಪತ್ತೊಂದನೇ ಶತಮಾನದಲ್ಲಿ ಲೇಖಕಿಗೆ ಈ ಬಗೆಯ ನಿರಾತಂಕ ಅಭಿವ್ಯಕ್ತಿ ಸಾಧ್ಯವಾಗಬಹುದೆಂದು ನಿರೀಕ್ಷಿಸಬಹುದು.



# ಕೆ.ಎಸ್. ನರಸಿಂಹಸ್ವಾಮಿ ಅವರ ಕವಿತೆಗಳಲ್ಲಿ ಸ್ತ್ರೀವಾದದ ದೃಷ್ಟಿಕೋನ

ಎಚ್.ಎಲ್. ಪುಷ್ಪ

ಹೆಂಡತಿಯೊಂದಿಗೆ ಬಡತನ, ದೊರೆತನ -
ಏನೂ ಭಯವಿಲ್ಲ.
ಹೆಂಡತಿಯೊಲುಮೆಯ ಭಾಗ್ಯವನರಿಯದ
ಗಂಡಿಗೆ ಜಯವಿಲ್ಲ

(ಗಂಡ ಹೆಂಡತಿ)

"ಹೆಂಡತಿಯೊಬ್ಬಳು ಮನೆಯೊಳಗಿದ್ದರೆ ನನಗದೇ ಕೋಟಿ ರುಪಾಯಿ" ಎಂದು ಹಾಡಿದ ಒಲವಿನ ಕವಿ ಕೆ.ಎಸ್. ನರಸಿಂಹಸ್ವಾಮಿಯವರ ಕವಿತೆಗಳ ಸಾಲುಗಳಿವು. ತೀ.ನಂ. ಶ್ರೀಯವರ ಒಲುಮೆಯ ನಂತರ ಬಂದ ಮೈಸೂರು ಮಲ್ಲಿಗೆ ತನ್ನ ಮರುಮುದ್ರಣಗಳಿಂದಲೇ ಕನ್ನಡದ ಮಟ್ಟಿಗೆ ದಾಖಲೆ ಸೃಷ್ಟಿಸಿದ ಕೃತಿ. ಜಗತ್ತಿನೊಂದಿಗಿನ ಹಲವು ಸಂಬಂಧಗಳು ನಿರ್ಮಾಣ ವಾಗುವ ಹಂತದಲ್ಲಿ ದಾಂಪತ್ಯ ಜೀವನದಲ್ಲಿ ಪತ್ನಿಯೊಂದಿಗಿನ ಸಂಬಂಧವನ್ನು ಅತ್ಯಂತ ಅಪ್ಯಾಯಮಾನತೆಯಿಂದ, ಸಮಾನತೆಯಿಂದ, ಮುಕ್ತತೆಯಿಂದ ಹಂಚಿಕೊಂಡು ಅದನ್ನು ಅಭಿವ್ಯಕ್ತಿಸಿದ ಏಕಮಾತ್ರ ಲೇಖಕರೆಂದರೆ ಕೆ.ಎಸ್. ನರಸಿಂಹಸ್ವಾಮಿಯವರು. ಗತಿಸಿಹೋದ ಪ್ರೇಮ, ಕೈತಪ್ಪಿ ಹೋದ ನಲ್ಲೆಯರು, ಮುರಿದು ಹೋದ ಸಂಬಂಧಗಳನ್ನು ಸಾಹಿತ್ಯಕವಾಗಿ ನೋಡಿ, ವರ್ಣರಂಜಿತವಾಗಿ ವರ್ಣಿಸುವ ಲೇಖಕರಿದ್ದಂತೆಯೇ ಮದುವೆಯ ನಂತರ ಸಂಪೂರ್ಣ ಒಲವಿನ ಮಹತ್ವವನ್ನು ಅನುಕಾಲವು ಹಾಡಿದ ಕೆ.ಎಸ್. ನರಸಿಂಹಸ್ವಾಮಿ ಯವರಿದ್ದಾರೆ.

ಸ್ಪರ್ಶಕ್ಕೆ, ಅಪ್ಪುಗೆಗೆ ಸಿಗದ, ಆದರೂ ಕೊನೆಯವರೆಗೂ ಚೆನ್ನಮಲ್ಲಿಕಾರ್ಜುನನ್ನು ಅನುಭವಲೋಕದ ಪತಿಯೆಂದೇ ಪರಿಗಣಿಸಿ ಉತ್ಕಟವಾದ ಪ್ರೇಮ ಜೀವನವನ್ನು ನಡೆಸಿದ ಅಕ್ಕಮಹಾದೇವಿಯಂತೆ ಒಲವಿನ ಕವಿ ನರಸಿಂಹಸ್ವಾಮಿಯವರೂ ಬದುಕಿನುದ್ದಕ್ಕೂ ದಾಂಪತ್ಯದ ಚೆಲುವನ್ನು ಸಾರುತ್ತಲೇ ಬಂದವರು. ಪ್ರೇಮ-ಕಾಮಗಳನ್ನು ಅದು ಹದವರಿತು ತಪ್ಪಿ ನಡೆಯದಂತೆ ಸೂಕ್ಷ್ಮವನ್ನು ತಪ್ಪದಂತೆ ಕುಸುರಿಗೆಲಸದಲ್ಲಿ ಎಂದೂ ಮರೆಯಾಗದ

ಹಾಗೆ ಹಿಡಿದಿಟ್ಟಿದ್ದಾರೆ. ಕನ್ನಡದಲ್ಲಿ ಒಲವಿನ ಹೆಣ್ಣನ್ನು ಸಮಾನ ಜೀವಿಯಂತೆ ನಡೆಸಿಕೊಂಡ ಲೇಖಕರಲ್ಲಿ ನರಸಿಂಹಸ್ವಾಮಿಯವರನ್ನು ಬಿಟ್ಟರೆ ಮತ್ತೊಬ್ಬರಿಲ್ಲ.

ಪ್ರಸ್ತುತ ಸಾಹಿತ್ಯ ನಿರ್ಮಾಣ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಹಲವು ಸ್ಥಿತ್ಯಂತರಗಳಿಗೆ ಒಳಗಾಗಿ ಹೊಸ ಹೊಸ ಸಾಧ್ಯತೆಗಳತ್ತ ತನ್ನ ಕಣ್ಣನ್ನು ಹಾಯಿಸುತ್ತಲೇ ಇದೆ. ಸಾಹಿತ್ಯ ಈ ರೀತಿ ಹೊಸ ಹೊಸ ತುಡಿತಕ್ಕೆ ಒಳಗಾಗುವುದು ಹೊಸ ಮೈ, ಹೊಸ ಶಕ್ತಿ ಪಡೆದುಕೊಳ್ಳುವುದು ಆರೋಗ್ಯಕರ ದೃಷ್ಟಿಯೇ ಆಗಿದೆ. ಈ ಹೊಸ ಪ್ರಭಾವ ಹಾಗೂ ತುಡಿತಗಳನ್ನು ಸಾಹಿತ್ಯದಲ್ಲಿ ಚಳುವಳಿಗಳೆಂದೇ ಗುರುತಿಸಲಾಗುತ್ತದೆ. ಇಂತಹ ಚಳುವಳಿಗಳು ಮೈತೋರಿದಾಗ ಅವು ಜನರಿಂದ ಸುಲಭವಾಗಿ ಒಪ್ಪಿತವಾಗದೆ ಮರುಚರ್ಚೆಗೆ ಒಳಗಾಗುತ್ತಲೇ ಇರುತ್ತದೆ. "ಚಳುವಳಿ" ಮೊದಲು ರೂಪತಾಳುವುದು ಒಂದು ಸಣ್ಣ ಗುಂಪಿನ ಮೂಲಕ. ವ್ಯಕ್ತಿ ಪ್ರಜ್ಞೆಯ ವಿಸ್ತಾರ ಇದಕ್ಕೆ ಮೂಲ ಕಾರಣ. ಇರುವ ಸ್ಥಿತಿಯ ಬಗ್ಗೆ ತೀವ್ರ ಅಸಹನೆ, ಬದುಕು ಹಸನಾಗಲು ಮತ್ತೇನೋ ಬೇಕೆಂಬ ಒತ್ತಡ ಸಂವೇದನಾಶೀಲ ಮನಸ್ಸಿನಲ್ಲಿ ಸುತ್ತಮುತ್ತಲಿನ ಪರಿಸರದ ಬಗ್ಗೆ ಕಸಿವಿಸಿ ಉಂಟುಮಾಡುತ್ತದೆ. ಹೊಸದಕ್ಕೆ ಹಂಬಲಿಸುವ ಇಂಥ ಮನಸ್ಸು ಒಪ್ಪಿತ ಮೌಲ್ಯಗಳನ್ನು, ಯಥಾಸ್ಥಿತಿಯನ್ನು ವಿರೋಧಿಸುತ್ತದೆ. ಆಧುನಿಕ ಪರಿಭಾಷೆಯಲ್ಲಿ ಇಂಥವರನ್ನು 'ಕಾನ್‌ಸೆನ್ಷಿಯಸ್ ಅಬ್ಜಕ್ಟಾರ್ಸ್' ಎಂದು ಕರೆಯುತ್ತಾರೆ. 'ಕಾನ್‌ಸೆನ್ಷಿಯಸ್ ಅಬ್ಜಕ್ಟಾರ್ಸ್' - ಗುಂಪಿನ ಈ ಅಸಹನೆ, ಕಸಿವಿಸಿಗೆ ಮೂಲ ಈ ಸಮಾಜದಲ್ಲಿಯೇ ಇರುತ್ತದೆ. ಉಳಿದವರಿಗಿಂತ ಇವರು ಅದನ್ನು ಬೇಗ ಗ್ರಹಿಸುತ್ತಾರೆ, ಅನುಭವಿಸುತ್ತಾರೆ."[೧]

ಈ 'ಕಾನ್‌ಸೆನ್ಷಿಯಸ್ ಅಬ್ಜಕ್ಟಾರ್ಸ್' ಗುಂಪಿಗೆ ಸೇರಿದವರೇ ಸ್ತ್ರೀವಾದಿಗಳು. ಸ್ತ್ರೀವಾದಿ ಚಿಂತಕರು, ಪುರುಷ ನಿರ್ಮಿತ ಸಮಾಜ ಹಾಗೂ ಸಾಹಿತ್ಯದೊಳಗೆ ಕಡೆಗಣಿಸಲ್ಪಟ್ಟ ಸ್ತ್ರೀ ಹಾಗೂ ಅವಳ ಸ್ಥಾನಮಾನದ ಬಗ್ಗೆ ನಿರಂತರವಾದ ವಿಮರ್ಶೆ ಹಾಗೂ ವಿವೇಚನೆಯನ್ನು ಅವರ ಮುಖ್ಯ ಗುರಿಯಾಗಿಸಿಕೊಂಡಿದ್ದಾರೆ. ಉತ್ಪಾದನೆ ಹಾಗೂ ವಿತರಣಾ ವ್ಯವಸ್ಥೆಯಲ್ಲಿ ಹೆಣ್ಣು ಗಂಡುಗಳ ಒಳ ಹಾಗೂ ಹೊರಜಗತ್ತುಗಳು ವಿಶ್ಲೇಷಿಸಲ್ಪಡುವುದರಿಂದಲೇ ಈ ತಕರಾರು ಆರಂಭವಾಗುತ್ತದೆ. ಹೆಣ್ಣು ಸಂಸಾರವೆಂಬ ಚೌಕಟ್ಟಿನೊಳಗೇ ತನ್ನ ಅಸ್ತಿತ್ವವನ್ನು ಕಂಡುಕೊಂಡಿದ್ದರಿಂದ ಅವಳ ದುಡಿಮೆಯ ಬಗೆಗಿನ ಚರ್ಚೆ ಗೌಣವಾಯಿತು. ಗಂಡಿನ ದುಡಿಮೆ ಹೊರ ಜಗತ್ತಿನೊಂದಿಗಿದ್ದು ಆ ದುಡಿಮೆ ಗಣನೀಯವೆನಿಸಿಕೊಂಡಿತು. ಈ ಒಳ-ಹೊರ ಜಗತ್ತಿನ ಚೌಕಟ್ಟು ಹೆಣ್ಣನ್ನು ಬಂಧಿಸಿದ್ದಂತೆಯೇ ಗಂಡಿಗೆ ಹೊರಜಗತ್ತಿನ ಕಡೆಗೆ ಚಲಿಸುವಂತೆ ಮಾಡಿತು. ಈ ಉತ್ಪಾದನಾ ವ್ಯವಸ್ಥೆಯೇ ಕಾರಣವಾಗಿ ಬೇರೂರಿರುವ ತಾರತಮ್ಯವನ್ನು ಕುರಿತು ಸಿಮೋನ್ ದ ಬೋವಾ ಈ ಮುಂದಿನಂತೆ ಹೇಳುತ್ತಾಳೆ. "ಸ್ತ್ರೀ ವಿಮೋಚನೆ ಜಗತ್ತಿನಾದ್ಯಂತ ಶ್ರಮಶಕ್ತಿಯನ್ನು ಅವಲಂಬಿಸಿದೆ. ಉತ್ಪಾದನಾ ಪ್ರಕ್ರಿಯೆಯಲ್ಲಿ ಒಂದು ಮಹತ್ತರ ಕ್ರಾಂತಿಯಾದಾಗ ಮಾತ್ರ ಅವಳ ಸ್ಥಿತಿ-ಗತಿ ಬದಲಾಗಲು ಸಾಧ್ಯ. ಉತ್ಪಾದನಾ ಸಾಧನಗಳ ಖಾಸಗಿ ಒಡೆತನ ತೊಲಗಿ, ಅವುಗಳ ಸಾಮಾಜೀಕರಣ ಪೂರ್ಣಗೊಂಡಾಗ ಮಹಿಳಾ ವಿಮೋಚನೆಯ ಕನಸು ನನಸಾಗಬಲ್ಲದು.[೨]

ಈ ರೀತಿ ಬೇರೆ ಬೇರೆ ಭಾಷೆ ದೇಶಗಳಲ್ಲಿ ನಡೆದ ಚರ್ಚೆಗಳು ಹಾಗೂ ಕನ್ನಡ ಸಾಹಿತ್ಯದಲ್ಲಿ ಲೇಖಕಿಯರು ನಡೆದು ಬಂದ ದಾರಿ, ಹಾಗೂ ಅದರ ಅಂಗವಾದ ಉತ್ಪಾದನಾ ಕೃತಿಗಳನ್ನು ಅಧ್ಯಯನ ಮಾಡಿದಾಗ ಲೇಖಕಿಗೆ ತಾನು ಸಾಗಬೇಕಾದ ದಾರಿ ನಿಚ್ಚಳವಾಗಿ ಗೋಚರವಾಗುತ್ತದೆ. ಅಲ್ಲಮನು ಹೇಳುವಂತೆ "ಹಿಂದಣ ದಾರಿಯನ್ನು ಅರಿತಲ್ಲದೆ, ಮುಂದಣ ದಾರಿಯನ್ನು ಅರಿಯಲಾಗದು" ಎಂಬ ಮಾತು ಇಲ್ಲಿ ಅತ್ಯಂತ ಸೂಕ್ತವಾಗಿದೆ. ಕಲ್ಯಾಣಮ್ಮನವರು ಗುರುತಿಸುವಂತೆ "ಸ್ತ್ರೀಯು ವಿವೇಕ ರಹಿತಳಾಗಿ ಪುರುಷನ ಅಧೀನದಲ್ಲಿ ಬಿದ್ದಿದ್ದು ಅವನ ಮನ ವಿನೋದ ಪಡಿಸಿ, ಅವನಿಗೆ ಆಭರಣದಂತಿರಬೇಕೆಂದು ಅವಳು ಸೃಷ್ಟಿಸಲ್ಪಡಲಿಲ್ಲ. ಈಕೆಯು ತನಗೂ ಮತ್ತು ಇತರರಿಗೂ ಸೌಖ್ಯವನ್ನುಂಟು ಮಾಡುವುದಕ್ಕೆ ಮತ್ತು ಅವಳು ತನ್ನ ಜೀವಿತಕಾಲದಲ್ಲಿ ನಡೆಸಬೇಕಾದ ಅನೇಕ ಉತ್ತರವಾದಿ ಕಾರ್ಯಗಳನ್ನು ವಿರಚಿಸಿ ಇತರರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಅವರನ್ನು ಶಿಕ್ಷಿಸಿ, ದಯಾದ್ರ್ರ ಮಾನಸರಾಗುವಂತೆ ಮಾಡುವುದಕ್ಕಾಗಿಯೇ ಸ್ತ್ರೀಯು ಸೃಷ್ಟಿಸಲ್ಪಟ್ಟಿದ್ದಾಳೆ. ಹಾಗಲ್ಲದೆ ತಾನು ಮಾತ್ರ ಶೃಂಗರಿಸಿಕೊಂಡು ಹೊಟ್ಟೆಯನ್ನು ತುಂಬಿಸಿಕೊಂಡು ಕಾಲ ಕಳೆಯುತ್ತಿರಬೇಕೆಂಬ ಉದ್ದೇಶಕ್ಕಾಗಿರುವುದಿಲ್ಲ."[೩]

ಸ್ತ್ರೀವಾದಿ ಚಿಂತನೆಯು ನಡೆಯಬೇಕಾದ ಕ್ರಮ, ಅದು ಒತ್ತು ಕೊಡಬೇಕಾದ ಅಂಶಗಳು ಈ ಬಗ್ಗೆ ಬಹಳಷ್ಟು ಚರ್ಚೆಗಳು ನಡೆದಿವೆ. ನಮ್ಮ ಸಾಹಿತ್ಯ ಪರಂಪರೆಯಲ್ಲಿ ಆಗಿ ಹೋದ ನವೋದಯ ಮಾರ್ಗದಲ್ಲಿ ಹೆಣ್ಣನ್ನು ಗೌರವದ ಹಿನ್ನೆಲೆಯಲ್ಲಿ ಕಾಣಲಾಯಿತು. ಅವಳೊಳಗಿನ ಚೇತನವನ್ನು ಹುಡುಕುವ ಸಂಪೂರ್ಣ ರೀತಿಯ ರಚನೆಗಳಾಗದಿದ್ದರೂ ಗಂಡು ಜೀವನದ ಅನಿವಾರ್ಯ ಅಂಗ, ಸಂಗಾತಿ ಎಂಬ ಮಾನವೀಯ ನೆಲೆಗಳಲ್ಲಿ ಅವಳನ್ನು ಕಾಣಲಾಯಿತು. ಪ್ರಗತಿಶೀಲ ಪರಂಪರೆಯಲ್ಲಿ ಬಿ.ಎನ್. ಸುಮಿತ್ರಾಬಾಯಿ ಗುರುತಿಸುವಂತೆ ಸಾಂಪ್ರದಾಯಿಕ ಸ್ತ್ರೀ ಮಾದರಿಗಳನ್ನಾಗಿಸಿ ಕೊಂಡಾಡಲಾಯಿತು. ನವ್ಯ ಪರಂಪರೆಯಲ್ಲಿ ಖಾಸಗಿ ಜಗತ್ತಿನ ಒಳಗೆ ಮುಳುಗಿಹೋದ ಏಕಾಂಗಿಯೊಬ್ಬನ ಲೈಂಗಿಕ ತೆವಲು ಹಾಗೂ ಅಸ್ತಿತ್ವದ ಶೋಧನೆಯಲ್ಲಿನ ಸಾಧನವನ್ನಾಗಿ ನೋಡಲಾಯಿತು. ಉಳಿದ ಪರಂಪರೆಗಳಿಗಿಂತ ಬಂಡಾಯ ಪರಂಪರೆಯಲ್ಲಿನ ಹೆಣ್ಣುಗಳು ರಕ್ತ ಮಾಂಸಗಳಿಂದ ಅನಾವರಣಗೊಂಡು ತಮ್ಮ ಸಹಜತೆಗಳಿಂದ ಚಿತ್ರಿಸಲ್ಪಟ್ಟವು. ಗ್ರಾಮೀಣ, ಕೆಳವರ್ಗಕ್ಕೆ ಸೇರಿದ ಲೇಖಕ, ಲೇಖಕಿಯರಲ್ಲಿ ಈ ಎಲ್ಲಾ ಅದುಮಿಟ್ಟ, ಶಿಷ್ಟ ಪ್ರಪಂಚದೊಳಗಿನಿಂದ ಹೊರಗಿಟ್ಟ ಮಣ್ಣಿನ, ದುಡಿವ ಜನರ ಬದುಕು ಸ್ಫೋಟಿಸಲ್ಪಟ್ಟವು. ಗ್ರಾಮೀಣ ದೇವತೆಗಳು ತಮ್ಮ ಸಹಜ ರೀತಿಯಲ್ಲೇ ಹೊರತೆರೆದುಕೊಂಡು ಸ್ತ್ರೀವಾದ ಚಿಂತನೆಗಳಿಗೆ ಬೇರೆಯದೇ ಹೊಸ ಮಾದರಿಗಳಾಗಿ ಬೆಳೆಯಬಲ್ಲ ಶಕ್ತಿಯನ್ನು ಪಡೆದುಕೊಂಡಿವೆ. ಈ ನಿಟ್ಟಿನೆಡೆಗೆ ಸ್ತ್ರೀವಾದದ ಚಿಂತನೆ ನಡೆಯಬೇಕಾಗಿರುವುದು ಅತ್ಯಗತ್ಯ. ಈ ಎಲ್ಲ ಪರಂಪರೆಗಳಲ್ಲಿ ಹೆಣ್ಣು ವ್ಯಕ್ತಗೊಂಡಿರುವುದನ್ನು ಗಮನದಲ್ಲಿರಿಸಿಕೊಂಡೇ ಇಂದಿನ ಸ್ತ್ರೀವಾದಿ ಚಿಂತನೆ ನಡೆಯುತ್ತಿರುವುದು ಸ್ವಾಗತಾರ್ಹ.

ಸ್ತ್ರೀವಾದಿ ಚಿಂತನೆಯು ನಡೆಯುವಲ್ಲಿ ನಾವು ಹಿಂದೆ ಆಗಿ ಹೋದ ಮಹಿಳಾ ಚಿಂತನೆಗಳ ಮಾದರಿಗಳಾಗಿ ಅಕ್ಕಮಹಾದೇವಿಯ ವಚನಗಳು ಹಾಗೂ ಸಂಚಿಹೊನ್ನಮ್ಮನ ಹದಿಬದೆಯ ಧರ್ಮಗಳನ್ನು ನೋಡುವುದು ಸೂಕ್ತವೆನಿಸುತ್ತದೆ. ಅಕ್ಕಮಹಾದೇವಿಯ 'ಶರಣಸತಿ-ಲಿಂಗಪತಿ' - ಕಲ್ಪನೆ ಅವಳ ಅಭಿವ್ಯಕ್ತಿ ಸ್ವಾತಂತ್ರ್ಯದ ನಿರ್ಭಿಡೆಯ ಮನೋಭಾವವನ್ನು, ಸುತ್ತುವರೆದ ಪಿತೃಪ್ರಧಾನ ವ್ಯವಸ್ಥೆಯ ಅಡಿಗಲ್ಲನ್ನು ಕಿತ್ತು ಸಡಿಲಗೊಳಿಸುವ ಕ್ರಿಯೆಯೆಂದೇ ಪರಿಭಾವಿಸಬೇಕಾಗುತ್ತದೆ.

ಸಾಂಸಾರಿಕ ಬಂಧನವನ್ನು ಕಳಚಿ ಹೊರಹೊರಟಾಗ ಅಕ್ಕ ಆಕೆಯ ಪತಿ, ಸಾಂಸಾರಿಕ ಕಲ್ಪನೆಗಳು ಹನ್ನೆರಡನೇ ಶತಮಾನದ ಕಾಲಕ್ಕೆ ತೀವ್ರ ಕ್ರಾಂತಿಕಾರಿ ವಿಚಾರಗಳಾಗಿದ್ದವು. ಇಹದ ಗಂಡ, ಪರದ ಗಂಡನ ಅವಳ ನೇರಮಾತಿನ ವಚನಗಳು ಕೈಜಾರಿ ಹೋಗದಂತೆ, ಎಲ್ಲೂ ಮರೆಯಾಗದಂತೆ ಉಳಿದು ಬಂದು ಇಂದಿಗೂ ಲಭ್ಯವಾಗುತ್ತಿರುವುದು ಆಶ್ಚರ್ಯಕರ ಸಂಗತಿಯೇ. ತನ್ನ ಸ್ತ್ರೀತ್ವವನ್ನು ನಿರಾಕರಿಸುತ್ತಲೇ ಅವಳು ಸಾಧನೆಯ ಕಡೆಗೆ ಹೊರಟಿದ್ದು ಇಂದಿಗೂ ಮತ್ತೆ ಮತ್ತೆ ಚರ್ಚೆಗೆ ಒಳಗಾಗುತ್ತದೆ. ಇದಕ್ಕೆ ವಿರುದ್ಧವಾಗಿ ಸಂಚಿಹೊನ್ನಮ್ಮನ ಹದಿಬದೆಯ ಧರ್ಮ ಇನ್ನೊಂದು ಮಾದರಿಯಾಗಿ ಕಂಡು ಬರುತ್ತದೆ. ಪತಿವ್ರತೆ ಹಾಗೂ ಅವಳು ಆಚರಿಸಬೇಕಾದ ಗೃಹಧರ್ಮವನ್ನು ಕುರಿತಂತೆಯೇ ಈ ಕೃತಿ ರಚಿಸಲಾಗಿದೆ. ಅವಳು ಸದಾ ಕುಟುಂಬದ ಒಳಿತಿಗಾಗಿಯೇ ಚಿಂತಿಸುವವಳು.

ತನ್ನ ಮನೆಯ ಬಡತನಗಳ ಧನಗಳ
ತನ್ನಿನಿಯನ ತಪ್ಪುಗಳ
ತನ್ನ ಮರವೆ ಮೋಸಗಳನವರಿವರೊಳು
ಬಿನ್ನವಿಸದೆ ಮರಸುವುದು

ಈ ಎರಡೂ ಮಾದರಿಗಳು ಡಿ.ಆರ್.ಎನ್ ಗುರುತಿಸುವಂತೆ ಗಾರ್ಗಿ ಹಾಗೂ ಕಾತ್ಯಾಯಿನಿ ಮಾದರಿಗಳಾಗಿವೆ. ಇವತ್ತಿನ ಕನ್ನಡದ ಮಹಿಳಾ ಸಾಹಿತ್ಯದ ಚರ್ಚೆ ಬೌದ್ಧಿಕವಾಗಿ ಚಿಂತಿಸುವ ಗಾರ್ಗಿ ಹಾಗೂ ಗೃಹವಾದಿನಿ ಕಾತ್ಯಾಯಿನಿ ನಡುವೆ ನಡೆಯುತ್ತಿದೆಯಾದರೂ ಲೇಖಕಿಯರು ತಮ್ಮನ್ನು ರೂಪಿಸಿಕೊಂಡ ಬೌದ್ಧಿಕ ಹಾಗೂ ಸಾಮಾಜಿಕ ಹಿನ್ನೆಲೆಗಳು ಯಾವ ಮಾದರಿಗೆ ಸೇರುತ್ತವೆ ಎಂಬುದನ್ನು ನಿರ್ಣಯಿಸುತ್ತದೆ.

ಈ ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿಯೇ ಕೆ.ಎಸ್. ನರಸಿಂಹಸ್ವಾಮಿಯವರ ಕವಿತೆಗಳನ್ನು ನೋಡುವುದು ಸೂಕ್ತವೆನಿಸುತ್ತದೆ. ಕೆ.ಎಸ್. ನರಸಿಂಹಸ್ವಾಮಿಯವರು ಕೇವಲ ಬುದ್ಧಿಜೀವಿ ಎಂದಷ್ಟೆ ಹಣೆಪಟ್ಟಿಗೆ ಒಳಗಾಗದೆ ಜನಸಾಮಾನ್ಯರನ್ನು ಮುಟ್ಟಿದ ಜನಪ್ರಿಯ ಕವಿಯೂ ಹೌದು. ಜನಪದರ ಪದ್ಯಗಳಂತೆ ಇವರ ಕಾವ್ಯವೂ ಸರಳವಾಗಿ ಜನರ ಮನಸ್ಸಿನಲ್ಲಿ ಅಚ್ಚೊತ್ತಿ ನಿಂತಿದೆ. ಮಧ್ಯಮವರ್ಗದ ಗೃಹಸ್ಥನೊಬ್ಬನ ಹೆಂಡತಿಯೊಂದಿಗಿನ ಅಪ್ಯಾಯಮಾನವಾದ ಸರಸ, ವಿರಸ ಎಲ್ಲ ಮಧ್ಯಮ ವರ್ಗ ಹಾಗೂ ಎಲ್ಲಾ ವರ್ಗದ ಜನರನ್ನು ಮುಟ್ಟಿದ ಕಾವ್ಯವಾಯಿತು. ಮದುವೆಗಿಂತ ಮುಂಚೆ ಪ್ರಣಯ ಕವಿತೆಗಳನ್ನು ಬರೆಯದ ಕವಿ

ಮದುವೆಯ ನಂತರ ತಾನು ಸಂಪೂರ್ಣ ದಾಂಪತ್ಯ ಜೀವನದ ಪ್ರಣಯಕ್ಕೆ ಆಕರ್ಷಿತನಾದೆ ಎನ್ನುತ್ತಾರೆ. ಯಾವುದೇ ಕಿರಿಕಿರಿಗಳಿಲ್ಲದ ಮೇಲುಕೀಳೆನ್ನದ, ಲಿಂಗಭೇದಗಳಿಲ್ಲದ ಅದ್ಭುತ ಜಗತ್ತು ಈ ಕವಿಯ ಪ್ರಣಯ ಜಗತ್ತು. ಹತ್ತು ಸಂಕಲನಗಳನ್ನೊಳಗೊಂಡ ಸಮಗ್ರ ಸಂಕಲನ ಮಲ್ಲಿಗೆಯ ಮಾಲೆ, ನವಿಲ ದನಿ ಹಾಗೂ ಸಂಜೆಹಾಡು ನರಸಿಂಹಸ್ವಾಮಿಯವರ ಪ್ರಕಟಿತ ಸಂಕಲನಗಳು. ಮೈಸೂರು ಮಲ್ಲಿಗೆ ಸಂಪೂರ್ಣವಾಗಿ ದಾಂಪತ್ಯ ಜೀವನದ ಉಲ್ಲಾಸದ ಕ್ಷಣಗಳನ್ನು ಹಿಡಿದಿಡುವ ಸಂಕಲನ. ಉಳಿದ ಸಂಕಲನಗಳಲ್ಲಿ ಈ ಭಾವ ಅಷ್ಟಾಗಿ ಎದ್ದು ಕಾಣದಿರುವುದಕ್ಕೆ ಕವಿ ವಹಿಸಿದ ಎಚ್ಚರಿಕೆಯೇ ಕಾರಣವಾಗಿದೆ. ನವೋದಯ ಸಂದರ್ಭದಲ್ಲಿ ಆರಂಭವಾದ ಕವಿತಾ ರಚನೆ ನವ್ಯದ ಸಂದರ್ಭದಲ್ಲಿ 'ಶಿಲಾಲತೆ'ಯಿಂದ ಮುಂದಕ್ಕೆ ವಸ್ತು ಹಾಗೂ ತಂತ್ರಗಳನ್ನು ಕುರಿತಂತೆ ಯೋಚನೆಗೀಡಾದುದನ್ನು ಕಾಣಬಹುದು. ಬಿಳಿಯ ಹೂಗಳ ಕವಿತೆ, ಇಡದಿರು ನಿನ್ನ ಸಿಂಹಾಸನದ ಮೇಲೆ, ಬರಿಗೊಡಗಳಿಗೆ ಸಮಾಧಾನ, ಗಾಂಧಿಸ್ತವನ, ಗಡಿಯಾರದಂಗಡಿಯ ಮುಂದೆ ಮುಂತಾದ ಈ ಕವನಗಳಲ್ಲಿ ಈ ದಾರಿ ನಿಚ್ಚಳವಾಗಿ ಕಂಡಿತು.

ಈ ಮೇಲಿನ ವಿಚಾರಗಳೇನೇ ಇದ್ದರೂ ನರಸಿಂಹಸ್ವಾಮಿಯವರ ಕಾವ್ಯದಲ್ಲಿ ವಿವಾಹಪೂರ್ವದ ಪ್ರಣಯಗಳಿಲ್ಲ, ಬದಲಾಗಿ ಇರುವುದು ವಿವಾಹದ ಚೌಕಟ್ಟಿಗೆ ಒಳಗಾದ ನಂತರದ ಪ್ರಣಯಗಳು. ಮದುವೆಯಾದ ಹೊಸತರ ಹಸಿಬಿಸಿ ಪ್ರೇಮ ಅನುಭವಿಸಿದಷ್ಟೂ ಮತ್ತೆ ಚಿಗುರಿ ತಣಿಯದೆ ಇರುವಂಥದ್ದು. ಈ ಆರದ ತಣಿಯದ ಗಳಿಗೆಗಳನ್ನು ರಸಮಯವಾಗಿ 'ನನ್ನೊಬ್ಬನದೇ ಅಲ್ಲ; ಏಕಕಾಲಕ್ಕೆ ಎಲ್ಲರದೂ' ಅನಿಸುವಂತಹ ರಚನೆಯನ್ನಾಗಿಸಿದ ಹಿರಿಮೆ ಅವರದು. ಹೊಸ ದಂಪತಿಗಳ ಒಂದಾಗುವಿಕೆಯಲ್ಲಿ ಈ ಲೋಕವನ್ನು ದಾಟಿ ಹೊಸಲೋಕಕ್ಕೆ ಹೋಗುವ ಕಾತರತೆ ಇದೆ. ಈ ಕಾತರತೆಯಲ್ಲಿ ಸಾವು-ನೋವು ಇಣುಕಲೂ ಸಹ ಸಾಧ್ಯವಿಲ್ಲ. ಇದು ಏಕಕಾಲಕ್ಕೆ ಎಲ್ಲ ಪ್ರೇಮಿಗಳ ಸಾರ್ಥಕ ಅನುಭವ ಸಹ ಆಗಿರಲು ಸಾಧ್ಯವಿದೆ.

ತಾರೆಗಳ ಮೀಟುವೆವು, ಚಂದಿರನ ದಾಟುವೆವು
ಒಲುಮೆಯೊಳಗೊಂದು ನಾವು
ನಮಗಿಲ್ಲ ಸಾವು, ನೋವು

ಇಂತಹ ಆಗಾಧ ಒಲವಿರಿಸಿಕೊಂಡ ಪತಿ, ಸತಿಗಾಗಿ ತೌರಿಗೆ ಬರುತ್ತಾನೆ. ಸತಿ ಬಹಿಷ್ಟೆ ಯಾಗಿದ್ದಾಳೆ. ಹೊರಬರುವ ಹಾಗಿಲ್ಲ. ಪತಿ ನಿರಾಸೆಯಿಂದ ಬೆಳಗಾದ ನಂತರ ಹಿಂದಿರುಗಲು ಸಿದ್ಧನಾಗುತ್ತಾನೆ. ಆಗ ಒಳಗಿನಿಂದ ನೀರಾಯಿತು ಎಂಬ ಸುದ್ದಿಕೇಳಿ ಕವಿಯ ಸಂಭ್ರಮ ವರ್ಣಿಸುವಂತಿಲ್ಲ.

ಪದುಮಳು ಬಂದಳು ಹೂವನು ಮುಡಿಯುತ
ರಾಯರ ಕೋಣೆಯಲಿ

ಇಂತಹ ದಂಪತಿಗಳ ಮಧ್ಯೆ ಸರಸ-ಸಲ್ಲಾಪವಿರುವಂತೆಯೇ ವಿರಸ-ವಿರಹವೂ ಚೆಲ್ಲಾಟ ವಾಡುತ್ತದೆ. ತೌರಿಗೆ ಹೊರಡುವ ಮಡದಿಯ ಬಗ್ಗೆ ಪತಿ ಮುನಿಸಿಕೊಂಡಿದ್ದಾನೆ. ಆದರೂ

ಉದಾರ ಹೃದಯದಿಂದ ಕಳುಹಿಸಿ ಕೊಡುತ್ತಾನೆ. ಒಂದು ಕ್ಷಣದ ನೆರಳು ಬಿಸಿಲಾಟವನ್ನು ಕವಿ ಸೊಗಸಾಗಿ ಚಿತ್ರಿಸಿದ್ದಾರೆ.

ಕೂಡಿದರೆ ಕೆನೆಹಾಲು, ಅಗಲಿದರೆ ಕೆನೆಮೊಸರು
ಒಲುಮೆಯೊಳಗೆಲ್ಲ ಸೊಗಸು

ತೌರಿನ ಹಂಬಲ ಹೆಣ್ಣುಮಕ್ಕಳಿಗೆ ಅದೂ ಮದುವೆಯಾದ ಹೊಸತರಲ್ಲಿ ಬಹಳವಾಗಿ ಇರುತ್ತದೆ. ಆದರೆ ಪತಿಗೆ ಸತಿ ತನ್ನನ್ನು ಅಗಲುವುದು ಇಷ್ಟವಿಲ್ಲ. ಅವಳಿಲ್ಲದ ಮನೆ ಮನೆಯೇ ಅಲ್ಲ. ಹೂವಾಡಗಿತ್ತಿ ಹೆಂಡತಿ ಮನೆಯಲಿಲ್ಲದಾಗ ಹೂವು ತಂದಿದ್ದು ಹೂವೆಲ್ಲ ಒಡತಿಗಾಗಿ ಹಂಬಲಿಸುತ್ತಿದೆ ಎನ್ನುತ್ತಾರೆ. ಆ ಹೂವಲ್ಲಿ ತಾನೂ ಒಂದು ಹಂಬಲಿಸುವ ಹೂವು ಎಂದು ಅಭಿಮಾನದಿಂದ ಹೇಳುತ್ತಾರೆ. ಹೆಣ್ಣಿಗೆ ಗಂಡು, ಗಂಡಿಗೆ ಹೆಣ್ಣು ಬಿಡಿಸಲಾರದ ನಂಟಾಗಿದೆ. ಈ ನಂಟನ್ನು ಅರ್ಥ ಮಾಡಿಕೊಂಡ ಹೆಣ್ಣು ಬಡತನದಲ್ಲಿ, ಸಿರಿತನದಲ್ಲಿ ಯಾರಿರಲಿ ಬಿಡಲಿ ತನ್ನ ಗಂಡನೇ ದೊರೆ ಎಂಬುದನ್ನು ಅಭಿಮಾನದಿಂದ ಹೇಳುತ್ತಾಳೆ. ಈ ಪ್ರಯಾಣದಲ್ಲಿ ತಾನೂ ಜೊತೆಗಿದ್ದೇನೆ ಎಂದು ಧೈರ್ಯ ತುಂಬುತ್ತಾಳೆ.

ಗಂಡನಿಗೆ ಒಪ್ಪಾಗಿ, ಕಂದನಿಗೆ ದಿಕ್ಕಾಗಿ
ಪಯಣದಲಿ ಜೊತೆಗಾಗಿ ನಾನಿಲ್ಲವೆ.

ಒಲಿವಿನಲಿ ಬೆರೆತ ಗಂಡು ಹೆಣ್ಣಿನ ಸ್ನೇಹ ಮರುಗದ ಜೊತೆಯಲ್ಲಿರುವ ಮಲ್ಲಿಗೆಯಂತೆ. ಮುಂದೆ ದಾಂಪತ್ಯದಲ್ಲಿ ಮಗುವಿನ ಜನನದೊಂದಿಗೆ ಮೊದಲಿನ ಕಾತರತೆ ಕಳವಳ ವಿರಹಗಳ ಭಯವಿಲ್ಲದಿದ್ದರೂ ಪ್ರೇಮ ಮಾಸಿಲ್ಲ. ಬದಲಾಗಿ ಮಾಗುವ ಹಂತದಲ್ಲಿದೆ. ದಾಂಪತ್ಯದ ಬದುಕಿನಲ್ಲಿ ಕಷ್ಟ ಸುಖಗಳ ಮೂಲಕ ಬರುವ ಚಿಂತೆ ಇರುವಂಥದ್ದೇ. ಆದರೆ ಅದು ಬರುವ ರೀತಿ ನಾನಾ ರೀತಿಯದು. ಆದರೆ ಕವಿಯ ಪ್ರಕಾರ ಚಿಂತೆಯಿಲ್ಲದೆ ಚೆಲುವು ಚೆಲುವಲ್ಲ. ಚಿಂತೆಯಿರುವ ಚೆಲುವೇ ಅನನ್ಯ ಎನ್ನುತ್ತಾರೆ. ಅವರ ಕವಿತೆಗಳಲ್ಲಿ ಒಲವನ್ನುಣಿಸುವ ಹೆಣ್ಣು ಹಲವು ಹೆಸರುಗಳಲ್ಲಿ ಅಂದರೆ ಪದುಮ, ಕನಕ, ಮೀನಾಕ್ಷಿ, ಶಾರದೆಯರಾಗಿ ಬರುತ್ತಾರೆ. ಬೆವರಿನಿಂದ ತೊಯ್ದ ಕುಂಕುಮದ ಹೆಣ್ಣು, ಮೂಗುನತ್ತು ಸರಿಪಡಿಸಿಕೊಳ್ಳುವ ಹೆಣ್ಣು, ಮಧ್ಯಮ ವರ್ಗದ ಸಂತೃಪ್ತ ಹೆಣ್ಣು, ಶಾನುಭೋಗರ ಮುದ್ದಿನ ಮಗಳು ಹೀಗೆ ನಾನಾ ಕಲ್ಪನೆಗಳಲ್ಲಿ ಕವಿಯ ಚಿತ್ರ ಮೂಡುತ್ತದೆ. ಕವಿಯ ತಣಿಯದ ದಾಂಪತ್ಯ ಜೀವನವ ಕಂಡು ಈ ನಾನಾ ಮುಖದಲ್ಲಿ ಚಿತ್ರಿತವಾದ ಹೆಣ್ಣು ಕವಿಗೆ ಪ್ರಶ್ನೆ ಮಾಡುತ್ತಾಳೆ.

ಇವಳೆತ್ತಿ ನಿಲ್ಲಿಸಿದ ಬಿದಿರಿನೇಣಿಯ ಮೇಲೆ
ನಾನು ನಕ್ಷತ್ರಗಳ ಹಿಡಿಯಹೋದೆ
ಈಗಲೂ ಕೇಳುವಳು 'ಇನ್ನೂ ಆಸೆಯೆ ನಿಮಗೆ
ಎಪ್ಪತ್ತರಲ್ಲೂ?' ಮುತ್ತಿಟ್ಟು ನಲಿದೆ.

ಹೀಗೆ ಒಲಿದು ಜೀವನ ಆರಂಭಿಸಿದ ಮುಗಿಯದ, ಬರಡಾಗದ ಕುತೂಹಲವಿನ್ನೂ ತಣಿಯದ ದಾಂಪತ್ಯದ ಹಲವು ಮುಖಗಳ ಚಿತ್ರಣ ಈ ಸಂಕಲನಗಳಲ್ಲಿವೆ.

ಸ್ತ್ರೀವಾದದ ಹಿನ್ನೆಲೆಯಲ್ಲಿ ಕೆ.ಎಸ್. ನರಸಿಂಹಸ್ವಾಮಿಯವರ ಕಾವ್ಯವನ್ನು ವಿಶ್ಲೇಷಿಸುವುದು ಹಿಡಿತಕ್ಕೆ ಸಿಗದ ವಿಚಾರವಾಗುತ್ತದೆ. ಅಸಮಾನತೆ, ಲಿಂಗಭೇದ, ಅಧಿಕಾರ ಅಥವಾ ಒಡೆತನದ ರಾಜಕಾರಣದಿಂದ ಕೆಳತಳ್ಳಲ್ಪಟ್ಟ ಹೆಣ್ಣುಗಳ ಚಿತ್ರಣ ಇಲ್ಲಿಲ್ಲ. ಪುರುಷನ ಲೋಕದ ಮೂಲಕ ಸ್ಥಾಪಿತಗೊಳ್ಳುವ ದಾಂಪತ್ಯದೊಳಗಿನ ಹೆಣ್ಣುಗಂಡುಗಳ ಚಿತ್ರಣ ಇಲ್ಲಿವೆ. ಹಲವು ಶತಮಾನಗಳಿಂದ ಹರಿದು ಬಂದ ಸ್ವಸ್ಥ ವೈವಾಹಿಕ ಜೀವನದ ಹದ ತಪ್ಪದ ಬಾಳಿನ ಚಿತ್ರಣಗಳಿಲ್ಲಿವೆ. ಯಾರೂ ಅಪೂರ್ಣರಲ್ಲ. ಯಾವ ದಬ್ಬಾಳಿಕೆ, ಶೋಷಣೆಯ ಲಿಂಗ ಭೇದಗಳ ಚಿತ್ರಣಗಳಿಲ್ಲ. ಹೆಂಡತಿಯನ್ನು ಮನಸಾರೆ ಪ್ರೀತಿಸುವ ಗಂಡನೊಬ್ಬ ಅದನ್ನು ಹೆಮ್ಮೆಯಿಂದ ಹೇಳಿಕೊಳ್ಳುವ ಆತ್ಮ ಪ್ರತ್ಯಯವಿಲ್ಲಿದೆ. ಬರ್ನ್ಸ್ ಕವಿಯ ಪ್ರಭಾವ ನರಸಿಂಹಸ್ವಾಮಿಯವರ ಮೇಲಿದೆ ಎಂಬುದು ಚರ್ಚಿತವಾದ ವಿಮರ್ಶೆಯಾದರೂ ಬರ್ನ್ಸ್ ಕಾವ್ಯದ ರೀತಿಗೂ ನರಸಿಂಹಸ್ವಾಮಿಯವರ ಕಾವ್ಯಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಬರ್ನ್ಸ್‌ಗೆ ಒಬ್ಬಳೇ ಪ್ರೇಯಸಿಯಲ್ಲ, ಹಲವು ಪ್ರೇಯಸಿಯರಿದ್ದರೂ ತಾನು ಅವರಿಗೆ ಅನಿವಾರ್ಯವಲ್ಲವೆನ್ನುತ್ತಾನೆ. ನರಸಿಂಹಸ್ವಾಮಿಯವರ ಕಾವ್ಯದ ನಾಯಕನ ಪ್ರೀತಿ ಹೆಂಡತಿಗೆ ಮಾತ್ರ. ತನ್ನ ಮನೆಯೇ ಕೇಂದ್ರ, ಹೆಂಡತಿಯೇ ಅದರ ಉಸಿರಾಗಿದ್ದು ಅದರಿಂದಾಚೆಗಿನ ಸಂಬಂಧಗಳ ಬಗ್ಗೆ ಯೋಚಿಸಲಾರ. ಉಳಿದ ಹೆಣ್ಣುಗಳೆಂದರೆ ಅಪಾರ ಗೌರವ ಅವನಿಗೆ. ಬರ್ನ್ಸ್‌ನ ರೀತಿ ಶುದ್ಧ ಪ್ರೇಮಿಯದಾಗಿದ್ದು ಅದಕ್ಕೆ ಸಾಮಾಜಿಕ ಬಂಧನಗಳಿಲ್ಲ. "ಅವನ ಇಡೀ ಪ್ರೇಮ ಕವಿತೆಗಳನ್ನು ಓದಿದಾಗ ಬರ್ನ್ಸ್‌ನ ನಾಯಕ ಒಬ್ಬ ಪ್ರೇಮಿಯಾಗಿ ನಮಗೆ ಕಾಣಿಸುತ್ತಾನೆಯೇ ಹೊರತು ಈ ಸಮಾಜದ ಎಲ್ಲಾ ಜವಾಬ್ದಾರಿಗಳಿಂದ ನಿಯಂತ್ರಿತನಾದ ಒಬ್ಬ 'ಸಾಮಾಜಿಕ ವ್ಯಕ್ತಿ'ಯ ರೀತಿ ಕಾಣಿಸುವುದಿಲ್ಲ. ಆದರೆ ನರಸಿಂಹಸ್ವಾಮಿಯವರ ನಾಯಕ ಒಬ್ಬ ಸಾಮಾಜಿಕ ವ್ಯಕ್ತಿಯಾಗಿ ನಮಗೆ ಮುಖ್ಯನಾಗುತ್ತಾನೆಯೇ ಹೊರತು ಸಾಮಾಜಿಕ ರೀತಿ ನೀತಿಗಳನ್ನೆಲ್ಲ ಗಾಳಿಗೆ ತೂರಿದ ಪ್ರೇಮಿಯ ರೀತಿಯಲ್ಲಿ ಆತ ಎಂದೂ ವರ್ತಿಸುವುದಿಲ್ಲ."- ಈ ರೀತಿ ಬರ್ನ್ಸ್‌ನ ಕಾವ್ಯಕ್ಕೂ ನರಸಿಂಹಸ್ವಾಮಿಯವರ ಪ್ರೇಮ ಕವಿತೆಗಳಿಗೂ ಯಾವುದೇ ನೇರ ಸಂಬಂಧವಿಲ್ಲವೆಂದು ನರಹಳ್ಳಿ ಬಾಲಸುಬ್ರಹ್ಮಣ್ಯ ನಿರೂಪಿಸುತ್ತಾರೆ.[೪]

ಈ ಮೇಲಿನ ಮಾತುಗಳಿಂದ ವ್ಯಕ್ತವಾಗುವುದಿಷ್ಟು - ಉಳಿದ ನವೋದಯ, ನವ್ಯ ಕವಿಗಳಂತೆ ಇಂಗ್ಲೀಷ್ ಸಾಹಿತ್ಯದ ಪ್ರೇರಣೆ ಪಡೆದರೂ ನರಸಿಂಹಸ್ವಾಮಿಯವರು ಶೈಲಿ ಹಾಗೂ ತಂತ್ರಗಳಲ್ಲಿ ಬದಲಾವಣೆ ಮಾಡಿಕೊಳ್ಳಲಿಲ್ಲ. ಬರ್ನ್ಸ್‌ನ ಸ್ವಚ್ಛಂದ ಪ್ರಣಯವನ್ನು ವಸ್ತುವನ್ನಾಗಿ ಸ್ವೀಕರಿಸದೆ ಜನಪದ ಸಾಹಿತ್ಯದ ವೈವಾಹಿಕ ಜೀವನದ ಪ್ರಣಯದ ಮಹತ್ವವನ್ನು ಎತ್ತಿ ಹಿಡಿದಿದ್ದಾರೆ.

ನರಸಿಂಹಸ್ವಾಮಿಯವರು ಹೆಣ್ಣನ್ನು ವೈವಾಹಿಕ ಚೌಕಟ್ಟಿನಲ್ಲಿ ನೋಡಿದಂತೆಯೇ ಇನ್ನೊಂದು ವಿಸ್ತೃತ ಮುಖ ಭೂಮಿತಾಯಿಯನ್ನಾಗಿಯೂ ನೋಡುವ ಪ್ರಯತ್ನವನ್ನು ನಡೆಸಿದ್ದಾರೆ. ಅವಳನ್ನು ಅನ್ನಪೂರ್ಣೆಯಾಗಿ, ಭೂಮಿಗೀತವನ್ನಾಗಿ, ಕುಂಕುಮ ಭೂಮಿಯನ್ನಾಗಿ, ಶಿಲೆಗೆ ಹೂವಿನ ವಂಕಿಯಾಗಿ ನಾನಾ ರೀತಿಯ ಕಲ್ಪನೆಗಳಲ್ಲಿ ಕಾಣುವ ಪ್ರಯತ್ನ

ಮಾಡಿದ್ದಾರೆ. ನರಸಿಂಹಸ್ವಾಮಿ ಮನುಷ್ಯ ಈ ಭೂಮಿಗೆ, ಈ ಚರಿತ್ರೆಗೆ ಸೇರಿದವನು ಎಂಬ ನಂಬಿಕೆಯಿಂದಲೇ ಹೊರಡುತ್ತಾರೆ. ಹೀಗಾಗಿಯೇ ಭೂಮಿತಾಯಿ ಅತ್ಯಂತ ನಿಷ್ಠೆಯಿಂದ ತನ್ನ ಮಕ್ಕಳನ್ನು ಸಾಕುವ, ಶಿಕ್ಷಿಸುವ, ತಯಾರು ಮಾಡುವ ಕೆಲಸ ಮಾಡುತ್ತಿದ್ದಾಳೆ. ಮುಂದಿನ ಬದುಕಿನ ಹೋರಾಟಕ್ಕೆ ಮಕ್ಕಳನ್ನು ಸಿದ್ಧಗೊಳಿಸುವ ಗುರುತರ ಜವಾಬ್ದಾರಿ ಹೊತ್ತಿದ್ದಾಳೆ.

ಬೆಂಕಿಯಲಿ ನೀರಿನಲ್ಲಿ ತನ್ನ ಮಕ್ಕಳನೆಸೆದು
ಈಜು ಕಲಿಸುವ ನೆಲದ ತಾಯ-ನೋಟ.
ತಾಯಮಕ್ಕಳ ಆಟ ನಡೆಯುತಿದೆ ಭೂಮಿಯಲಿ;
ತಂದೆ ಬೆಳಕಿನ ಕಡೆಗೆ ತಪ್ಪು ಹೆಜ್ಜೆ.
ಹಿಮದ ತೆರೆ, ಬಿಸಿಲ ತೆರೆ ಹೆಜ್ಜೆ ಹೆಜ್ಜೆಯ ನಡುವೆ;
ತಾಯಿ ಕಟ್ಟಿದ ಗೆಜ್ಜೆ ದಿಟ್ಟ ಕವಿತೆ.
ಗೆದ್ದಲಿನ ನೆಲಮನೆಗೆ ಹಾವು ಬಂತು;
ನೀರ ಮೇಗಣ ಗುಳ್ಳೆ ಬದುಕೆಂದಿತು;
ಇಹದ ಪರಿಮಳವಿರದ ಹಾದಿ ಹಿಡಿದು
ಬದುಕು ದುರ್ಬಲವಾಯಿತು;
ಕವಿತೆ ನೀರಸವಾಯಿತು.

ತಾಯಿ ಮಕ್ಕಳ ಆಟ ನಡೆಯುತ್ತಿರುವಂತೆಯೇ ತಂದೆ ಬೆಳಕಿನ ಕಡೆಗೆ ತಪ್ಪು ಹೆಜ್ಜೆ ಇಡುತ್ತಿದ್ದಾನೆ. ಹಿಮದ ತೆರೆ, ಬಿಸಿಲ ತೆರೆಗಳ ನಡುವೆ ಮೂಡಿದ ಶ್ರಮದ ಬದುಕಿನಲ್ಲಿ ತಾಯಿ ಕಟ್ಟಿದ ನೆಲಮನೆಗೆ ಹಾವು ಬಂದಿದೆ. ಇದರಿಂದಾಗಿ ಬದುಕು ನೀರ ಮೇಲಣ ಗುಳ್ಳೆ ಎಂಬ ಮಾತು ಸ್ಥಾಪಿತಗೊಂಡಿದೆ. ಹೀಗೆ ಭೂಮಿಯನ್ನು ದೂರ ಸರಿಸಿದ ಬದುಕು ದೂರವಾದಂತೆಯೇ ಆಗಿದ್ದು ಭೂಮಿಯ ಸಾಂಗತ್ಯ ಮರೆತ ಕವಿತೆಯೂ ನೀರಸವಾಗಿದೆ. ನವ್ಯ ಕಾವ್ಯದ ಅಸಂಗತ ಚಿತ್ರಣಗಳ ನಡುವೆ ಮೂಡಿದ ಈ ಕವಿತೆಯಲ್ಲಿ ತಂದೆಯ ನಿರ್ಲಿಪ್ತತನ, ತಾಯಿಯ ಹೋರಾಟದ ಬದುಕು, ನಡುವೆ ತಬ್ಬಿಬ್ಬಾದ ಮಕ್ಕಳ ವಾಸ್ತವ ಚಿತ್ರಣವನ್ನು ಅಸಂಗತವಾಗಿಯೇ ಹಿಡಿದಿಡಲಾಗಿದೆ. ನೆಲ ಮುಗಿಲಿನ ನಡುವಿನ ಸಂಘರ್ಷದಲ್ಲಿ ಮನುಕುಲದ ಬೇಗುದಿಯನ್ನು ಹಲವು ಕವಿತೆಗಳಲ್ಲಿ ನರಸಿಂಹಸ್ವಾಮಿಯವರು ಚಿತ್ರಿಸಿದ್ದಾರೆ.

ನರಸಿಂಹಸ್ವಾಮಿಯವರು ಕಂಡ ಹೆಣ್ಣು ಪ್ರಣಯಿನಿ ಮಾತ್ರವಾಗಿರದೆ ಪೊರೆವ ತಾಯಿಯೂ ಹೌದು. ಮುಂದೆ ಎದುರಿಸಲಿರುವ ಬದುಕಿನ ಹೋರಾಟಕ್ಕೆ ತನ್ನ ಸಂತಾನವನ್ನು ಎಚ್ಚರಿಕೆಯಿಂದ ಸಿದ್ಧಗೊಳಿಸುತ್ತಿದ್ದಾಳೆ. ಹೀಗೆ ತಮ್ಮ ಕವಿತೆಗಳ ಉದ್ದಕ್ಕೂ ನರಸಿಂಹಸ್ವಾಮಿಯವರು ಹೆಣ್ಣನ್ನು ಮೆಚ್ಚುಗೆಯಿಂದಲೇ, ಪ್ರೀತಿಯಿಂದಲೇ ಕಂಡಿದ್ದಾರೆ. ಸಾಂಪ್ರದಾಯಿಕ ನಿಲುವಿಗಿಂತಲೂ ಉದಾರವಾದಿ ಮಾನವತಾವಾದದ ಧೋರಣೆಯುಳ್ಳವರಾಗಿದ್ದು ಎಲ್ಲೂ ಬದುಕಿನ ಬಗ್ಗೆ ನಿರಾಶೆಯಾಗಲೀ ನೋವಾಗಲೀ ಅವರನ್ನು ಕಾಡಿದಂತೆ ಕಂಡುಬರುವುದಿಲ್ಲ. ಸಂಪೂರ್ಣವಾಗಿ ಸ್ತ್ರೀ ಪರವಾಗಿಯೇ ನಿಲ್ಲುವ ನರಸಿಂಹಸ್ವಾಮಿಯವರ

ಕವಿತೆಗಳು ಸ್ತ್ರೀವಾದಿ ವಿಮರ್ಶೆಗೆ ತ್ರಾಸವನ್ನು ಕೊಡದೆ, ಸ್ತ್ರೀವಾದದಿಂದ ಹೊರಗೆ ನಿಂತ ತಂತಾನೆ ಸ್ತ್ರೀ ಪರವಾಗಿ ನಿಲ್ಲುವ ಮಹತ್ತರ ಕಾವ್ಯವಾಗಿಯೇ ನಿಲ್ಲುತ್ತದೆ ಎಂಬುದು ಕವಿತೆಗಳ ಓದಿನಿಂದ ಗೋಚರವಾಗುವ ಸತ್ಯವಾಗಿದೆ.

## ಟಿಪ್ಪಣಿಗಳು

೧. ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ-ಕನ್ನಡ ಸಾಹಿತ್ಯ ಸಂದರ್ಭ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೦, ಪು. ಸಂ.-೫.

೨. ಸಂ. : ಡಾ. ಬಿ.ಎನ್. ಸುಮಿತ್ರಾಬಾಯಿ-ಸ್ತ್ರೀವಾದಿ ಪ್ರವೇಶಿಕೆ, ಕರ್ನಾಟಕ ಲೇಖಕಿಯರ ಸಂಘ, ೧೯೯೫, ಪು.ಸಂ.-೧೯.

೩. ಡಾ. ಬಿ.ಎನ್. ಸುಮಿತ್ರಾಬಾಯಿ-ವಿಚಯ, ಇಳಾ ಪ್ರಕಾಶನ, ೧೯೯೫, ಪು.ಸಂ. ೨೪-೨೫.

೪. ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ-ಇಹದ ಪರಿಮಳದ ಹಾದಿ, ಅಂಕಿತ ಪ್ರಕಾಶನ, ಪು.ಸಂ.-೫೬.

●

# ಜಾಗತೀಕರಣ ಮತ್ತು ಮಹಿಳಾ ಅಸ್ತಿತ್ವದ ಪ್ರಶ್ನೆ

**ಕವಿತಾ ರೈ ಬಿ.ಆರ್.**

ಸಮಕಾಲೀನ ಸಂದರ್ಭದಲ್ಲಿ ಜಾಗತೀಕರಣದ ಪ್ರಕ್ರಿಯೆ ಎನ್ನುವುದು ಕೇವಲ ಆರ್ಥಿಕ ರಾಜಕೀಯ ಕ್ಷೇತ್ರಗಳಿಗೆ ಮಾತ್ರ ಸೀಮಿತಗೊಳ್ಳದೆ, ಅದು ವಿಶ್ವದ ಬಹುರೂಪಿ ರಾಜಕೀಯ, ಆರ್ಥಿಕ, ಸೈನಿಕ, ಬೌದ್ಧಿಕ ಹಾಗೂ ಸಂಸ್ಕೃತಿಗಳನ್ನು ಒಟ್ಟು ಸೇರಿಸಿ ಬೆರೆಸುತ್ತಿದೆ. ಇದರ ವಾಹಕವಾಗಿ ಕಾರ್ಯ ನಿರ್ವಹಿಸುತ್ತಿರುವ ಸಮೂಹ ಮಾಧ್ಯಮಗಳು ಜಾಗತೀಕರಣವನ್ನು ಅತಿಶಕ್ತವಾಗಿ ಹರಡಿಬಿಟ್ಟಿವೆ. ಆಧುನಿಕತೆಯ ಆತ್ಯಂತಿಕ ಸ್ವರೂಪವಾದ ಈ ಜಾಗತೀಕರಣ ವೆನ್ನುವುದು ಎಲ್ಲಾ ಅರ್ಥಗಳಿಂದಲೂ ಕಾಲದ ನಿರಂತರೆಯ ಸಂಕೇತ. (ಮಾರ್ಷೆಲ್ ಮೆಕ್‌ಬಹಾನ್ ಎನ್ನುವ ವಿದ್ವಾಂಸ ಬಹಳ ಹಿಂದೆಯೇ 'ಜಗತ್ತು ಒಂದು ಹಳ್ಳಿ'ಯಾಗುವ ಕಾಲದ ಚಲನಶೀಲತೆಯ ಬಗ್ಗೆ ಮಾತನಾಡಿದ್ದ.) ಚಾರಿತ್ರಿಕವಾಗಿ ಜಾಗತೀಕರಣ ಎನ್ನುವುದು ಆರ್ಥಿಕ ಕ್ಷೇತ್ರದ ಖಾಸಗೀಕರಣ, ಉದಾರೀಕರಣದ ಪ್ರತಿಫಲನ ರೂಪ. ಆಧುನಿಕತೆಯ ಕೇಂದ್ರ ಬಿಂದುವಿನಿಂದ ರೂಪಿತಗೊಂಡ ಜಾಗತೀಕರಣವನ್ನು ಮೂಲಭೂತವಾಗಿ ಅರ್ಥೈಸಿಕೊಳ್ಳುವ, ಪರಿಣಾಮಗಳನ್ನು ಗುರುತಿಸುವ ಅಧ್ಯಯನಗಳು ಆರ್ಥಿಕ ಪಾತಳಿಯಿಂದ, ರಾಜಕೀಯ ಮೀಮಾಂಸೆಯಿಂದ, ಆಧುನಿಕತೆ ಮತ್ತು ಪರಂಪರೆಯನ್ನು ವಿಶ್ಲೇಷಿಸುವ ನೆಲೆಯಿಂದ, ಸಂಸ್ಕೃತಿಯ ಅನನ್ಯತೆಯ ಅರ್ಥೈಸುವಿಕೆಗಳಿಂದ ವಿಶ್ಲೇಷಣೆಗಳನ್ನು ಮುಂದಿಟ್ಟಿವೆ. ಆಯಾ ಕ್ಷೇತ್ರಗಳ ಪಲ್ಲಟಗಳ ಕೇಂದ್ರೀಯ ದೃಷ್ಟಿಕೋನಗಳಿಂದ ಜಾಗತೀ ಕರಣವು ವ್ಯಾಖ್ಯಾನಕ್ಕೆ ಒಳಪಟ್ಟಿದೆ. ಇವುಗಳ ಒಟ್ಟು ರೂಪದಲ್ಲಿ ಜಾಗತೀಕರಣ ಎದುರು ಮಾಡಿದ ಸಮಸ್ಯೆಯ ಸಂಕೀರ್ಣತೆಯು ಅಡಗಿದೆ. ಅಂದರೆ ಆರ್ಥಿಕ ಕ್ಷೇತ್ರದ ಖಾಸಗೀಕರಣ, ಉದಾರೀಕರಣದ ಮೂಲಕ ಬಂಡವಾಳಶಾಹಿ ಸಂಸ್ಕೃತಿಯು ಸಾರ್ವತ್ರಿಕರಣಗೊಳ್ಳುವುದು ಮತ್ತು ಎಲ್ಲಾ ರಾಷ್ಟ್ರ ಪ್ರಭುತ್ವಗಳು ಅಮೆರಿಕಾದ ಸಾರ್ವಭೌಮ ಚಕ್ರಾಧಿಪತ್ಯಕ್ಕೆ ಅಧೀನವಾಗಿ ಉಳಿಯುವ ರಾಜಕೀಯ ವ್ಯವಸ್ಥೆಯೊಂದು ನಿರ್ಮಾಣವಾಗುವುದು ಜಾಗತೀಕರಣದ ಬೆಳವಣಿಗೆಯ ಸಹಜ ಫಲಶೃತಿಯಾಗಿದೆ. ಈ ಬೆಳವಣಿಗೆಯು ಆಧುನಿಕ ಚರಿತ್ರೆಯ ನಿರ್ದಿಷ್ಟ ವಾದ ಪ್ರೇರಣೆಗಳ ಕಾರಣದಿಂದ ಅಲ್ಲದೆ ಅನುಕೂಲಕರ ಸನ್ನಿವೇಶಗಳಿಂದ ಉದ್ಭವಿಸಿದ ಸ್ಥಿತಿಯಾಗಿದೆ. ಜಾಗತೀಕರಣವೆಂಬ ಬಲೆಯು ವಿಶ್ವದ ಬಹುಮುಖಿ ಸಂಸ್ಕೃತಿಯನ್ನು

ಏಕಕೇಂದ್ರಿಯ ಪ್ರಾಬಲ್ಯಕ್ಕೆ ಸಿಲುಕಿಸುವ ಪ್ರಕ್ರಿಯೆಯ ಎಳೆಗಳಲ್ಲಿ ಕೇವಲ ಆರ್ಥಿಕ ಮತ್ತು ರಾಜಕೀಯವೆಂಬ ಆಕಾರರೂಪಿ ಎಳೆಗಳನ್ನಷ್ಟೇ ಗಂಭೀರವಾಗಿ ಚರ್ಚಿಸಲಾಗುತ್ತಿದೆ. ಒಂದರ್ಥದಲ್ಲಿ ಆರ್ಥಿಕ ಮತ್ತು ರಾಜಕೀಯ ತರ್ಕಗಳನ್ನು ಸರಳವಾಗಿ ಉಳಿದ ಕ್ಷೇತ್ರಗಳಿಗೆ ಸಮೀಕರಿಸಲಾಗುತ್ತಿದೆ. ಪುರುಷ ನಿರ್ಮಿತ ಜಾಗತೀಕರಣದ ಸಂರಚನೆಯಲ್ಲಿ ಎಲ್ಲಾ ರೀತಿಯಿಂದಲೂ ಬಲಿ ಪಶುಗಳಾಗುತ್ತಿರುವ ಮಹಿಳೆಯರ ಜೀವನಕ್ರಮಗಳನ್ನು ಸರಳೀಕೃತ ಗೊಂಡ ದ್ವಂದ್ವ ತೀರ್ಮಾನಗಳಿಂದ ಗ್ರಹಿಸಲಾಗುತ್ತಿದೆ.

ಜಾಗತೀಕರಣದ ಹಾದಿಯಲ್ಲಿಯೂ ಸಹ ಅಂತಿಮವಾಗಿ, ಅನಿವಾರ್ಯವಾಗಿ ಪಾಲುದಾರರಾಗುವವರೆಂದರೆ ಮಹಿಳೆಯರು. ಸಂಖ್ಯೆಯಲ್ಲಿ ವಿಶ್ವದ ಅರ್ಧ ಭಾಗದಷ್ಟಿರುವ ಮಹಿಳೆಯರು ಚಾರಿತ್ರಿಕವಾಗಿ ಎಲ್ಲಾ ಸಂದರ್ಭಗಳಲ್ಲಿಯೂ ಪುರುಷರ ಅಧೀನತೆಯನ್ನು ಒಪ್ಪಿಕೊಳ್ಳಬೇಕಾಗಿರುವಂತೆ, ಜಾಗತೀಕರಣದ ಸಂದರ್ಭದಲ್ಲಿ ಒಪ್ಪಿಕೊಳ್ಳಬೇಕಾಗಿದೆ. ಪುರುಷ ನಿರ್ಮಿತ ಸಂಸ್ಕೃತಿ ಮತ್ತು ಅಧಿಕಾರಗಳ ತರ್ಕವೂ ಜಾಗತೀಕರಣದ ವಿಭಿನ್ನ ಸಂಭವನೀಯತೆಗಳನ್ನು ಮಹಿಳೆಯರನ್ನು ಸೇರಿಸಿಯೇ ಪೋಣಿಸಿದೆ. ಇಂಡಿಯಾದ ಮಹಿಳೆಯರ ಜೀವನಕ್ರಮದಲ್ಲಿ ಇದು ಎದುರು ಮಾಡಿದ ಸನ್ನಿವೇಶಗಳನ್ನು ಗಾಯತ್ರಿ ಸ್ಪಿವಾಕ್ ಅವರ 'ಎ ಕ್ರಿಟೀಕ್ ಆಫ್ ಪೋಸ್ಟ್ ಕಲೋನಿಯಲ್ ರೀಸನ್' ಎನ್ನುವ ಕೃತಿ ಮತ್ತು ಸೂಸನ್ ಒಕಿನ್ ಅವರ ಈಸ್ ಮಲ್ಟಿ ಕಲ್ಚರಿಸಂ ಬ್ಯಾಡ್ ಫಾರ್ ವಿಮೆನ್' ಕೃತಿಗಳು ದೀರ್ಘವಾಗಿ ಚರ್ಚಿಸಿವೆ. (ನನಗೆ ತಿಳಿದ ಮಟ್ಟಿಗೆ ಕನ್ನಡದ ಸಂದರ್ಭದಲ್ಲಿ ಇಷ್ಟು ಪರಿಪೂರ್ಣವಾದ ಚರ್ಚೆ ಗ್ರಂಥ ರೂಪದಲ್ಲಿ ಪ್ರಕಟಗೊಂಡಿಲ್ಲ.)

ಸಮಾಜದ ತಳರಚನೆಯೇ ಆರ್ಥಿಕತೆ ಮತ್ತು ಆ ಮೂಲಕ ಸ್ಥಾಪಿತಗೊಳ್ಳುವ ಅಧಿಕಾರ (ರಾಜಕೀಯ)ವಾಗಿದೆ. ಇಂತಹ ತಳರಚನೆಯ ಬೆಳವಣಿಗೆಯನ್ನು ಆಧುನಿಕತೆಯ ಯುಗದಲ್ಲಿ ತಂತ್ರಜ್ಞಾನ ಮತ್ತು ವಿದ್ಯುನ್ಮಾನ ಮಾಧ್ಯಮಗಳು ಉತ್ಕರ್ಷವಾಗಿ ಅನಾವರಣಗೊಳಿಸುತ್ತಿವೆ. ಮಾತ್ರವಲ್ಲದೆ ಹೊಸ ಸಾಮುದಾಯಿಕ ಪ್ರಜ್ಞೆಯೊಂದನ್ನು ಸಾರ್ವತ್ರಿಕವಾಗಿ ಕಟ್ಟಿಕೊಡುತ್ತಿವೆ. ಈ ಹಿನ್ನೆಲೆಯಲ್ಲಿ ಜಾಗತೀಕರಣದಿಂದ ಮಾತ್ರ ಸಮಾಜದ ಬಹುಮುಖಿ ಅಸ್ತಿತ್ವವನ್ನು ಪಲ್ಲಟಗೊಳಿಸಿ ಏಕರೂಪ ಸಮಾಜವನ್ನು ಕಟ್ಟಲು ಸಾಧ್ಯ. ವಿಶ್ವದ ಸಮಗ್ರ ಮಹಿಳೆಯರ ದೃಷ್ಟಿಯಿಂದ ಇಂತಹ ಏಕರೂಪಿ ಸಾಮಾಜಿಕ ಸಂದರ್ಭ ಅತ್ಯಗತ್ಯ. ಮಾತ್ರವಲ್ಲ ಬಹುಮುಖಿ ಸಂಸ್ಕೃತಿ ಮಹಿಳೆಯರ ಮುನ್ನಡೆಗೆ, ಏಕತೆಗೆ, ಸಾರ್ವತ್ರಿಕ ಹೋರಾಟಕ್ಕೆ ಪೂರಕ ಎಂದು ಸೂಸನ್ ಒಕಿನ್ ತನ್ನ ಕೃತಿಯಲ್ಲಿ ಚರ್ಚಿಸುವುದರ ಮೂಲಕವಾಗಿ ಜಾಗತೀಕರಣವನ್ನು ಸಮರ್ಥಿಸಿಕೊಳ್ಳುವುದು ವ್ಯಕ್ತವಾಗುತ್ತದೆ. ಜಾಗತೀಕರಣವನ್ನು 'ಲಿಂಗ ತಟಸ್ಥ' (Gender-Neutral)ವಾದ ಆರ್ಥಿಕ ನೀತಿ ಎಂದು ಪಶ್ಚಿಮದ ಆರ್ಥಿಕ ಸ್ತ್ರೀವಾದಿ ಚಿಂತಕರಾದ ಮಾರ್ಥಸಿ, ಮಿನ್ಸರ್ ಮತ್ತು ಪೊಲಾಚೆಕ್, ಕ್ಲಾರಾ ಹ್ಯಾನ್ಸಿ, ಬೆಟ್ಟ ರಿಚ್ಚರ್ಡ್ ಮೊದಲಾದವರು ವಿವರಿಸುತ್ತಾರೆ. ಆದರೆ 'ಲಿಂಗ ತಟಸ್ಥ'ವೆನ್ನುವ ಆದರ್ಶವೊಂದು ಸಾಕಾರಗೊಳ್ಳುವುದು ಮಹಿಳೆಯರ ಮತ್ತು ಪುರುಷರ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ

ಸನ್ನಿವೇಶಗಳು ಸಮಾನಗೊಂಡಾಗ ಮಾತ್ರವೇ ಆಗಿರುತ್ತದೆ. ಚಾರಿತ್ರಿಕವಾಗಿ ಸ್ತ್ರೀ-ಪುರುಷರ ನಡುವೆ ಅಗಾಧವಾದ ಅಸಮಾನತೆ ಕಾಲದ ಚಲನೆಯ ಜೊತೆ ನಿರಂತರವಾಗಿ ಮುಂದುವರಿದು ಕೊಂಡು ಬಂದಿದೆ. ಇದು ಸಮಕಾಲೀನ ಸಮಾಜಗಳಲ್ಲೂ ಎದ್ದು ತೋರುವ ಸಂಗತಿಯಾಗಿದೆ. ಯಾವುದೇ ದೇಶದ ಆರ್ಥಿಕ ಸಂಹಿತೆಯೊಳಗೆ ಪುರುಷ ಮತ್ತು ಮಹಿಳೆಯರು ಸಮಾನ ಮಟ್ಟದಲ್ಲಿ ಕಂಡುಬರುವುದಿಲ್ಲ. ಹೀಗಾಗಿ ಜಾಗತೀಕರಣದ ನೀತಿ 'ಲಿಂಗ ತಟಸ್ಥ' ಎನ್ನುವುದು ಸಮೂಹ ಮಾಧ್ಯಮಗಳು ಹಲವಾರು ಕಾರಣಗಳಿಂದಾಗಿ (ಮುಖ್ಯವಾಗಿ ಆರ್ಥಿಕ, ರಾಜಕೀಯ ಕಾರಣಗಳಿಂದಾಗಿ) ಬಿಂಬಿಸುವ ವಾಸ್ತವದ 'ಭ್ರಮೆಯ ರೂಪ'ವಾಗಿದೆ. ಇಂತಹ ಭ್ರಮೆಯ ಪ್ರತಿಮೆಗಳು ಬಂಡವಾಳಶಾಹಿ ಪುರುಷ ವ್ಯವಸ್ಥೆಗೆ ಪೂರಕವಾಗಿ ಪ್ರತಿಬಿಂಬಿತಗೊಳ್ಳುತ್ತಿ ರುವುದನ್ನು ಮಹಿಳಾ ಪರ, ಜನಹಿತ ಪರ ಎಂದು ಪರಿಭಾವಿಸುವುದೇ ಅಪಾಯದ ಬೆಳವಣಿಗೆ ಯಾಗಿದೆ. ಮಾತ್ರವಲ್ಲ ಮಹಿಳಾವಾದದ ಮುಂದಿರುವ ಮಹತ್ತ್ವದ ಸವಲಾಗಿದೆ. ಜಾಗತೀಕರಣವೆಂಬ ಅನಪೇಕ್ಷಿತ ಬೆಳವಣಿಗೆಯು ಕಳೆದ ಹತ್ತು-ಹದಿನೈದು ವರ್ಷಗಳಲ್ಲಿ ಉಂಟು ಮಾಡಿದ ಪ್ರತಿಕೂಲತೆಯ ಪರಿಣಾಮ ಊಹನಾತೀತವಾದದ್ದು. ಜಾಗತೀಕರಣ ಮತ್ತು ಮಹಿಳಾ ಅಸ್ತಿತ್ವದ ಪ್ರಶ್ನೆ ಎನ್ನುವ ಈ ಲೇಖನದಲ್ಲಿ ಜಾಗತೀಕರಣದ ಪ್ರಕ್ರಿಯೆಯು ಮಹಿಳೆಯರ ಜೀವನ ಕ್ರಮದಲ್ಲಿ ಉಂಟುಮಾಡಿದ ಪರಿಣಾಮಗಳನ್ನು ನಿಖರವಾಗಿ ಗುರುತಿಸಿ ವಿಶ್ಲೇಷಿಸುವ ಪ್ರಯತ್ನವನ್ನು ನಡೆಸಲಾಗಿದೆ.

### ಜಾಗತೀಕರಣ ಮತ್ತು ಮಹಿಳಾ ಆರ್ಥಿಕತೆಯ ಹಿತಾಸಕ್ತಿಗಳು

ಸಮಕಾಲೀನ ಸಂದರ್ಭದಲ್ಲಿ ಲೇಬರ್ ಮಾರ್ಕೆಟಿಂಗ್ ಎನ್ನುವುದು ಆಧುನಿಕ ಆರ್ಥಿಕತೆಯ ಪ್ರಮುಖ ಅಂಶವಾಗಿದೆ. ಲೇಬರ್ ಮಾರ್ಕೆಟಿಂಗ್ ವ್ಯವಸ್ಥೆ ಶ್ರಮದ ಮಾರಾಟ ಮತ್ತು ಖರೀದಿಗೆ ಸಂಬಂಧಪಟ್ಟದ್ದು. ಮಾತ್ರವಲ್ಲ ಇದರ ಮೂಲಕ ಕೂಲಿ ಮತ್ತು ಕಾರ್ಮಿಕರ ಉದ್ಯೋಗದ ಮಟ್ಟವನ್ನು ನಿಗದಿಗೊಳಿಸುವಂಥದ್ದು. ಅರ್ಥ ವ್ಯವಸ್ಥೆ ಯೊಂದರಲ್ಲಿ ಕಾರ್ಮಿಕರ ಪೂರೈಕೆಯನ್ನು ನಿರ್ಧರಿಸುವ ಅಂಶಗಳಲ್ಲಿ 'ಕಾರ್ಮಿಕರ ಲಿಂಗ' ಕೂಡ ಒಂದು. ಉದ್ಯೋಗದಲ್ಲಿನ ಲಿಂಗಾಧಾರ ವರ್ಗೀಕರಣವು ಪರಂಪರಾಗತವಾಗಿರು ವುದರಿಂದಲೇ ಸಮಾಜದಲ್ಲೂ ಪುರುಷ ಮತ್ತು ಮಹಿಳೆಯರು ಕೈಗೊಳ್ಳುವ ಉದ್ಯೋಗಗಳಲ್ಲಿ ಮೂಲಭೂತ ವ್ಯತ್ಯಾಸವಿದೆ. ಉದ್ಯೋಗಗಳಲ್ಲಿನ ಈ ವ್ಯತ್ಯಾಸವು ಸಹಜವಾಗಿ ಆದಾಯದ, ಗಳಿಕೆಯ ನೆಲೆಯ ಅಸಮಾನತೆಗೆ ಕಾರಣವಾಗಿದೆ. ಇಂಡಿಯಾದಂತಹ ದೇಶಗಳಲ್ಲಿ ಪುರುಷ ಮತ್ತು ಮಹಿಳಾ ಕಾರ್ಮಿಕರ ನಡುವೆ ನಿಗದಿಗೊಳಿಸಲಾಗುವ ಕೂಲಿ (ವೇತನ)ಯಲ್ಲಿ ಅಂತರವಿದೆ. ಲೇಬರ್ ಮಾರ್ಕೆಟಿಂಗ್ ವ್ಯವಸ್ಥೆಯಲ್ಲಿ ಮಹಿಳೆಯರು ಹೆಚ್ಚಾಗಿ ಶ್ರಮ ಪ್ರಧಾನವಾದ ಉದ್ಯೋಗಗಳಲ್ಲಿ ಕಂಡುಬಂದರೆ, ಪುರುಷರು ಬಂಡವಾಳ ಪ್ರಧಾನವಾದ ಹುದ್ದೆಗಳಲ್ಲಿ ನೇಮಕಗೊಳ್ಳುತ್ತಾರೆ. ಪುರುಷರಿಗೆ ವೃತ್ತಿ ಭದ್ರತೆ, ಅಧಿಕ ವೇತನ ಲಭ್ಯವಾದರೆ, ಮಹಿಳೆಯರು ಕಡಿಮೆ ವೃತ್ತಿ ಭದ್ರತೆಯಲ್ಲಿ ಅಲ್ಪ ಪ್ರಮಾಣದ ವೇತನಕ್ಕೆ ಸೀಮಿತಗೊಂಡು ದುಡಿಯುತ್ತಿರುವುದು ವ್ಯಕ್ತವಾಗುತ್ತದೆ. ಹೊಸ ಮಿಲೇನಿಯಂ ಶತಮಾನದಲ್ಲಿಯೂ ಕೂಡ

ಲೇಬರ್ ಮಾರ್ಕೆಟಿಂಗ್‌ನಲ್ಲಿ ಉತ್ತಮ ವೃತ್ತಿ ಭವಿಷ್ಯವಿರುವುದು ಪುರುಷರಿಗೆ ಮಾತ್ರವೇ ಆಗಿದೆ. ಮಹಿಳಾ ಕಾರ್ಮಿಕರಿಗೆ ಸಂಬಂಧಿಸಿದಂತೆ ಪುರುಷ ಪ್ರಧಾನ ಬಂಡವಾಳಶಾಹಿ ವ್ಯವಸ್ಥೆಯ ಅಸಮಾನ ಧೋರಣೆಗಳು ಹಲವು ನೆಲೆಗಳಲ್ಲಿ ಒಡೆದು ತೋರುವಂತಹದ್ದಾಗಿದೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

ಅ. ಸ್ತ್ರೀ-ಪುರುಷರ ನಡುವೆ ಏರ್ಪಟ್ಟಿರುವ ವೃತ್ತಿ ಪ್ರತ್ಯೇಕತೆ. (Occupational Segregation)

ಇ. ಮಹಿಳೆಯರನ್ನು ಏಕರೂಪತೆಯ ಹುದ್ದೆಗಳಲ್ಲಿ ಸ್ಥಿರಗೊಳಿಸಲಾಗಿರುವುದು.

ಉ. ಮಹಿಳಾ ಕಾರ್ಮಿಕರು ಬಡ್ತಿಯ ಅವಕಾಶದ, ಮೇಲ್ಮುಖವಾದ ಚಲನೆಯ ವೃತ್ತಿಗಳಿಂದ ವಂಚಿತರಾಗಿ ಒಂದೇ ವೃತ್ತಿಯಲ್ಲಿ ಸ್ಥಿರಗೊಂಡಿರುವುದು.

ಎ. ಮಹಿಳೆಯರು ಅಧಿಕ ದೈಹಿಕ ಶ್ರಮ ಮತ್ತು ಅಲ್ಪಕೂಲಿಯ ಕಾರ್ಮಿಕರಾಗಿ ಅಪಾರ ಸಂಖ್ಯೆಯಲ್ಲಿ ದುಡಿಯುತ್ತಿರುವುದು.

ಈ ಮುಖ್ಯ ಕಾರಣಗಳಿಂದಾಗಿ ಮಹಿಳಾ ಕಾರ್ಮಿಕರು ಅಸಂಘಟಿತ ಕ್ಷೇತ್ರಗಳಲ್ಲಿಯೇ ಅಪಾರವಾದ ಸಂಖ್ಯೆಯಲ್ಲಿ ಕೇಂದ್ರೀಕೃತಗೊಂಡಿದ್ದಾರೆ. (ಉದಾ : ಅಂಗಡಿ ಮಳಿಗೆಗಳಲ್ಲಿ ಸೇಲ್ಸ್‌ಗರ್ಲ್ಸ್‌ಗಳಾಗಿ ದುಡಿಯುತ್ತಿರುವ ದೇಶದ ಅಪಾರ ಸಂಖ್ಯೆಯ ಮಹಿಳಾ ಕಾರ್ಮಿಕರು.) ಮಾತ್ರವಲ್ಲದೆ, ಅಗತ್ಯವಿದ್ದಾಗ ನೇಮಕಗೊಳ್ಳುವ ಅಗತ್ಯವಲ್ಲದ ಸಂದರ್ಭಗಳಲ್ಲಿ ಹೊರ ದೂಡಬಹುದಾದ ಮೀಸಲು ಕಾರ್ಮಿಕ ಶಕ್ತಿಗಳಾಗಿ ಮಹಿಳೆಯರು ದುಡಿಯುತ್ತಿದ್ದಾರೆ. ಸಿಲ್ವಮನ್ ಮತ್ತು ಬಾಡ್ ಎನ್ನುವ ಅರ್ಥಶಾಸ್ತ್ರಜ್ಞರು ಮೀಸಲು ಮಹಿಳಾ ಕಾರ್ಮಿಕತೆಯನ್ನು ಮೂರು ನೆಲೆಗಳಲ್ಲಿ ಗುರುತಿಸಿದ್ದಾರೆ (೧೯೯೨).

೧. ತಾತ್ಕಾಲಿಕವಾಗಿ ನಿರುದ್ಯೋಗಿಗಳಾಗಿರುವ ಮಹಿಳಾ ಕಾರ್ಮಿಕರು. ಎಂದರೆ ಉದ್ಯೋಗದ ಅನ್ವೇಷಣೆಯಲ್ಲಿರುವ ಶಿಕ್ಷಿತ ಮಹಿಳೆಯರು.

೨. ಕೃಷಿಕ್ಷೇತ್ರದ ಬಂಡವಾಳಶಾಹೀಕರಣದಿಂದಾಗಿ ಉದ್ಯೋಗದಿಂದ ವಂಚಿತರಾದ ಮಹಿಳಾ ಕಾರ್ಮಿಕರು.

೩. ಅರೆ ಉದ್ಯೋಗಿಗಳಾಗಿರುವ ಆದರೆ ವರ್ಷದ ಹೆಚ್ಚು ಕಾಲದವರೆಗೆ ನಿರುದ್ಯೋಗಿಗಳಾಗಿರುವ ಮಹಿಳಾ ಕಾರ್ಮಿಕರು. (ಉದಾ: ಜೂಸ್ ಫ್ಯಾಕ್ಟರಿ, ಐಸ್‌ಕ್ರೀಮ್ ಫ್ಯಾಕ್ಟರಿ, ಹನಿ ಫ್ಯಾಕ್ಟರಿ ಇತ್ಯಾದಿಗಳಲ್ಲಿ ದುಡಿಯುವವರು.)

ಜಾಗತೀಕರಣದ ಸಂದರ್ಭದಲ್ಲಿ ಆದ ಮಹತ್ತ್ವದ ಪಲ್ಲಟವೆಂದರೆ ಲೇಬರ್ ಮಾರ್ಕೆಟಿಂಗ್‌ನಲ್ಲಿ ಅಪಾರ ಸಂಖ್ಯೆಯಲ್ಲಿ ದೇಶದ ಮಹಿಳಾ ಕಾರ್ಮಿಕ ಶಕ್ತಿಯ ಪಾಲುಗೊಳ್ಳುವಿಕೆಯಾಗಿದೆ. ಆದರೆ ಇದರಲ್ಲಿ ಕೂಡ ಮಹಿಳಾ ಕಾರ್ಮಿಕಳೊಬ್ಬಳ ಕೂಲಿಯು ಜೀವನಾಧಾರದ ಕನಿಷ್ಟ ಮಟ್ಟದಲ್ಲಿ ನಿರ್ಧರಿತಗೊಳ್ಳುತ್ತದೆ ಎನ್ನುವುದು ವಾಸ್ತವವಾಗಿದೆ. ಕಾರ್ಮಿಕ ಸಂಘಟನೆಗಳ ಸಹಾಯದಿಂದ ಪುರುಷ ಕಾರ್ಮಿಕರು ಗರಿಷ್ಠ ಕೂಲಿಯನ್ನು ಪಡೆದುಕೊಳ್ಳುವವರಾಗಿದ್ದಾರೆ ಎಂದು ಜಾಗತೀಕರಣದ ನಿಯೋ ಕ್ಲಾಸಿಕಲ್ ತತ್ವ ಹೇಳುತ್ತದೆ.

ಆದರೆ ಮಹಿಳಾ ಕಾರ್ಮಿಕರಿಗೆ ಸಂಬಂಧಿಸಿದಂತೆ ನಿಯೋ ಕ್ಲಾಸಿಕಲ್ ತತ್ವ ಭ್ರಮೆಯ ಪ್ರತಿಮೆಯಾಗಿದೆ. ಕನಿಷ್ಠ ಕೂಲಿಯ, ಪದೋನ್ನತಿಗೆ ಅವಕಾಶವಿಲ್ಲದ, ಉತ್ತಮ ವೃತ್ತಿ ಭದ್ರತೆ ಇಲ್ಲದ ಸ್ಥಗಿತ ವೃತ್ತಿ ಸ್ವರೂಪದ ಹುದ್ದೆಗಳಲ್ಲಿ ಇಂಡಿಯಾದ ಗರಿಷ್ಠ ಮಹಿಳಾ ಕಾರ್ಮಿಕರು ದುಡಿಯುತ್ತಿರುವುದು ವ್ಯಕ್ತವಾಗುವ ನೈಜ ಅಂಶವಾಗಿದೆ. ಇದು ಕಾರ್ಮಿಕ ಕ್ಷೇತ್ರದಲ್ಲಿ ಪುರುಷ ಮತ್ತು ಮಹಿಳೆಯರಲ್ಲಿ ಯಾವ ಸಂದರ್ಭಗಳಲ್ಲೂ ಪರಿಪೂರ್ಣ ಪೈಪೋಟಿ ಹುಟ್ಟಿಕೊಂಡಿರಲೇ ಇಲ್ಲ ಎಂಬುದನ್ನು ಸಾಬೀತು ಪಡಿಸುತ್ತದೆ.

**ಜಾಗತೀಕರಣ ಮತ್ತು ಮಹಿಳೆಯರ ರಾಜಕೀಯ ಸ್ವಾಯತ್ತತೆ**

ಸಮಾನತೆ, ನ್ಯಾಯ, ರಾಜಕೀಯ ಸ್ವಾಯತ್ತತೆಯ ನೆಲೆಯಿಂದ ಪರ್ಯಾಯ ರಾಜಕೀಯ ಪ್ರಜ್ಞೆಯನ್ನು ಹುಟ್ಟು ಹಾಕುವ ವಿದ್ಯಮಾನವಾಗಿ ಜಾಗತೀಕರಣ ಪ್ರತಿಬಿಂಬಿತಗೊಂಡಿದೆ. ಅಷ್ಟೇ ಅಲ್ಲದೆ ರಾಷ್ಟ್ರ ಪ್ರಭುತ್ವದ ಎಲ್ಲೆಗಳನ್ನು ಒರೆಸಿಹಾಕುವ ಜಾಗತಿಕ ಪ್ರಭುತ್ವವನ್ನು ಇದು ಸಾರುತ್ತದೆ. ಇಡೀ ಭೂಗೋಳವನ್ನು ಅಮೆರಿಕಾದ ಅಪಾರ ಹಣಶಕ್ತಿ ಜಾಗತಿಕ ಮಟ್ಟದಲ್ಲಿ ಸಮತಾವಾದಿ ವಿರೋಧಿ ನಿಲುವಾಗಿ ಅಥವಾ 'Anti-Communist Stance' ಆಗಿ ಕಟ್ಟುತ್ತಿದೆ. ಆಳುವ ವರ್ಗದವರು ತಮ್ಮ ಅನುಕೂಲಕ್ಕೆ ತಕ್ಕಂತೆ ಪ್ರಜಾಪ್ರಭುತ್ವವನ್ನು ಬಳಸಿಕೊಳ್ಳುತ್ತಿರುವ ಸನ್ನಿವೇಶದಲ್ಲಿ ರಾಜಕೀಯವಾಗಿ ಮಹಿಳಾ ಸಮಾನತೆಯು ರ್‍ಯಾಡಿಕಲ್ ಪ್ರಜಾಪ್ರಭುತ್ವ (Radical demorracy)ದ ಒಳಗೆ ಅರ್ಥ ಕಳೆದುಕೊಳ್ಳುತ್ತಿದೆ. ಜಾಗತೀಕರಣ ವೆಂಬ ಸಂದರ್ಭವು ಜಗತ್ತಿನ ರಾಷ್ಟ್ರಗಳನ್ನು ಮಾರುಕಟ್ಟೆಗಳನ್ನಾಗಿ ಅಥವಾ ಕಚ್ಚಾವಸ್ತುಗಳ ಪೂರೈಕೆದಾರರನ್ನಾಗಿ ಪರಿವರ್ತಿಸ ಬಯಸುವ ಬಂಡವಾಳಶಾಹಿ ಶಕ್ತಿ (ಅಮೆರಿಕಾದ ಪ್ರಜಾಪ್ರಭುತ್ವ)ಗಳ ಆಮಿಷಗಳನ್ನು ಪೂರೈಸುವ ರಾಜಕೀಯ ವ್ಯವಸ್ಥೆಯಾಗಿದೆ. ಇಂತಹ ಪರಿಸ್ಥಿತಿಯಲ್ಲಿ ದೇಶೀಯ ರಾಜಕೀಯ ನೆಲೆಯಲ್ಲಿ ಸಮಾನವಾದ ಸೂಕ್ತ ಪ್ರತಿನಿಧಿತ್ವ ಸಿಗದ, ಮೀಸಲಾತಿಯಿಂದಲೇ ಭವಿಷ್ಯ ರೂಪಿಸಿಕೊಳ್ಳಬೇಕಾದ ಅನಿವಾರ್ಯತೆ ಇರುವ ಮಹಿಳೆಯರು ಮುಂದಿನ ಶತಮಾನದಲ್ಲಿಯೇ ಆದರೂ ಪುರುಷನಿಗೆ ಸಮಾನವಾಗಿ ರಾಜಕೀಯದ ಚುಕ್ಕಾಣಿ ಯನ್ನು ಹಿಡಿಯುವುದು ಅಸಾಧ್ಯವೆಂಬಂತೆ ತೋರುತ್ತದೆ. ಸಮಕಾಲೀನ ಸಂದರ್ಭದಲ್ಲಿ ಪುರುಷರ ಪ್ರಭುತ್ವ ಒತ್ತಾಯದಿಂದ, ಬಲ ಪ್ರಯೋಗದಿಂದ ಮಹಿಳೆಯರಲ್ಲಿ ಅಭಿಪ್ರಾಯ ಗಳನ್ನು ಹುಟ್ಟು ಹಾಕುವ ಬದಲಾಗಿ ತನ್ನ ಅಗಾಧವಾದ ಪ್ರಚಾರ ವ್ಯವಸ್ಥೆಯನ್ನು ಬಳಸಿಕೊಂಡು ತನ್ನ ಸ್ವಂತದ ಅಭಿಪ್ರಾಯವನ್ನು ಮಹಿಳೆಯರ ಅಭಿಪ್ರಾಯ ಕೂಡ ಎಂಬುದಾಗಿ ಒಪ್ಪಿಸುವಂತೆ ಮಾಡುತ್ತದೆ. ಇದು ನೋಮ್ ಚಾಮ್‌ಸ್ಕಿ ಗುರುತಿಸುವಂತೆ 'ಜಾಗತೀಕರಣವೆಂಬುದು ಒಪ್ಪಿಗೆಯನ್ನು ಉತ್ಪಾದಿಸುವ ವ್ಯವಸ್ಥೆ'ಯಾಗಿದೆ. ಇದರ ಒಳಗೆ ಮಹಿಳೆಯರ, ಅಲ್ಪಸಂಖ್ಯಾತರ, ಅಂಚಿಗೆ ಸರಿಸಲಾದವರ ಹೀಗೆ ಯಾವುದೇ ರೀತಿಯ ದುರ್ಬಲರ ಅಭಿಪ್ರಾಯಗಳಿರಲಿ ತರ್ಕದ ಪರೀಕ್ಷೆಗೆ ಅಥವಾ ವಾಸ್ತವದ ಒರೆಗಲ್ಲಿನ ಒಳಪಡದೆ ಹಿಂಗಿ ಹೋಗುತ್ತವೆ. ಮಾತ್ರವಲ್ಲ ಪ್ರಭುತ್ವದ ರಾಜಕಾರಣವನ್ನು ಪ್ರಶ್ನೆ ಮಾಡುವ ಅವಶ್ಯಕತೆಯೂ ಇಲ್ಲದಂಥ ಕಾಮನ್‌ಸೆನ್ಸ್ ಅಭಿಪ್ರಾಯಗಳಾಗಿ ಬಿಡುತ್ತವೆ. ಇಂಡಿಯಾದ

ಪ್ರಭುತ್ವ IMF, W.B, W.T.O ಇವುಗಳು ರೂಪಿಸಿದ ಒಪ್ಪಂದಗಳಿಂದಾಗಿ ಮುಕ್ತಮಾರುಕಟ್ಟೆ, ಖಾಸಗೀಕರಣ ಇತ್ಯಾದಿಗಳನ್ನು ಅನಿವಾರ್ಯವಾಗಿಸಿವೆ. ಇದರೊಳಗೆ ಸಿಲುಕಿಕೊಂಡಿರುವ ಸಮಗ್ರ ಮಹಿಳೆಯರ ಬದುಕು ಅಖೈರಾಗಿ ಋಣಾತ್ಮಕ ಪರಿಣಾಮಗಳನ್ನಷ್ಟೇ ಅನುಭವಿಸ ಬೇಕಾಗಿದೆ. (ಇದರ ಬಗ್ಗೆ ರಾಬ್ರಿದೇವಿ, ಮಾಯಾವತಿ, ಜಯಲಲಿತಾ, ಸುಷ್ಮಾಸ್ವರಾಜ್, ಸೋನಿಯಾಗಾಂಧಿ ಇತ್ಯಾದಿ ಹಲವು ಪಕ್ಷದ ಮಹಿಳಾ ನಾಯಕರು ಪ್ರಶ್ನೆ ಮಾಡುವ ಅವಶ್ಯಕತೆಯೂ ಇಲ್ಲದಂಥ ಕಾಮನ್‌ಸೆನ್ಸ್ ಅಭಿಪ್ರಾಯಗಳಾಗಿ ಸ್ವೀಕರಿಸಿಬಿಟ್ಟಿದ್ದಾರೆ.) ಪ್ರಜಾಪ್ರಭುತ್ವದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ ತನ್ನದಾದ ಏನನ್ನೂ ಸಾಧಿಸಿಕೊಳ್ಳಲು ಸಾಧ್ಯವಾಗದ ಮಹಿಳೆಯರಿಗೆ ಜಾಗತಿಕ ಸರಕಾರ, ಜಾಗತಿಕ ಆಳ್ವಿಕೆಯಲ್ಲಿ ಸಿಕ್ಕಿದ್ದರೆ ಈಗಾಗಲೇ ಶತಮಾನಗಳಿಂದ ದಕ್ಕಿಸಿಕೊಂಡ ಶೋಷಣೆಯ ಮೇಲೆ ಮತ್ತೊಂದಷ್ಟು ಶೋಷಣೆಯೇ ಸಿಕ್ಕಿದೆ.

ಜಾಗತೀಕರಣದ ರಾಜಕೀಯ ಅವಕಾಶದ ಮುಕ್ತನೀತಿಯು ಪುರುಷ ಮತ್ತು ಮಹಿಳೆಯರಲ್ಲಿ ತೀವ್ರವಾದ ಪೈಪೋಟಿಗೆ ಕಾರಣವಾಗಿದೆ ಎನ್ನುವ ಅಭಿಪ್ರಾಯ ಪ್ರಚಲಿತದಲ್ಲಿ ಇದೆ. ಆದರೆ ಇಂಡಿಯಾದ ಹೆಚ್ಚು ಮಹಿಳೆಯರು ಪ್ರಾಥಮಿಕ ಶಿಕ್ಷಣದಿಂದಲೂ ವಂಚಿತರಾದವರು. ಇವರಿಗೆ ಸಿಕ್ಕ ರಾಜಕೀಯ ಅವಕಾಶ, ಮಧ್ಯಮವರ್ಗದ ಶಿಕ್ಷಿತ ಮಹಿಳೆಯರ ರಾಜಕೀಯ ಪ್ರತಿನಿಧೀಕರಣ, ಮೇಲ್ವರ್ಗದ ಮಹಿಳೆಯರ ರಾಜಕೀಯ ಅಧಿಕಾರವೆಲ್ಲ ಸಂಪೂರ್ಣವಾಗಿ ಪುರುಷ ನಿರೂಪಿತವೇ ಆಗಿದೆ. ಹೆಚ್ಚಿನ ಸಂಖ್ಯೆಯಲ್ಲಿ ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ, ಮಂಡಲ ಪಂಚಾಯಿತಗಳಲ್ಲಿ ಕಂಡುಬರುವ ಮಹಿಳೆಯರು ನಡೆಸುವ ರಾಜಕಾರಣವೇನಿದೆ ಅದು ಮಹಿಳೆಯರಿಂದ ಪುರುಷರಿಗಾಗಿ ನಡೆಸುವ ಪುರುಷರ ರಾಜಕಾರಣವಾಗಿದೆ. ಇಂಥ ವಾಸ್ತವವನ್ನು ಮಹಿಳಾ ಪ್ರತಿನಿಧಿಗಳೆಲ್ಲರೂ ಮಹಿಳೆಯರಿಗಾಗಿಯೇ ಎನ್ನುವಂತೆ ಮಾಧ್ಯಮಗಳು ಬಿಂಬಿಸುತ್ತಿವೆ. ವರ್ತಮಾನದ ರಾಜಕೀಯ ಸಂದರ್ಭ ನಿಜವಾಗಿಯೂ ಮಹಿಳಾ ಪ್ರಗತಿಪರ ಆಂದೋಲನಗಳ ಮುಂದಿರುವ ಸಂಕೀರ್ಣ ಸನ್ನಿವೇಶವಾಗಿದೆ. ಮಾತ್ರವಲ್ಲ ಇದನ್ನು ಗ್ರಹಿಸುವ ಬಗೆಯಲ್ಲಿಯೇ ದಿಕ್ಕು ತಪ್ಪುವ ಸ್ಥಿತಿ ಕಂಡುಬರುತ್ತದೆ. ಜಾಗತೀಕರಣವೆನ್ನುವುದು ಎಲ್ಲರನ್ನು ಒಳಗೊಂಡ ಸಿದ್ಧಾಂತವಲ್ಲ. ಇದು ಕೆಲವರಿಗಾಗಿ ಹೆಚ್ಚಿನವರನ್ನು ಹೊರಗಿಡುವ ಸಿದ್ಧಾಂತವಾಗಿದೆ. (Theory of Exelusion) ತೋರಿಕೆಯ ಮಟ್ಟಿಗೆ ಈ ಮಾದರಿ 'ಸಮ ಸುಖಿ ರಾಜ್ಯ'ದ ಆದರ್ಶವಿಟ್ಟುಕೊಂಡಿದೆ. ಆದರೆ ತಳರಚನೆಯ ಸಮಷ್ಟಿಹಿತದ ಸಾಮಾಜಿಕ ತಾತ್ವಿಕತೆಯೇ ಸೊರಗಿದೆ.

### ಜಾಗತೀಕರಣ ಮತ್ತು ಮಹಿಳೆಯರ ಕೌಟುಂಬಿಕ ಸ್ವರೂಪ

ಪುರುಷಪ್ರಧಾನ ಬಂಡವಾಳಶಾಹಿ ವ್ಯವಸ್ಥೆ ಮತ್ತು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯೇ ಮಹಿಳೆಯರ ಹಿಂದುಳಿದ ಜೀವನಕ್ರಮಕ್ಕೆ, ಅಲ್ಪಪ್ರಮಾಣದ ಗಳಿಕೆಗೆ ಕಾರಣವೆಂದು ಮಾರ್ಕ್ಸ್‌ವಾದಿ ಅರ್ಥಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಪಿತೃಪ್ರಧಾನ ಕುಟುಂಬದ ವ್ಯವಸ್ಥೆಯಲ್ಲಿ

ಮಹಿಳೆಯರಿಗೆ ಇರುವ ಸ್ಥಾನ ದ್ವಿತೀಯ ದರ್ಜೆಯದ್ದು. ಪುರುಷರು ಮಾತ್ರ ಪ್ರಮುಖ ಆದಾಯ ಗಳಿಕೆದಾರನೆಂದೂ ಮತ್ತು ಮಹಿಳೆಯರು ಕುಟುಂಬದ ನಿರ್ವಹಣೆಗೆ ಸಂಪೂರ್ಣ ಜವಾಬ್ದಾರರೆಂದು ಪಿತೃಸತ್ತೆ ಪರಿಗಣಿಸುತ್ತದೆ. ಇಂತಹ ಕುಟುಂಬ ಸಂರಚನೆಯು ಮಹಿಳೆಯರು ಕಾರ್ಮಿಕರಾಗುವುದನ್ನು ನಿರ್ದಿಷ್ಟ ಕಾರಣಗಳಿಂದ ಮಾತ್ರ ಒಪ್ಪಿಕೊಳ್ಳುತ್ತದೆ.

೧. ಕುಟುಂಬದಲ್ಲಿ ಗಳಿಸುವ ಪುರುಷ ರೋಗಿಷ್ಠ ಅಥವಾ ಮರಣಕ್ಕೆ ತುತ್ತಾದ ಸಂದರ್ಭ.

೨. ಕುಟುಂಬದ ಒಟ್ಟು ಅಗತ್ಯಗಳನ್ನು ಪೂರೈಸಲು ಪುರುಷನಿಗೆ ಅಸಾಧ್ಯವಾಗುವ ಸನ್ನಿವೇಶ.

೩. ಕುಟುಂಬದಲ್ಲಿ ಪುರುಷನು ತನ್ನ ಆದಾಯವನ್ನು ಹಂಚಿಕೊಳ್ಳಲು ಸಿದ್ಧನಿಲ್ಲದಿರುವುದು. (ಮಧ್ಯಪಾನ, ದುಶ್ಚಟ, ಸ್ವಾರ್ಥಗಳ ಕಾರಣಗಳಿಂದ.) ಇಂತಹ ಕುಟುಂಬಗಳ ಮಹಿಳೆಯರ ಮತ್ತು ಮಕ್ಕಳ ಜೀವನ ಮಟ್ಟವು ಅತ್ಯಂತ ತಳಮಟ್ಟ ದಲ್ಲಿರುತ್ತದೆ. ಅಲ್ಲದೆ ಮಹಿಳೆಯರ ಕಾರ್ಮಿಕತೆಗೆ ಪ್ರೋತ್ಸಾಹ ದೊರಕುತ್ತದೆ.

ಪಿತೃಪ್ರಧಾನ ವ್ಯವಸ್ಥೆಯು ಮಹಿಳೆಯರನ್ನು ನಿರಂತರವಾಗಿ ಪುರುಷರ ಅವಲಂಬಿಯಾಗಿಯೇ ಇರಿಸುವ ಕಾರಣದಿಂದಾಗಿ ಹೆಣ್ಣು ಮತ್ತು ಗಂಡು ಮಕ್ಕಳಿಗೆ ನೀಡುವ ಶಿಕ್ಷಣದಲ್ಲಿಯೇ ಮೂಲಭೂತ ವ್ಯತ್ಯಾಸವನ್ನು ಕುಟುಂಬ ಮಾಡುತ್ತದೆ. ಹೆಚ್ಚಿನ ಕುಟುಂಬ ಗಳಲ್ಲಿ ಹೆಣ್ಣುಮಕ್ಕಳಿಗೆ ವೃತ್ತಿಪರ ಶಿಕ್ಷಣ, ವೃತ್ತಿ ಕೌಶಲ ಶಿಕ್ಷಣವನ್ನು ನೀಡುವುದರ ಬಗ್ಗೆ ಸಹಮತವಿರುವುದಿಲ್ಲ. ಮಹಿಳೆಯರ ಶಿಕ್ಷಣ ಮತ್ತು ತರಬೇತಿಗೆ ಬಂಡವಾಳ ಹೂಡಲು ಯಾವುದೇ ಪ್ರೇರಣೆಗಳಿಲ್ಲ. ಜಾಗತೀಕರಣದ ನಿಯೋ-ಕ್ಲಾಸಿಕಲ್ ತತ್ವ ನಿರೂಪಕರ ಪ್ರಕಾರ ಮಹಿಳೆಯರು ಪುರುಷರಿಗಿಂತ ಕಡಿಮೆ ದುಡಿಯುತ್ತಾರೆ. ಕಾರಣವೇನೆಂದರೆ ಮಹಿಳೆಯರಲ್ಲಿ ಸೂಕ್ತ ಶಿಕ್ಷಣ ತರಬೇತಿ ಹಾಗೂ ಉದ್ಯೋಗ ಅನುಭವ ಎಲ್ಲವೂ ಕಡಿಮೆ ಇರುವುದು. ಇಂತಹ ಸ್ಥಿತಿಗೆ ಕುಟುಂಬದಲ್ಲಿ ಹೆಣ್ಣು ಮಕ್ಕಳ ಶಿಕ್ಷಣ ಮತ್ತು ಉದ್ಯೋಗಕ್ಕೆ ಸಂಬಂಧಿಸಿದ ಪ್ರತಿಗಾಮಿ ಧೋರಣೆಯೇ ಕಾರಣವಾಗಿದೆ. ಇದರಿಂದಾಗಿ ಹೆಚ್ಚಿನ ಸಂಖ್ಯೆಯ ಮಹಿಳಾ ಕಾರ್ಮಿಕರು ವೃತ್ತಿ ಭವಿಷ್ಯವಿಲ್ಲದೆ ನಲುಗಬೇಕಾಗುತ್ತದೆ. ಕುಟುಂಬ ಹಾಗೂ ಲೇಬರ್ ಮಾರ್ಕೆಟಿಂಗ್ ವ್ಯವಸ್ಥೆಯಲ್ಲಿ ಮಹಿಳೆಯರ ಅಧೀನ ಸ್ಥಿತಿಯು ಪರಸ್ಪರ ಅಂತರ್‌ಸಂಬಂಧಿ ಅಂಶವಾಗಿ ಪ್ರಕಟಗೊಳ್ಳುತ್ತದೆ. ಮಹಿಳಾ ಕಾರ್ಮಿಕರು ಉತ್ಪಾದನೆ ಮತ್ತು ಪ್ರಜನನ ಕಾರ್ಯ ಎರಡರಲ್ಲೂ ಪಾಲ್ಗೊಳ್ಳಬೇಕು ಎನ್ನುವುದನ್ನು ಪುರುಷ ಪ್ರಧಾನ ಕುಟುಂಬವಾಗಲಿ, ಉದ್ಯಮವಾಗಲಿ ಗಂಭೀರವಾಗಿ ಪರಿಗಣಿಸಿಯೇ ಇಲ್ಲ. ಮಹಿಳೆಯರಿಗೆ ಕೌಟುಂಬಿಕ ಜವಾಬ್ದಾರಿಗಳು ಹೆಚ್ಚಾದಂತೆ ಅವರಿಗೆ ಉದ್ಯೋಗದಲ್ಲಿ ಮುಂದುವರಿಯುವ ಭದ್ರತೆಯನ್ನು ಕುಟುಂಬವಾಗಲಿ, ಉದ್ಯಮಪತಿಗಳಾಗಲಿ ನೀಡುವುದಿಲ್ಲ. ಬದಲಾಗಿ ಉದ್ಯೋಗವನ್ನು ತೊರೆಯುವಂಥ ನಿರೀಕ್ಷೆಗಳನ್ನು, ಒತ್ತಡಗಳನ್ನು ಮಹಿಳೆಯರ ಮೇಲೆ ಹೇರಲಾಗುತ್ತದೆ. ಗೃಹ ಉದ್ಯಮ, ಸಣ್ಣ ಕೈಗಾರಿಕೆ ಎನಿಸುವ ಊದುಬತ್ತಿ ತಯಾರಿಕೆ, ಅಣಬೆಕೃಷಿ, ಗಾರ್ಮೆಂಟ್ ಉದ್ಯಮ (ಟೈಲರಿಂಗ್), ಬಿಸ್ಕೆಟ್ ಕಾರ್ಖಾನೆ, ಗೇರು ಬೀಜ ಕಾರ್ಖಾನೆ, ಹೋಂ ಫುಡ್

ಇಂಡಸ್ಟ್ರೀಯಲ್ಲಿ ದುಡಿಯುತ್ತಿರುವ ಬಹುಸಂಖ್ಯಾತ ಮಹಿಳಾ ಕಾರ್ಮಿಕರಿಗೆ ವೃತ್ತಿ ಭವಿಷ್ಯವಿಲ್ಲ. ಅವರ ವರಮಾನಗಳಿಂದಲೇ ಕುಟುಂಬಗಳು ಸಾಗುತ್ತಿದ್ದರೂ ಸಮಾಜದಲ್ಲಿ ಅವರ ಉದ್ಯೋಗಗಳಿಗೆ ವಿಶೇಷ ಗೌರವ ಸಿಗುತ್ತಿಲ್ಲ. ಕುಟುಂಬವು ಕೂಡ ಮಹತ್ವದ ಪ್ರೋತ್ಸಾಹ ನೀಡುವುದಿಲ್ಲ. ಶಿಕ್ಷಕಿ, ಟೈಪಿಸ್ಟ್, ಸ್ವಾಗತಕಾರಿಣಿ, ಗುಮಾಸ್ತೆ, ನರ್ಸ್, ಪ್ರಯೋಗಾಲಯ ಸಹಾಯಕಿ, ದೂರವಾಣಿ ಆಪರೇಟರ್ ಮೊದಲಾದ ಮಧ್ಯಮ ದರ್ಜೆಯ ಹುದ್ದೆಗಳಲ್ಲಿ ದುಡಿಯುತ್ತಿರುವ ಸುಶಿಕ್ಷಿತ ಮಹಿಳೆಯರ ಕೌಟುಂಬಿಕ ಹಾಗೂ ಉದ್ಯೋಗದ ಸ್ಥಿತಿಗತಿಗಳಲ್ಲಿ ಗಮನಾರ್ಹ ಬೆಳವಣಿಗೆಯನ್ನು ಗುರುತಿಸುವುದು ಸಾಧ್ಯವಾಗುವುದಿಲ್ಲ. ಖಾಸಗೀ ಕ್ಷೇತ್ರಗಳಲ್ಲಿ, ಕಂಪ್ಯೂಟರ್ ಸಾಫ್ಟ್‌ವೇರ್ ಕ್ಷೇತ್ರಗಳಲ್ಲಿ ಉನ್ನತ ಹುದ್ದೆಯಲ್ಲಿರುವ ಮಹಿಳೆಯರಿಗೆ ಸಹ ಭದ್ರತೆಯ ನೆಲೆಯಿಂದ ವೃತ್ತಿ ಭವಿಷ್ಯವನ್ನು ಊಹಿಸುವುದು ಅಸಾಧ್ಯವಾಗಿರುವ ಸಂದರ್ಭವಿದಾಗಿದೆ.

ಜಾಗತೀಕರಣದ ಶಕ್ತಿಗಳು 'ಜಗತ್ತೇಹಳ್ಳಿ'ಯಾಗಿ ಮಾರ್ಪಾಡುಗೊಳ್ಳುತ್ತಿದೆ ಎಂದು ಪರಿಭಾವಿಸುವ ಕಲ್ಪನೆಯ ಒಳಗೆ ನಿಜವಾದ ಹಳ್ಳಿಗಳು ಗೈರು ಹಾಜರಾಗಿದೆ. ಹಳ್ಳಿಗಳ ಬಡರೈತರ ಕುಟುಂಬಗಳ ಮಹಿಳೆಯರ ಸ್ಥಿತಿ ಅತೀ ದಾರುಣವಾಗಿದೆ. ಕೃಷಿ ಕ್ಷೇತ್ರದಲ್ಲಿ ಬಂಡವಾಳಶಾಹಿತ್ವದ ಪ್ರವೇಶದಿಂದಾಗಿ ಕೃಷಿ ಮತ್ತು ಹೈನುಗಾರಿಕೆಯನ್ನೆ ಆಶ್ರಯಿಸಿದ ಕುಟುಂಬಗಳ ಒಳಗಿರುವ ಬಡತನ, ಪುರುಷರ ಸಾಲ, ದಿವಾಳಿತನ, ಅವರ ಆತ್ಮಹತ್ಯೆ ಇಂಥವುಗಳಿಂದ ಮಕ್ಕಳನ್ನು ಸಾಕುವ ಜವಾಬ್ದಾರಿಗಳಿಂದ ಹಳ್ಳಿಯ ಬಡರೈತ ಹೆಣ್ಣುಮಕ್ಕಳು ತತ್ತರಿಸಿ ಹೋಗಿದ್ದಾರೆ. ಕುಟುಂಬದ ಒಳಗೆ ಮಹಿಳೆಯರಿಗೆ ಸಿಗಬೇಕಾದ ಭದ್ರತೆ ಹೇಳ ಹೆಸರಿಲ್ಲದೆ ಮಾಯವಾಗಿರುವ ಸ್ಥಿತಿ ಇದಾಗಿದೆ. ಹೀಗಾಗಿ ಜಾಗತೀಕರಣ ಇಂಡಿಯಾದ ಸ್ವಾವಲಂಬೀ ಅರ್ಥವ್ಯವಸ್ಥೆಯನ್ನೇ ಸಿಡಿಸಿ ಛಿದ್ರಗೊಳಿಸಿವೆ. ಕೌಟುಂಬಿಕವಾಗಿ ಮಹಿಳೆಯರಿಗೆ ಈಗ 'ವರ್ತಮಾನ'ದ ಬದುಕೇ ಇಲ್ಲವಾಗಿ ಬಿಟ್ಟಿದೆ. ಜಾಗತೀಕರಣದ ಪ್ರಕ್ರಿಯೆಯು ಪಲ್ಲಟಗೊಳಿಸಿದ ಸಮಕಾಲೀನ ಬದುಕಿನಲ್ಲಿ ಮಹಿಳೆಯರ ಕೈಯಲ್ಲಿ ವರ್ತಮಾನ ಮತ್ತು ಭವಿಷ್ಯ ಎರಡೂ ಉಳಿದಿಲ್ಲ. ಕೌಟುಂಬಿಕವಾಗಿ, ಸಾಮಾಜಿಕವಾಗಿ ಅಭಿವ್ಯಕ್ತಗೊಳ್ಳುತ್ತಿರುವ ಗಂಡು-ಹೆಣ್ಣು ಎನ್ನುವ ಭಿನ್ನತೆಯಿಂದಾಗಿ ಒಂದು ಅಂಶ ಸ್ಪಷ್ಟವಾಗುತ್ತದೆ. ಎಂದರೆ, ಎಲ್ಲಿಯವರೆಗೆ ನಾವು ನಮ್ಮ ಮೂಲಭೂತ ಅಸಮತೋಲನಗಳನ್ನು ಸರಿ ಮಾಡುವುದರ ಕಡೆಗೆ ಗಮನಹರಿಸುವುದಿಲ್ಲವೋ, ಅದರಲ್ಲಿ ಯಶಸ್ವಿಯಾಗುವುದಿಲ್ಲವೋ, ಅಲ್ಲಿಯವರೆಗೆ ಜಾಗತಿಕ ಮಟ್ಟದಲ್ಲಿ ನಡೆಯುವ ಪ್ರತಿಯೊಂದು ವಿದ್ಯಮಾನ ಕೂಡ ನಮ್ಮಲ್ಲಿ ಆಂತರಿಕ ಸಮಸ್ಯೆಗಳನ್ನು ದೊಡ್ಡದಾಗಿ ಬಿಡಿಸುತ್ತಾ, ಹರಡುತ್ತಾ ಹೋಗುವುದು ಖಂಡಿತವಾಗಿದೆ. ಕುಟುಂಬದ ಸ್ವರೂಪವೇ ಆಗಿರಲಿ, ಉದ್ಯೋಗದ ಕ್ಷೇತ್ರವೇ ಇರಲಿ ಇದರಲ್ಲಿ ವ್ಯಕ್ತವಾಗುವ ಲಿಂಗಾಧಾರಿತ ಆಂತರಿಕ ವ್ಯತ್ಯಾಸಗಳು ಆಯಾ ದೇಶಗಳ ಒಂದು ಆಂತರಿಕ ಸಂದಿಗ್ಧತೆಯೆ ಆಗಿದೆ. ಈ ರೀತಿಯ ಆಂತರಿಕ ವ್ಯತ್ಯಾಸಗಳು ಮತ್ತು ಸಮಸ್ಯೆಗಳು ಎಷ್ಟರಮಟ್ಟಿಗೆ ಉಳಿದುಕೊಂಡಿವೆ ಅಥವಾ ಪರಿಹಾರವಾಗಿವೆ ಎನ್ನುವುದರ ಮೇಲೆ ಯಾವ ದೇಶದ ಮಹಿಳೆಯರ ಸ್ಥಿತಿಗತಿ ಯಾವ ಬಗೆಯದ್ದು ಎನ್ನುವುದು ನಿರ್ಧಾರವಾಗುತ್ತದೆ.

## ಜಾಗತೀಕರಣ ಮತ್ತು ತಥಾಕಥಿತ ಸಾಂಸ್ಕೃತಿಕ ದ್ವಂದ್ವ

ಇಂಡಿಯಾದ ವರ್ತಮಾನ ಹಿಂದುತ್ವವಾದ ಪ್ರತಿಪಾದಿಸುವ 'ಸ್ವದೇಶಿ' ಸ್ತ್ರೀ ಪ್ರತಿಮೆ (ತಲೆಯ ಮಧ್ಯಭಾಗದ ತುಂಬ ಸಿಂಧೂರ, ಕೈತುಂಬ ಬಳೆ, ತುಂಬು ಕೈಯ ರವಿಕೆ, ತಲೆಯ ಮೇಲೆ ಸೆರಗು.) ಯನ್ನು ಸಾಂಸ್ಕೃತಿಕ ಅಸ್ತ್ರವಾಗಿ ಬಳಸಿಕೊಳ್ಳುತ್ತಿದೆ. ಜೀನ್ಸ್ ಧರಿಸಿ, ಪೆಪ್ಸಿ ಕುಡಿಯುವ ಪಾಶ್ಚಿಮಾತ್ಯ ಪ್ರತಿಮೆಗಳನ್ನು ವಿರೋಧಿಸುವ ಹಿನ್ನೆಲೆಯಿಂದಲೆ ಮಹಿಳೆಯ ಈ 'ಸ್ವದೇಶಿ' ಪ್ರತಿಮೆ ಅನಾವರಣಗೊಂಡಿದೆ. ೧೯೯೭ರಲ್ಲಿ ಸೌಂದರ್ಯ ಸ್ಪರ್ಧೆಯ ಬಗ್ಗೆ ಮಹಿಳಾ ಪರ ಸಂಘಟನೆಗಳಲ್ಲಿ ವಿರೋಧಿಸುತ್ತಿದ್ದ ಸಂದರ್ಭದಲ್ಲಿ ಫೆಮಿನಾ ಪತ್ರಿಕೆಯೂ ತರ್ಕಬದ್ಧವಾಗಿ ಮಿಸ್ ಇಂಡಿಯಾ ಸೌಂದರ್ಯ ಸ್ಪರ್ಧೆಯನ್ನು ಸಮರ್ಥಿಸಿಕೊಂಡಿತು. ಮಿಸ್ ಇಂಡಿಯಾ ಸ್ಪರ್ಧೆಯನ್ನು ವಿರೋಧಿಸುವವರು ಭಾರತೀಯ ಸಂಸ್ಕೃತಿಯ ಸಿದ್ಧ ಪ್ರತಿಮೆಗಳನ್ನು ಎದುರಿಗಿಟ್ಟು ಹೋರಾಟಕ್ಕೆ ಹೊರಟವರಾಗಿದ್ದಾರೆ. ಆದರೆ ವಾಸ್ತವದಲ್ಲಿ ಅವರು ಬಿಡುಗಡೆಯನ್ನು ಬಯಸುವ ಭಾರತೀಯ ಮಹಿಳೆಯರ ಸಾರ್ವಜನಿಕ ಬದುಕನ್ನು ಸಹಿಸಿಕೊಳ್ಳದ ಪ್ರತಿಗಾಮಿಗಳೆಂದು ಫೆಮಿನಾ ಪತ್ರಿಕೆ ಹೇಳಿತು. ಫೆಮಿನಾ ಪತ್ರಿಕೆಯು ಮಿಸ್ ಇಂಡಿಯಾ ಸ್ಪರ್ಧೆಯನ್ನು ಸಮರ್ಥಿಸಿಕೊಂಡ ರೀತಿ ಮತ್ತು ಹಿಂದುತ್ವವಾದಿಗಳು ಹೇಳುತ್ತಿರುವ 'ಸಂಸ್ಕೃತಿಯ ದರ್ಪಣ ಬಿಂಬ' (ಸ್ತ್ರೀಯ) ಇವೆರಡರ ನಡುವೆ ಹೆಚ್ಚು ವ್ಯತ್ಯಾಸವಿಲ್ಲ. ಹಿಂದುತ್ವವಾದ ಪ್ರತಿಪಾದಿಸುತ್ತಿರುವ ಭಾರತೀಯ ನಾರಿಯ ಪ್ರತಿಮೆ ಮತ್ತು ಫೆಮಿನಾ ಪತ್ರಿಕೆಯಂಥ ಧೋರಣೆಗಳು ಪ್ರತಿಬಿಂಬಿಸುವ ಆಧುನಿಕ ಪ್ರತಿಮೆಗಳೆರಡೂ ಮಹಿಳೆಯರ ನೆಲೆಯಿಂದ ಸಂಸ್ಕೃತಿಯನ್ನು 'ಸೌಂದರ್ಯ ಸಾಧನ'ಗಳಾಗಿ ಬಿಂಬಿಸುವಂಥವು. ಇಂತಹ ಕಾಸ್ಮೆಟಿಕ್ ಐಡೆಂಟಿಟಿಯ ಮಹಿಳೆಯರನ್ನು ದೇಶಿ, ವಿದೇಶಿಯಾಗಿ (ಸಂಪ್ರದಾಯ, ಆಧುನಿಕತೆ) ಪರಿಗಣಿಸುತ್ತಿದೆ. ಇದರಿಂದಾಗಿ ಮಹಿಳೆಯರು ಗಂಭೀರವಾಗಿ ತುತ್ತಾಗಿರುವ, ಮಾಧ್ಯಮಗಳು ಅವಿರತವಾಗಿ ಹರಡುತ್ತಿರುವ 'ಕೊಳ್ಳುಬಾಕ'ತನದ ಸಾಂಸ್ಕೃತಿಕ ಆಕ್ರಮಣ ಶೀಲತೆ ಅರಿವಿಗೆ ಬಾರದೆ ಹೋಗುವ, ಬಂದರೂ ಅದನ್ನು ಗಂಭೀರವಾಗಿ ಪರಿಗಣಿಸದಿರುವ ಅಪಾಯ ವ್ಯಕ್ತವಾಗುತ್ತಿದೆ.

ಸಂಸ್ಕೃತಿಯೆಂಬುದು ಮೂಲತಃ ಬಹುರೂಪಿಯಾಗಿರುವಂಥದ್ದು. ನಿರ್ದಿಷ್ಟ ಜನಾಂಗದ ಭಾಷೆ, ಚರಿತ್ರೆ, ಜ್ಞಾನ, ಜೀವನ ದೃಷ್ಟಿ ಇವೆಲ್ಲವು ಒಟ್ಟಾಗಿ ಸಂಸ್ಕೃತಿಯ ರೂಪದಲ್ಲಿ ವ್ಯಾಖ್ಯಾನಕ್ಕೆ ಒಳಗಾಗುತ್ತದೆ. ಕಾಲದ ನಿರಂತರತೆ ಸಂಸ್ಕೃತಿಯನ್ನು ಒಡೆದು, ಕೂಡಿಸಿ, ಬೆರೆಸಿ ಕಟ್ಟುತ್ತದೆ. ಎಂದರೆ, ಸಂಸ್ಕೃತಿಯೆಂಬುದು ಕಾಲವನ್ನು ಮುಕ್ತವಾಗಿ ಸ್ವೀಕರಿಸುತ್ತದೆ ಅಲ್ಲದೆ ಸ್ವಾಗತಿಸುತ್ತದೆ. ಹಾಗಾಗಿಯೇ ಸಂಸ್ಕೃತಿ ಎನ್ನುವುದು ಆಕ್ರಮಣ ಮತ್ತು ಪ್ರತಿರೋಧಗಳಿಂದ ನಿರೂಪಿತಗೊಂಡಿರುವ ಜನತೆಯ ಜೀವನಕ್ರಮ. ಜಾಗತಿಕರಣದ ಪ್ರಕ್ರಿಯೆಯೆ ಒಳಗೆ ಮಹಿಳೆಯರು ಬೇಕಾಗಿಯೋ, ಬೇಡವಾಗಿಯೋ (ಕೊಳ್ಳುಬಾಕ ನೆಲೆಯಲ್ಲಿ) ಅರಿವಿಲ್ಲದೆ ಸೇರಿಕೊಳ್ಳುತ್ತಿರುವುದರಿಂದ 'ಬಹುತ್ವ'ದ ಕಲ್ಪನೆಯನ್ನೇ ಒರೆಸಿ ಹಾಕುವ ಪರಿಸ್ಥಿತಿ ಬಂದೊದಗಿದೆ. ಗ್ಯಾಸ್‌ಸ್ಟವ್, ಕುಕ್ಕರ್, ಮಿಕ್ಸಿ, ರೆಫ್ರಿಜರೇಟರ್ ವಾಷಿಂಗ್ ಮಿಷನ್ ನಂತಹ

ದಿನಬಳಕೆಯ ವಸ್ತುಗಳಿಂದ ಹಿಡಿದು ಬದುಕಿನ ಬಹುಮುಖಿ ಗ್ರಹಿಕೆಯ ಕಲ್ಪನೆಯೇ ಮಾಯವಾಗುತ್ತಿದೆ. ಸುಲಭ ಸಾಧ್ಯ, ಹಣ-ಶ್ರಮ ಉಳಿತಾಯ ಎನ್ನುವ ಮಾರುಕಟ್ಟೆಯ ಜಾಹೀರಾತು ಯಾವುದನ್ನೇ ಆದರೂ ನಗದೀಕರಣಗೊಳಿಸುತ್ತದೆ. ಉದಾ:- ರಾಜಸ್ಥಾನದ 'ಪಾಲೊಡಿ' ಎಂಬ ಹಳ್ಳಿಯನ್ನು ಸರಕಾರ ಪ್ರವಾಸಿ ತಾಣವಾಗಿ ಪರಿವರ್ತಿಸಿತು. ಆ ಹಳ್ಳಿಯ ನೀಳಕಾಯದ ಹೆಣ್ಣುಮಕ್ಕಳು ಗ್ರಾಮೀಣ ಉಡುಗೆಯಲ್ಲಿ ತಲೆಯ ಮೇಲೆ ಗಡಿಗೆಗಳನ್ನು ಪೇರಿಸಿ ಹೊತ್ತು ಪ್ರವಾಸಿಗರ ಕ್ಯಾಮರಾಕ್ಕೆ ಫೋಸ್ ಕೊಟ್ಟು ಸುಲಭವಾಗಿ ಹಣ ಸಂಪಾದಿಸುವುದನ್ನು ಕಲಿತು ಬಿಟ್ಟರು. ಇದು ಮುಂಚಿತವಾಗಿ ಊಹಿಸಲಾರದಂತಹ ದೊಡ್ಡ ಬದಲಾವಣೆ ಏನಲ್ಲ. ಬಡತನ ಎನ್ನುವುದು ಎಲ್ಲವನ್ನೂ ಮಾರಿದರೆ, ಹಣ ಯಾವುದನ್ನೇ ಆದರೂ ಖರೀದಿಸುತ್ತದೆ. ಹೊಸ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸಾಮಾನ್ಯ ಜನರ ಜೀವನ ಕ್ರಮಗಳು ಕೂಡ ಸರಕು ಸರಂಜಾಮಾಗಿ ಮಾರಾಟಗೊಳ್ಳುತ್ತವೆ.

ಜಾಗತೀಕರಣದ ಜೊತೆ ಜೊತೆಗೆ ಕಾಣಿಸಿಕೊಂಡ ಕೋಮುಗಲಭೆ ದೇಶದ ಉದ್ದಲಕ್ಕೂ ಹರಡಿಬಿಟ್ಟಿದೆ. ಗುಜರಾತಿನಲ್ಲಿ ೧೯೯೨ರಲ್ಲಿ ಉದ್ಭವಿಸಿ ಕೋಮುಗಲಭೆ ಬಿತ್ತಿದ ವಿಷಬೀಜ ೨೦೦೩ರವರೆಗೂ ಕ್ಷುದ್ರ ಫಲಗಳನ್ನು ನೀಡುತ್ತಿದೆ. ದೇಶದ ಎಲ್ಲ ಕಡೆಗೂ ಪಸರಿಸಿರುವ ಇಂತಹ ಕೋಮುಗಲಭೆಗಳಲ್ಲಿ ಮೊದಲು ಪುರುಷರು ಮಾತ್ರ ಭಾಗಿಗಳೂ ಬಲಿಗಳೂ ಆಗಿರುತ್ತಿದ್ದರು. ಆದರೆ ಗುಜರಾತ್ ಹಿಂಸಾಕಾಂಡದ ನಂತರದಲ್ಲಿ ಮಹಿಳೆಯರನ್ನು ಹಾಗೂ ಮಕ್ಕಳನ್ನು ಪೂರ್ವೋದ್ದೇಶಿತ ಗುರಿಗಳಾಗಿ, ಬಲಿಗಳಾಗಿ ಬಳಸಿಕೊಳ್ಳಲಾಗುತ್ತಿದೆ. ಗುಜರಾತ್ ಹಿಂಸಾಕಾಂಡದಿಂದ ತೊಡಗಿ ಮುಂದಿನ ಕೋಮುಗಲಭೆಗಳು ಹೆಚ್ಚುಹೆಚ್ಚು ಬರ್ಬರವಾಗ ತೊಡಗಿರುವುದು ಮಹಿಳೆಯರ ಮಕ್ಕಳ ದೃಷ್ಟಿಯಿಂದ ಭವಿಷ್ಯವನ್ನು ಕಸಿಯುತ್ತಿರುವ ಅಂಶವಾಗಿ ವ್ಯಕ್ತವಾಗುತ್ತದೆ.

ಜಾಗತೀಕರಣ ಮತ್ತು 'ಮಹಿಳೆಯರ ಅಸ್ತಿತ್ವದ ಪ್ರಶ್ನೆ' ಎನ್ನುವ ಈ ಲೇಖನದ ಕೊನೆಯನ್ನು ಅಲ್ಬರ್ಟ್‌ಕಾಮುವಿನ ಕಾದಂಬರಿ 'ದಿ ಪ್ಲೇಗ್' ಅನ್ನುವ ಉದಾಹರಿಸುವುದರ ಮೂಲಕವಾಗಿ ಮುಕ್ತಾಯಗೊಳಿಸಬೇಕೆಂದು ಬಯಸಿದ್ದೇನೆ. 'ದಿ ಪ್ಲೇಗ್' ಕಾದಂಬರಿಯು ಮಹಾರೋಗಕ್ಕೆ ತುತ್ತಾದ ಓರನ್ ಪಟ್ಟಣದ ಬಿರುಕು ಬಿಟ್ಟ ಜೀವನವನ್ನು ಚಿತ್ರಿಸುತ್ತದೆ. ಇಂತಹ ಸಂದರ್ಭವನ್ನು ಬಳಸಿಕೊಂಡ ನೌಕರಶಾಹಿ ಹಣ ಮಾಡುತ್ತದೆ. ಧಾರ್ಮಿಕರ ಪ್ರಚಾರಕರು ದೇವರು ಮನುಷ್ಯನ ಮೇಲೆ ಕೋಟೆಗೊಂಡಿದ್ದಾನೆ ಎನ್ನುವ ಕಲ್ಪನೆಯನ್ನು ಪಟ್ಟಣದ ತುಂಬಾ ಹರಡುತ್ತಾರೆ. ಮಕ್ಕಳು, ಮುದುಕರು, ಮಹಿಳೆಯರು ಅಪಾಯರಹಿತ ಸ್ಥಳಕ್ಕೆ ಗುಳೆ ಹೋಗುವಾಗ ಹಾದಿ ಮಧ್ಯದ ಗಂಡಾಂತರಗಳಿಗೆ ಸಿಕ್ಕಿಕೊಳ್ಳುತ್ತಾರೆ. ಕಾದಂಬರಿಯ ಮುಖ್ಯ ಪಾತ್ರ ಡಾ. ಮೀರ್‌ಸ್ಸಾಲ್ ಮಾತ್ರ ಓರನ್ ಪಟ್ಟಣವನ್ನು ಬಿಡದೆ ಉಳಿಯುವ ದೃಢ ನಿರ್ಧಾರ ಮಾಡುತ್ತಾನೆ. 'ನನಗೆ ಸಾಧ್ಯವಾದದ್ದನ್ನು ಮಾಡಲು ನಾನಿರುವ ಸ್ಥಳಗಳನ್ನೇ ಆಯ್ಕೆ ಮಾಡಿಕೊಳ್ಳುತ್ತೇನೆ' ಇದು ಅವನ ದೃಢ ಸಂಕಲ್ಪವಾಗುತ್ತದೆ. ಕಾಲ ಸರಿದಂತೆ ಪ್ಲೇಗ್ ಮಹಾಮಾರಿ ಮರೆಯಾಗುತ್ತದೆ. ಇದಕ್ಕೆ ಮೀರ್‌ಸ್ಸಾಲ್‌ನ ಹೋರಾಟ ಕಾರಣವಾಗುವುದಿಲ್ಲ. ಬದಲಾಗಿ ಅದು ಹೇಗೆ ಬಂತೊ ಹಾಗೆಯೆ ಮಾಯವಾಗುತ್ತದೆ.

ಕಾಮುವಿನ ದೃಷ್ಟಿಯಲ್ಲಿ ರೋಗದ ಪ್ರಾರಂಭ ಮತ್ತು ಅಂತ್ಯ ಎರಡೂ ಅಸಂಗತ. ಕಾಮೂ ಬುದ್ಧಿ ಪೂರ್ವಕ ಆಯ್ಕೆಗೆ ಮಾತ್ರ ಮಹತ್ವ ನೀಡುತ್ತಾನೆ. ಆಯ್ಕೆಗಳ ಜವಾಬ್ದಾರಿಯನ್ನು, ವ್ಯಕ್ತಿಗಳು ಹೊರಬೇಕು. ಅಸ್ತಿತ್ವವಾದದ ಪ್ರಕಾರ ಜೀವನವೆಂದರೆ ಆಯ್ಕೆಗಳ ಸರಮಾಲೆ.

ಜಾಗತೀಕರಣ ವರ್ತಮಾನದ ಸಂದರ್ಭದಲ್ಲಿ ಮಹಿಳೆಯರಿಗೆ ಆಯ್ಕೆಗಳೇ ಇಲ್ಲವಾಗಿವೆ. ಈ ಸಂದಿಗ್ಧತೆ ಹೇಗಿದೆ ಎಂದರೆ, ಮಹಿಳೆಯರು ಪ್ರತಿಕ್ಷಣದಲ್ಲಿ ಕಾರ್ಯೋನ್ಮುಖರಾಗದೆ ಇದ್ದರೆ ಶೋಷಣೆ, ಹಿಂಸೆಯ ಫಲ ಅನುಭವಿಸಬೇಕಾಗುತ್ತದೆ. ಜಾಗತೀಕರಣದಿಂದ ಎಲ್ಲಾ ನೆಲೆಗಳಿಂದಲೂ ಮಾರುಕಟ್ಟೆಯ ಬಿಗಿತದೊಳಗೆ ಸಿಕ್ಕಿಕೊಂಡಿರುವ ಮಹಿಳೆಯರು ಭವಿಷ್ಯ ವನ್ನು ಮರಳಿ ಸಂಪಾದಿಸಬೇಕಾಗುತ್ತದೆ. ಸ್ವಾತಂತ್ರ್ಯದ, ಸ್ವಯಂ ನಿರ್ಣಯದ ಹಾಗೆಯೆ ಸ್ವಗೌರವದ ಶಕ್ತಿಯನ್ನು ಮಹಿಳೆಯರು ಸಂಪಾದಿಸಿಕೊಂಡರೆ ಮಾತ್ರ ಭವಿಷ್ಯದ ಅಸ್ತಿತ್ವ ಸಾಕಾರಗೊಂಡಿತು. ಪ್ರತಿದಿನ ಹೊಸದಾಗಿ ಕಲ್ಪಿಸಿಕೊಂಡು, ಕಥಿಸಿಕೊಂಡು ನಡೆದರೆ ಮಾತ್ರ ಅದು ಪರರ ವಶವಾಗದೆ ಸ್ವಂತದ, ಸ್ವಂತಿಕೆಯ ಸೀಮೆಯಾಗಿ ರೂಪುಗೊಳ್ಳಬಹುದು. ಮಹಿಳೆಯರ ಭವಿಷ್ಯದ ಈ ಕಲ್ಪನಾ ಕಥನ ಸಂಕಥನವಾಗಿಯೂ ಪರಿಕಲ್ಪನಾ ಕಥನವಾಗಿಯೂ ರೂಪಿತಗೊಂಡರೆ ಮಾತ್ರ ಸಮಾಜದೊಳಗೆ ಮಹಿಳೆಯರ ಅಸ್ತಿತ್ವವೆನ್ನುವುದು ಅರ್ಥಪೂರ್ಣ ವಾಗಿ ಉಳಿದುಕೊಳ್ಳಬಹುದು.

## ಪರಾಮರ್ಶನ ಗ್ರಂಥಗಳು

೧. ಅಶ್ವಿನಿ ಮಹಾಜನ್ (ಮೂಲ) : (೧೯೯೮) ಜಾಗತೀಕರಣ ಮತ್ತು ಉದ್ಯೋಗ ಸ್ವದೇಶಿ ಜಾಗರಣ ಮಂಚ್, ಕರ್ನಾಟಕ.

೨. Boserup. E. (1987) Inequality between the sex's Iahn catwell and etallbid.

೩. Odeyara D Heggade (1999) groblisation Libelalisation and Privatisation : gajanana publications Mysore.

೪. Spivok Gayatri Chakravorty (1994) Culture/Sex/Eeonomics Conference : La Irobe University Melbourne.

೫. Susan Moller Okin (1997) is Multiculturlism Bad for Women?; Princeton University Press, New Jersey.

●

# ಕೈಲಾಸಂ : ಸೂಳೆ, ಪಾತಿವ್ರತ್ಯ ಮತ್ತು ರಾಷ್ಟ್ರೀಯತೆ

ವಿಜಯಕುಮಾರ ಎಂ. ಬೋರಟ್ಟಿ

ಪ್ರಸ್ತುತ ಲೇಖನದಲ್ಲಿ ಕೈಲಾಸಂರ ನಾಟಕಗಳಲ್ಲಿ ಚಿತ್ರಿತವಾಗಿರುವ ಸ್ತ್ರೀಯರು 'ರಾಷ್ಟ್ರೀಯತೆ' ವಿಚಾರಧಾರೆಯ ಪ್ರತಿನಿಧಿಗಳೆಂದು ವಿಶ್ಲೇಷಿಸಲಾಗಿದೆ. ಕೈಲಾಸಂರ ರಾಷ್ಟ್ರೀಯತೆ ವಿಚಾರಾಧಾರೆಯನ್ನು 'ಜಾತ್ಯಾತೀತ ಸ್ವ' ನಿರ್ಮಾಣದ ಪ್ರಕ್ರಿಯೆಯಾಗಿ ನೋಡಲಾಗಿದೆ. ಈ ಪ್ರಕ್ರಿಯೆಯು ಪಿತೃಪ್ರಧಾನ ವ್ಯವಸ್ಥೆಯನ್ನು ವಸಾಹತುಶಾಹಿ ಆಧುನಿಕತೆಗೆ ಅನುಗುಣವಾಗಿ ಪುನಾರಚಿಸುವಲ್ಲಿ ಮಹತ್ತರ ಪಾತ್ರವಹಿಸಿತು. ಹೀಗೆ ಮರುರೂಪುಗೊಂಡ ಪಿತೃಪ್ರಧಾನ ವ್ಯವಸ್ಥೆಯು ಸ್ತ್ರೀ ಪ್ರಶ್ನೆಯನ್ನು ನಿವಾರಿಸಿದುದು ಬರಿಯ ವಸಾಹತುಶಾಹಿ - ವಿರೋಧಿ ಮಾತ್ರವಾಗಿರದೆ, ಇತರ ಸಮುದಾಯಗಳೊಂದಿಗೆ ಇಟ್ಟುಕೊಂಡ ಸಂಬಂಧಗಳ ಸ್ವರೂಪವನ್ನು ತೋರಿಸುತ್ತದೆ ಎಂದು ವಾದಿಸಲಾಗಿದೆ. ಈ ಲೇಖನವನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಲೇಖನದ ಮೊದಲನೇ ಭಾಗವು ಕೈಲಾಸಂರ ನಾಟಕಗಳಲ್ಲಿ ಬರುವ ಸ್ತ್ರೀ ಪಾತ್ರಗಳ ಸಂಕ್ಷಿಪ್ತ ಪರಿಚಯವನ್ನು ಕೊಡುತ್ತದೆ. ಎರಡನೆ ಭಾಗವು ರಾಷ್ಟ್ರೀಯತೆ ಮತ್ತು ಸ್ತ್ರೀ ಪ್ರಶ್ನೆಯ ಬಗ್ಗೆ ಇರುವ ಸಿದ್ಧಾಂತಗಳನ್ನು ಚರ್ಚೆಗೆ ಹಿನ್ನೆಲೆಯಾಗಿ ವಿವರಿಸಲಾಗಿದೆ. ಮೂರನೇ ಭಾಗದಲ್ಲಿ ಕೈಲಾಸಂರ ಸೂಳೆ ನಾಟಕದ ವಿಶ್ಲೇಷಣೆ ಇದೆ. ಕೊನೆಯ ಮತ್ತು ನಾಲ್ಕನೆ ಭಾಗದಲ್ಲಿ ಸೂಳೆ ನಾಟಕಕ್ಕೂ ಮತ್ತು ಅಂದಿನ ಸಾಮಾಜಿಕ-ಚರಿತ್ರೆಯ (social history) ನಡುವೆ ಇರುವ ಸಂಬಂಧವನ್ನು ಅಧ್ಯಯಕ್ಕೊಳಪಡಿಸಲಾಗಿದೆ.

## ಭಾಗ-ಒಂದು

ಕೈಲಾಸಂ ನಾಟಕಗಳಲ್ಲಿ ಬರುವ ಸ್ತ್ರೀ ಪಾತ್ರಗಳ ಬಗ್ಗೆ ಬರೆಯುತ್ತ ಕನ್ನಡ ನಾಟಕದ ವಿಮರ್ಶಕರಾದ ಮರುಳ ಸಿದ್ಧಪ್ಪನವರು ಹೀಗೆ ಬರೆದಿದ್ದಾರೆ : "ಹೆಣ್ಣಿನ ಗೋಳು ಕೈಲಾಸಂರವರನ್ನು ಕಲಕಿರುವಂತೆ ಮತ್ತಾವ ವಿಚಾರವು ಕಲಕಿರಲಾರದು. ತಾಯಿ, ಹೆಂಡತಿ, ಮಗಳು, ಸೊಸೆ, ವಿಧವೆ, ಸೂಳೆ - ಹೀಗೆ ಹೆಣ್ಣಿನ ಬದುಕನ್ನು ಹಲವು ನೆಲೆಗಳಿಂದ ನೋಡಿ, ಅಲ್ಲಿರುವ ದುಃಖ ದುಮ್ಮಾನಗಳನ್ನು, ಅವರ, ತಾಳ್ಮೆ ಸಹನೆಯನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ" (೨೦೦೦:೧೪೨).[೧] ಮತ್ತೊಬ್ಬ ವಿಮರ್ಶಕರಾದ ಆರ್. ಮೋಹನಕುಮಾರರು

ಹೀಗೆ ಭಾವಿಸುತ್ತಾರೆ : "ಕೈ ನಾಟಕಗಳಲ್ಲಿ ವಿಭಿನ್ನ ಮನೋವೃತ್ತಿಯ ಸ್ತ್ರೀಯರನ್ನು ಕಾಣುತ್ತೇವೆ. ಕರ್ಮಟರು, ನಿರಕ್ಷರಕುಕ್ಷಿಗಳು, ಸುಶಿಕ್ಷಿತೆಯರು, ಸ್ವತಂತ್ರ ಮನೋಭಾವದ ಮಹಿಳೆಯರು, ಛಲವಾದಿಗಳು, ಕುಹಕಿಗಳು, ಪ್ರೇಮಮಯಿಗಳು, ಆದರ್ಶವಾದಿಗಳು, ಸ್ವಾರ್ಥಿಗಳು, ಬೆಡಗಿಯರು, ದರ್ಪವತಿಯರು, ಗಂಡಂದಿರನ್ನು ಶೋಷಿಸುವ ಹೆಂಗಳೆಯರು, ಗಂಡನಿಂದ ಶೋಷಿಸಲ್ಪಡುವ ಸ್ತ್ರೀಯರು, ಸೇವಾಪರಾಯಣರು, ಕುಂಟಣಿ, ವೇಶ್ಯೆ, ಉದ್ಯೋಗ ನಿರತೆಯರು, ಮಧ್ಯಮವರ್ಗದ ಅಂಗನೆಯರು, ಅಗರ್ಭ ಸಿರಿವಂತರು, ಕಡು ದರಿದ್ರರು, ಕೂಲಿ ಮಾಡುವವರು ಮುಂತಾದ ಸ್ತ್ರೀಯರು ಚಿತ್ರಿತವಾಗಿದ್ದಾರೆ" (೨೦೦೦:೨೦೦೧)[೩]. ವಿವಿಧ ಮನೋಭೂಮಿಕೆಯ ಈ ಸ್ತ್ರೀಪಾತ್ರಗಳು ಕೈಲಾಸಂರ ವಿವಿಧ ನಿಲುವುಗಳನ್ನು ಅಭಿವ್ಯಕ್ತಿಸುತ್ತವೆ. ಆಧುನಿಕತೆ ತಂದೊಡ್ಡಿದ ಭಿನ್ನತೆ, ದ್ವಂದ್ವ ಮತ್ತು ವಿರೋಧಾಭಾಸಗಳನ್ನು ಪ್ರತಿಬಿಂಬಿಸುವುದರ ಜೊತೆಗೆ ಅದರ ಮಿತಿಗಳನ್ನು ಕೈಲಾಸಂರು ಕಟು ವಿಮರ್ಶೆಗೆ ಒಳಪಡಿಸಿದ್ದಾರೆ. ಆಧುನಿಕತೆಯ ವಿಮರ್ಶೆಯ ವಕ್ತಾರರಾಗಿ ಸ್ತ್ರೀಪಾತ್ರಗಳು ಚಿತ್ರಿತವಾಗಿದ್ದಾರೆ.

ಸ್ತ್ರೀಯರ ಪಾತ್ರಗಳನ್ನು ಚಿತ್ರಿಸುವಾಗ ಕೈಲಾಸಂರು ವಿಡಂಬನೆಯ ಅಸ್ತ್ರವನ್ನು ಝಳಪಿಸುತ್ತಾರೆ. ಅವರಲ್ಲಿ ಎರಡು ರೀತಿಯ ಧೋರಣೆಗಳನ್ನು ಕಾಣಬಹುದು. ಒಂದು, ಸ್ತ್ರೀಯರನ್ನು ಸಮಾಜ ಸುಧಾರಣೆಯ 'ವಸ್ತು'ವನ್ನಾಗಿ ಬಿಂಬಿಸಿ, ಅವರ ಮೂಲಭೂತ ಸಮಸ್ಯೆಗಳನ್ನು ಮರೆಮಾಚುವ ಧೋರಣೆಯನ್ನು ಹೊಂದಿದ್ದರೆ, ಮತ್ತೊಂದು, ಗತಕಾಲದ ಸ್ತ್ರೀ ಜಗತ್ತನ್ನು ಮತ್ತು ಅದರ ವೈಭವವನ್ನು ರಮ್ಯೀಕರಿಸುವುದಕ್ಕೆ ಸೀಮಿತವಾಗಿತ್ತು. ಒಂದು ಕಡೆ ಬ್ರಾಹ್ಮಣ ಸಮಾಜದ ಸಂಪ್ರದಾಯಸ್ಥ ಮುದುಕಿಯರನ್ನು (ಟೊಳ್ಳು-ಗಟ್ಟಿಯ ನಾಗಮ್ಮನಂತವರು) ಹಾಸ್ಯಕ್ಕೆ ಗುರಿ ಮಾಡಿದರೆ, ಮತ್ತೊಂದು ಕಡೆ ಅದೇ ಸಮಾಜದ ಆಧುನಿಕ ಸ್ತ್ರೀಯರನ್ನು (ಅಮ್ಮಾವ್ರ ಗಂಡ ನಾಟಕದ ಅಮ್ಮಾವ್ರು, ಹುತ್ತದಲ್ಲಿ ಹುತ್ತ ನಾಟಕದ ಸರೋಜಾದೇವಿ) ಕಠೋರವಾಗಿ ವಿಡಂಬಿಸಿದ್ದಾರೆ. ನಾಗಮ್ಮ, ಸರೋಜದೇವಿ, ಪಾತು (ಟೊಳ್ಳು-ಗಟ್ಟಿ) ಪಾತ್ರಗಳು ಕೈಲಾಸಂರ ಸಮಾಜ ಚಿಕಿತ್ಸಕ/ಸುಧಾರಣೆಗೆ ಒಳಗಾದರೆ, ಸ್ತ್ರೀ ಸುಧಾರಣಾವಾದಿಗಳನ್ನು ಜರಿಯುವ ಪ್ರಮೇಯವನ್ನು ಸಹ ಕೈಲಾಸಂರಲ್ಲಿ ಕಾಣಬಹುದು. ಅಮ್ಮಾವ್ರು, ಲೇಡಿ ಶಿವಾದಾಸ ಐಯ್ಯರ್ (ಸೂಳೆ) ಪಾತ್ರಗಳ ಮುಖಾಂತರ ಸ್ತ್ರೀಯರಿಂದಲೆ ಆಗುತ್ತಿದ್ದ ಸ್ತ್ರೀ ಸುಧಾರಣ ಪ್ರಯತ್ನಗಳನ್ನು ಟೀಕಿಸಿದ್ದಾರೆ. ಇಂತಹ ಸ್ತ್ರೀಯರ ಎರಡು ವಿರುದ್ಧ ಧ್ರುವಗಳ ಮಧ್ಯೆ ಕೈಲಾಸಂರು ಆದರ್ಶಮಯ ಸ್ತ್ರೀಯರನ್ನು ರೂಪಿಸುವ ಪ್ರಯತ್ನವನ್ನೂ ಸಹ ಮಾಡಿದ್ದಾರೆ. ನಮ್ ಬ್ರಾಹ್ಮಣ್ಕೆಯ ಸರೋಜ, ಸೂಳೆಯ ಸೂಳೆ, ಪೌರಾಣಿಕ ಸ್ತ್ರೀಯರಾದ ಸೀತೆ, ಸತಿ-ಸಾವಿತ್ರಿಯರು ಇದಕ್ಕೆ ಉತ್ತಮ ಉದಾಹರಣೆ. ಆಧುನಿಕ ಶಿಕ್ಷಣವನ್ನು ಪಡೆದಾಗ್ಯೂ ಮತ್ತು ವಿದೇಶದ (ಇಂಗ್ಲೆಂಡ್) ಉದಾರವಾದಿ ವಿಚಾರಗಳಿಂದ ಪ್ರಭಾವಿತರಾಗಿದ್ದರೂ, ಸ್ತ್ರೀಯರ ವಿಷಯದಲ್ಲಿ ಸಂಪ್ರದಾಯ ಧೋರಣೆಯನ್ನು ತೋರಿಸುವ ಕೈಲಾಸಂರು ಆಗಿನ ಕಾಲದ ಮೇಲ್ಜಾತಿ, ಮಧ್ಯಮ ವರ್ಗದ ವಿಚಾರಧಾರೆಯನ್ನು ಪ್ರತಿನಿಧಿಸುವ

ನಾಟಕಕಾರರಾಗಿ ಹೊಮ್ಮುತ್ತಾರೆ. ೨೦ರ ದಶಕಗಳ ನಂತರ ಸ್ತ್ರೀಯರ ಸುಧಾರಣೆಗಾಗಿ ಮತ್ತು ಅಭಿವೃದ್ಧಿಗಾಗಿ ರಾಷ್ಟ್ರೀಯ ಹಂತದಲ್ಲಿ ವಾದ-ವಿವಾದಗಳು ನಡೆಯುತ್ತಿದ್ದಾಗ ಕೈಲಾಸಂರಂತ ಲೇಖಕರು ಸಾಹಿತ್ಯದ ಮೂಲಕ ತಮ್ಮದೇ ಆದ ಶೈಲಿಯಲ್ಲಿ ಆ ವಾದ-ವಿವಾದಗಳಿಗೆ ಪ್ರತಿಸ್ಪಂದಿಸಿದ್ದಾರೆ. ಮೇಲೆ ವಿವರಿಸಿದ ಸ್ತ್ರೀಪಾತ್ರಗಳು ಒಂದು ಸಣ್ಣ ಉದಾಹರಣೆ ಅಷ್ಟೆ.

ಸಮಾಜ ಸುಧಾರಣೆಯ ಅಂಗವಾಗಿ ಸ್ತ್ರೀ ಪ್ರಶ್ನೆಯನ್ನು ಬ್ರಾಹ್ಮಣ ಮಧ್ಯಮ ವರ್ಗವು ಹೇಗೆ ನಿಭಾಯಿಸಿತು ಎಂಬುದು ಭಾರತ ಹಾಗೂ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಒಂದು ಪ್ರಮುಖ ಘಟ್ಟ. ಈ ಚಾರಿತ್ರಿಕ ಘಟ್ಟವನ್ನು ವಿಶ್ಲೇಷಿಸುವ ಪ್ರಯತ್ನಗಳನ್ನು ಈಗಾಗಲೆ ಸಾಕಷ್ಟು ವಿದ್ವಾಂಸರು ಮಾಡಿದ್ದಾರೆ. ಕೆಲವು ಸಾಹಿತ್ಯ ಮತ್ತು ಸಮಾಜಶಾಸ್ತ್ರ ಅಧ್ಯಯನಗಳು ಈ ಚಾರಿತ್ರಿಕ ಘಟ್ಟವನ್ನು ಸಾಂಸ್ಕೃತಿಕ ರಾಷ್ಟ್ರೀಯತೆಯ ಭಾಗವಾಗಿ ವಿಶ್ಲೇಷಿಸಿರುವುದನ್ನು ಈ ಸಂದರ್ಭದಲ್ಲಿ ಗಮನಕ್ಕೆ ತರಬಹುದು. ಅವುಗಳಲ್ಲಿ ಪ್ರಮುಖವಾಗಿ ಎದ್ದು ಕಾಣುವುದು ರಾಜಕೀಯ ಶಾಸ್ತ್ರಜ್ಞ ಪಾರ್ಥ ಚಟರ್ಜಿಯವರ ಒಂದು ಲೇಖನ The National Resoultion of the Women's Question (೧೯೮೯)[೩]. ಈಗ ಚಟರ್ಜಿಯವರ ಸಾಂಸ್ಕೃತಿಕ ರಾಷ್ಟ್ರೀಯತೆಯ ಪರಿಕಲ್ಪನೆ ಮತ್ತು ಅದಕ್ಕೆ ಸಂಬಂಧಿಸಿದ ಸೈದ್ಧಾಂತಿಕ ವಿಚಾರಗಳು ಕೈಲಾಸಂರ ನಾಟಕಗಳನ್ನು ಅರ್ಥಮಾಡಿಕೊಳ್ಳಲು ಎಷ್ಟು ಪ್ರಸ್ತುತ ಎಂಬುದನ್ನು ಚರ್ಚಿಸೋಣ.

## ಭಾಗ-ಎರಡು

ಚಟರ್ಜಿಯವರ ಪ್ರಕಾರ ವಸಾಹತುಶಾಹಿ ಕಾಲದಲ್ಲಿ ಸ್ತ್ರೀಯರ ಆಧುನೀಕರಣವನ್ನು ಪುರಸ್ಕರಿಸಿ, ಅವರಿಗೆ ಪೂಜ್ಯ ಸ್ಥಾನವನ್ನು ನೀಡಿ, ಅವರನ್ನು ಭಾರತೀಯ ಸಂಸ್ಕೃತಿಯ/ಸಂಪ್ರದಾಯದ ಅಧಿಕೃತ ವಕ್ತಾರರನ್ನಾಗಿ ಬಿಂಬಿಸುವ ಪ್ರಯತ್ನಗಳು ದ್ವಂದ್ವತೆಯನ್ನು ತೋರಿಸುತ್ತದೆ. ಆಧುನಿಕತೆಯನ್ನು ಮೈಗೂಡಿಸಿಕೊಂಡರೂ, ಸಂಪ್ರದಾಯವನ್ನು ಕೈ ಬಿಡಲಾಗದ ಪರಿಸ್ಥಿತಿಯು ದ್ವಂದ್ವತೆ ಮತ್ತು ಬಿಕ್ಕಟ್ಟನ್ನು ಹುಟ್ಟು ಹಾಕಿತು. ಇದನ್ನು ನಿವಾರಿಸುವ ಸಲುವಾಗಿ ಆದ ವಾದ-ವಿವಾದಗಳು ಹಾಗೂ ಸಮಾಜ ಸುಧಾರಣೆಯ ಪ್ರಯತ್ನಗಳು ಮಧ್ಯಮ ವರ್ಗ, ಪ್ರಗತಿ ಪರ ಬ್ರಾಹ್ಮಣರ (ಬೆಂಗಾಲಿ ಭದ್ರಲೋಕ) ಸಾಂಸ್ಕೃತಿಕ ರಾಷ್ಟ್ರೀಯತೆಯನ್ನು ಸೂಚಿಸುತ್ತದೆ ಎಂದು ಚಟರ್ಜಿಯವರು ಭಾವಿಸಿದ್ದಾರೆ. ಚಟರ್ಜಿಯವರಿಗೆ ೧೯ನೇ ಶತಮಾನದ ಸಮಾಜ ಸುಧಾರಣೆಯು ಮತ್ತು ಸ್ತ್ರೀ ಪ್ರಶ್ನೆಯನ್ನು ನಿಭಾಯಿಸಿದ ಧೋರಣೆಯು ಸಮಸ್ಯಾತ್ಮಕವಾಗಿ ಕಾಣಿಸುತ್ತವೆ. ಮಧ್ಯಮ ವರ್ಗ, ಮೇಲ್ಜಾತಿ ವಿದ್ಯಾವಂತರು ಪಾಶ್ಚಾತ್ಯ ವಿಚಾರಗಳಿಗೆ ತಮ್ಮನ್ನು ತಾವು ಶರಣಾಗಿಸಿಕೊಂಡು, ಪರಂಪರೆಯಾಗಿ ಬೆಳೆದು ಬಂದ ಪಿತೃಪ್ರಧಾನ ವ್ಯವಸ್ಥೆಯನ್ನು ಹೊಸದಾಗಿ ಮಾರ್ಪಾಡಿಸಿಕೊಂಡಿದ್ದೆ ಈ ಧೋರಣೆಗೆ ಕಾರಣ. ಇತಿಹಾಸಕರ ಸುಮಿತ್ ಸರ್ಕಾರ್‌ರ ಜೊತೆಗೆ ನಡೆದ ವಾಗ್ವಾದದ ಮುಖಾಂತರ ಚಟರ್ಜಿಯವರ 'ರಾಷ್ಟ್ರೀಯತೆ'ಯ ಪರಿಕಲ್ಪನೆ ಮತ್ತು ಅದರ ಪಿತೃಪ್ರಧಾನ ವಿಚಾರಗಳನ್ನು ಅರ್ಥಮಾಡಿಕೊಳ್ಳಬಹುದು.

ಸುಮಿತ್ ಸರಕಾರವರು ೧೯ನೇ ಶತಮಾನದ ಉತ್ತರಾರ್ಧದ ಬಂಗಾಳದಲ್ಲಿ ರಾಷ್ಟ್ರೀಯತೆಯ ಮೂಲದಿಂದ ಉದ್ಭವಿಸಿದ ಸಮಾಜ ಸುಧಾರಣೆಯು ಹಿಂದಿನ (೧೯ನೇ ಶತಮಾನದ ಪೂರ್ವಾರ್ಧ) ತೀವ್ರ ಸುಧಾರಣ (radical reformism) ಘಟ್ಟಕ್ಕಿಂತ ಬಲಹೀನ ಅಥವಾ ಹಿನ್ನಡೆಯಿಂದ ಕೂಡಿದ ಚಳುವಳಿ ಆಗಿರಲಿಲ್ಲ ಎಂದು ವಾದಿಸುತ್ತಾರೆ. ಮೊದಲು ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ೧೯ನೇ ಶತಮಾನ ಸಾಮಾಜಿಕ-ರಾಜಕೀಯ ಸ್ಥಿತ್ಯಂತರಗಳನ್ನು ಗುರುತಿಸಲು ೧೯ನೇ ಶತಮಾನದ ಪೂರ್ವಾರ್ಧವನ್ನು ತೀವ್ರ ಸುಧಾರಣೆಯ ಘಟ್ಟವೆಂದು ಹಾಗೂ ಉತ್ತರಾರ್ಧವನ್ನು ಸಾಮಾಜಿಕ ಸುಧಾರಣೆಯ ಘಟ್ಟವೆಂದು ಪರಿಗಣಿಸಿರುವುದು. ತೀವ್ರ ಸುಧಾರಣೆಯ ಘಟ್ಟವನ್ನು ಪುನರುಜ್ಜೀವನ ಕಾಲವೆಂದೂ ಸಹ ಪರಿಗಣಿಸಲಾಗಿದೆ. ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಉಂಟಾದ ತೀವ್ರ ಸುಧಾರಣೆಯು ಸಹ ಸಾಮಾಜಿಕ ಸುಧಾರಣೆಯಂತೆ ತನ್ನದೆ ಆದ ಇತಿ-ಮಿತಿಗಳನ್ನು ಹೊಂದಿತ್ತು. ಸ್ವಾಯತ್ತ ಸ್ತ್ರೀ ಸುಧಾರಣೆಯ ಪ್ರಯತ್ನಗಳು, ಸಮಾಜ ಸುಧಾರಣೆಯ ಘಟ್ಟದಲ್ಲಿಯಂತೆ, ತೀವ್ರ ಸುಧಾರಣೆಯ ಘಟ್ಟದಲ್ಲಿಯೂ ಸಹ ಹುಟ್ಟಿಕೊಳ್ಳಲಿಲ್ಲ. ಸಮಾಜ ಸುಧಾರಣೆಯ ಘಟ್ಟದಂತೆ ಈ ಘಟ್ಟದಲ್ಲಿಯೂ ಸಹ ಸ್ತ್ರೀ ಪ್ರಶ್ನೆಯು (ಸ್ತ್ರೀ ಶಿಕ್ಷಣ, ಬಾಲ್ಯ ವಿವಾಹ ರದ್ಧತಿ, ಸ್ತ್ರೀಯರ ವಿವಾಹ ವಯಸ್ಸು, ವಿಧವಾ ವಿವಾಹ, ಇತ್ಯಾದಿಗಳು) ಪುರುಷರಿಂದಲೆ ನಿರ್ಧಾರಿಸಲ್ಪಟ್ಟಿತ್ತು. ಅಂದರೆ ಪುನರುಜ್ಜೀವನದ ತೀವ್ರ ಸುಧಾರಣೆ ಮತ್ತು ರಾಷ್ಟ್ರೀಯತೆಯ ಸಾಮಾಜಿಕ ಸುಧಾರಣೆಗಳೆರಡರಲ್ಲೂ ಸ್ತ್ರೀಯರ ಬಗೆಗಿನ ಕಾಳಜಿಗಳು ಮತ್ತು ಪರಿಹಾರಗಳು ಪುರುಷ-ಕೇಂದ್ರಿತವಾಗಿದ್ದವು. ತೀವ್ರ ಸುಧಾರಣೆಗಳನ್ನು ಜಾರಿಗೆ ತರಲು ಪ್ರಯತ್ನಿಸಿದ ರಾಜಾರಾಮ್ ಮೋಹನರಾಯ್ ಮತ್ತು ಈಶ್ವರ ಚಂದ್ರ ವಿದ್ಯಾಸಾಗರರವರ ಪ್ರಯತ್ನಗಳು ಪಾಶ್ಚಾತ್ಯ ವಿಚಾರಧಾರೆಗಳಿಂದ ಪ್ರೇರಿತವಾಗಿದ್ದರೂ, ಅವರು ತಮ್ಮ ಬೇಕಾದ್ದನ್ನು ಸ್ವೀಕರಿಸುವ ಹಾಗೂ ಬೇಡವಾದದ್ದನ್ನು ತಿರಸ್ಕರಿಸುವ ಧೋರಣೆಯನ್ನು ಹೊಂದಿದ್ದರು. ಅಂದರೆ ಪಾಶ್ಚಾತ್ಯ ಮೂಲದ ಉದಾರವಾದ ಅಥವಾ ವೈಚಾರಿಕತೆ ತೀವ್ರ ಸುಧಾರಣವಾದಿಗಳನ್ನು ಸಂಪೂರ್ಣವಾಗಿ ಆವರಿಸಲಿಲ್ಲ. ಸಾಮಾಜಿಕ ಸುಧಾರಣವಾದಿಗಳಂತೆ ತೀವ್ರ ಸುಧಾರಣವಾದಿಗಳೂ ಸಹ ಪಾಶ್ಚಾತ್ಯ ಆಚಾರ-ವಿಚಾರಗಳಿಗೆ ಸಂಪೂರ್ಣವಾಗಿ ಶರಣಾಗಲಿಲ್ಲ. ಜಾತಿ ಶ್ರೇಣೀಕರಣ, ಶಾಸ್ತ್ರ-ಪುರಾಣಗಳ ಮುಂದುವರಿಕೆ, ಮೂಲಭೂತ ಬದಲಾವಣೆಗಳ ಬದಲಾಗಿ ಸಾಂಕೇತಿಕ ಮಾರ್ಪಾಟುಗಳು ಈ ಎರಡೂ ಘಟ್ಟಗಳಲ್ಲಿ ಕಾಣುವುದು ಸಾಧ್ಯ ಎಂದು ಸುಮಿತ್ ಸರಕಾರವರು ವಾದಿಸಿದ್ದಾರೆ. ಆದ್ದರಿಂದ ಸ್ತ್ರೀಯ ಸಾಮಾಜಿಕ ಸ್ಥಿತಿ-ಗತಿಗಳ ಬಗ್ಗೆ ಇದ್ದ ಕಾಳಜಿಗಳು "ಕುಟುಂಬದಲ್ಲಿ ಆಗುತ್ತಿದ್ದ ಆಂತರಿಕ ಹೊಂದಾಣಿಕೆಯ ಸಮಸ್ಯೆಗಳ ಪರಿಣಾಮವಾಗಿಯೇ ಹೊರತು ಯಾವುದೇ ಪಾಶ್ಚಾತ್ಯ ಪ್ರೇರಿತ ಉದಾರವಾದಿ ಕಾರಣಗಳೂ ಅಲ್ಲ" (೧೯೯೭-೨೩೫)[೮]. ನಂತರದ ದಶಕಗಳಲ್ಲಿ ಆದ ಸ್ತ್ರೀಯರ ಸಾಮಾಜಿಕ ಮತ್ತು ನ್ಯಾಯ ಸಂಬಂಧದ ಮಾರ್ಪಾಟುಗಳಿಗೆ "ಬಾಹ್ಯ ಸಮಾಜೋ-ಆರ್ಥಿಕ ಒತ್ತಡಗಳು, ಕೆಲವು ಸ್ವಾತಂತ್ರ್ಯೋತ್ತರ ಶಾಸನಗಳು" (೧೯೯೭-೨೩೫) ಕಾರಣವೇ ಹೊರತು ಯಾವುದೇ ನಿರ್ದಿಷ್ಟ ರೂಪದ ವಿಚಾರಗಳು ಅಥವಾ ರಾಷ್ಟ್ರೀಯತೆಯ ಹೋರಾಟದ ಕಾರಣವಾಗಿ ಅಲ್ಲ.

ಚಟರ್ಜಿಯವರ ಪ್ರಕಾರ ಸುಮಿತ್ ಸರ್ಕಾರ್‌ರವರು ರಾಷ್ಟ್ರೀಯತೆಯ ಮೂಲದಿಂದ ಹುಟ್ಟಿದ ಸಾಮಾಜಿಕ ಸುಧಾರಣೆಯನ್ನು ಅಸಫಲವೆಂದು ನಂಬಿದ್ದಾರೆ. ಸುಮಿತ್‌ರವರು ಇದಕ್ಕೆ ಕೊಡುವ ಕಾರಣವೇನೆಂದರೆ ರಾಷ್ಟ್ರೀಯವಾದಿ ಸಮಾಜ ಸುಧಾರಕರು ಆಧುನಿಕ ಉದಾರವಾದಿ ಆದರ್ಶಗಳಾದ ಸಮಾನತೆ ಮತ್ತು ವೈಚಾರಿಕತೆಯನ್ನು ಗಂಭೀರವಾಗಿ ಪರಿಗಣಿಸದೆ ಇದ್ದುದು. ಸುಮಿತ್‌ರ ಈ ನಿಲುವನ್ನು ಚಟರ್ಜಿಯವರು ಹೀಗೆ ಪ್ರಶ್ನಿಸುತ್ತಾರೆ- "೧೯ನೇ ಶತಮಾನದ ಸುಧಾರಣಾ ಚಳುವಳಿಗಳು ಪಾಶ್ಚಾತ್ಯ ಮಾದರಿಯ ಉದಾರವಾದದಿಂದ ಉಂಟಾಗಲಿಲ್ಲ ಎಂದು ಭಾವಿಸಿದರೆ, ಅವುಗಳು ಯಾವ ಮೂಲದಿಂದ ಹುಟ್ಟಿದವು?" (೧೯೯೭-೨೩೬). ಚಟರ್ಜಿಯವರ ಪ್ರಕಾರ ಕುಟಂಬದ ಜೊತೆ ಹೊಂದಾಣಿಕೆ ಮಾಡಿಕೊಳ್ಳು ವಾಗ ಉಂಟಾದ ವೈಯಕ್ತಿಕ ಸಮಸ್ಯೆಗಳಿಂದ ಸುಧಾರಣ ಚಳುವಳಿಗಳು ಹುಟ್ಟಿದವು ಎಂದು ತಿಳಿಯುವುದು ಯಥೋಚಿತ್ತವಲ್ಲ. ಸ್ತ್ರೀಯರ ಬಗೆಗಿನ ಪ್ರಶ್ನೆಗಳು, ಕಾಳಜಿಗಳು ಮತ್ತು ಅವುಗಳಿಗೆ ಸಂಬಂಧಿಸಿದ ಸುಧಾರಣೆಗಳು ಹೆಚ್ಚಾಗಿ ಆಧುನಿಕತೆ ವಿಚಾರಧಾರೆಯಿಂದ ರೂಪಿಸಲ್ಪಟ್ಟಿರುವಂತದ್ದು. ಚಟರ್ಜಿಯವರು ಈ ವಿಚಾರಧಾರೆಯನ್ನು ವಸಾಹತುಶಾಹಿ ವಿರೋಧಿ 'ರಾಷ್ಟ್ರೀಯತೆ'ಯ ಸಾಂಸ್ಕೃತಿಕ ಭಾಗವೆಂದು ಪರಿಗಣಿಸುತ್ತಾರೆ. ಈ ರಾಷ್ಟ್ರೀಯತೆ ವಿಚಾರಧಾರೆಯು ಪಾಶ್ಚಾತ್ಯ ಆಧುನಿಕತೆಯಿಂದ ತನಗೆ ಬೇಕಾದ್ದನ್ನು ಎಷ್ಟು ಬೇಕೊ, ಅಷ್ಟನ್ನು ಮಾತ್ರ ಸ್ವೀಕರಿಸಿ, ಅದನ್ನು ಭಾರತೀಯರ ಸಂಸ್ಕೃತಿ ಹಾಗೂ ಸಂಪ್ರದಾಯಕ್ಕೆ ತಕ್ಕಂತೆ ಅನುವಾದಿಸಿಕೊಂಡಿತು. ಆದ್ದರಿಂದ ರಾಷ್ಟ್ರೀಯತೆ ಮತ್ತು ಅದರ ವಿಚಾರಧಾರೆಯಿಂದ ಪ್ರಭಾವಿತವಾದ ಸಮಾಜ ಸುಧಾರಣೆಯು ಪಾಶ್ಚಾತ್ಯ ಆಧುನಿಕತೆಯ ಪ್ರಭಾವ ಎಂದು ಚಟರ್ಜಿಯವರು ವಾದಿಸಿದ್ದಾರೆ. ಇಂತಹ ರಾಷ್ಟ್ರೀಯತೆಯು ಸ್ತ್ರೀ ಪ್ರಶ್ನೆಯನ್ನು ನಿವಾರಿಸಿದುದು ಪಿತೃಪ್ರಧಾನ ವ್ಯವಸ್ಥೆಯ ಆಧಾರದ ಮೇಲೆ ಎಂದು ಚಟರ್ಜಿಯವರು ನಂಬಿದ್ದಾರೆ.

### ಬಾಹ್ಯ (outer) ಹಾಗೂ ಆಂತರಿಕ (inner) ಕ್ಷೇತ್ರಗಳು

ಚಟರ್ಜಿಯವರ ಪ್ರಕಾರ ವಸಾಹತುಶಾಹಿ ವಿರುದ್ಧದ ರಾಷ್ಟ್ರೀಯತೆ ವಿಚಾರಧಾರೆಯು ಸಾಂಸ್ಕೃತಿಕ ರಾಜಕೀಯದ ಸ್ವರೂಪವನ್ನು ಪರಿಚಯಿಸುತ್ತದೆ. ಈ ರಾಷ್ಟ್ರೀಯತೆಯ ವಿಚಾರಧಾರೆಯು ಚಟರ್ಜಿಯವರು ವಿವರಿಸುವ ಎರಡು ಕ್ಷೇತ್ರಗಳ ತಳಹದಿಯ ಮೇಲೆ ಕಲ್ಪಿಸಲ್ಪಟ್ಟಿದೆ. ಈ ಎರಡು ಕ್ಷೇತ್ರಗಳಲ್ಲಿ ಒಂದು 'ಆಂತರಿಕ' ಕ್ಷೇತ್ರವಾದರೆ ಮತ್ತೊಂದು 'ಬಾಹ್ಯ' ಕ್ಷೇತ್ರ. ಅವರ ಮತ್ತೊಂದು ಅಧ್ಯಯನವಾದ The Nation and Its Fragments (೧೯೯೪)[೫] ನಲ್ಲಿ ಈ ಎರಡು ಕ್ಷೇತ್ರಗಳ ಸ್ವರೂಪವನ್ನು ಹೀಗೆ ವಿವರಿಸಿದ್ದಾರೆ,

> ವಸಾಹತುಶಾಹಿ ವಿರೋಧಿ ರಾಷ್ಟ್ರೀಯತೆ ಸಾರ್ವಭೌಮತ್ವದ ವಿರುದ್ಧ ರಾಜಕೀಯ ಹೋರಾಟವನ್ನು ಆರಂಭಿಸುವ ಮೊದಲು ವಸಾಹತುಶಾಹಿ ಸಮಾಜದ ಒಳಗಡೆ ತನ್ನದೇ ಆದ ಅಧಿಪತ್ಯವನ್ನು ರಚಿಸಿಕೊಳ್ಳುತ್ತದೆ. ಸಾಮಾಜಿಕ ಸಂಸ್ಥೆಗಳನ್ನು ಹಾಗೂ ಆಚಾರಗಳನ್ನು ಎರಡು ಕ್ಷೇತ್ರಗಳನ್ನಾಗಿ

> ವಿಭಜಿಸುವುದರ ಮೂಲಕ ಈ ಅಧಿಪತ್ಯವನ್ನು ಸಾಧಿಸುತ್ತದೆ. ಈ ಎರಡೂ ಕ್ಷೇತ್ರಗಳು ಪ್ರಾಪಂಚಿಕ ಹಾಗೂ ಆಧ್ಯಾತ್ಮಿಕ ಎಂಬ ಎರಡು ಭಾಗಗಳಾಗಿ ವಿಭಜಿಸಲ್ಪಡುತ್ತವೆ. ಪ್ರಾಪಂಚಿಕವು 'ಬಾಹ್ಯ' ಕ್ಷೇತ್ರಕ್ಕೆ ಸಂಬಂಧಿಸಿದುದು. ಪಾಶ್ಚಾತ್ಯರ ಆರ್ಥಿಕ, ವಿಜ್ಞಾನ ಮತ್ತು ತಾಂತ್ರಿಕ ಶ್ರೇಷ್ಟತೆಯನ್ನು ಪೂರ್ವವು ಒಪ್ಪಿಕೊಂಡು, ಅನುಸರಿಸಲು ಪ್ರಯತ್ನಿಸುತ್ತದೆ. ಇದಕ್ಕೆ ಪರ್ಯಾಯವಾದ ಅಧ್ಯಾತ್ಮಿಕ ಕ್ಷೇತ್ರವು 'ಆಂತರಿಕ' ಕ್ಷೇತ್ರಕ್ಕೆ ಸಂಬಂಧಿಸಿದುದು. ಈ ಕ್ಷೇತ್ರವು ಸಾಂಸ್ಕೃತಿಕ ಗುರುತಿನ 'ಮೂಲಭೂತ' ಅಂಶಗಳನ್ನು ಒಳಗೊಂಡಿರುತ್ತದೆ. ಪ್ರಾಪಂಚಿಕ ಕ್ಷೇತ್ರದಲ್ಲಿ ಎಷ್ಟೊಂದು ಪ್ರಮಾಣದಲ್ಲಿ ಪಾಶ್ಚಾತ್ಯ ಕುಶಲತೆಗಳನ್ನು ಅನುಕರಿಸುತ್ತದೆಯೋ, ಅದಕ್ಕಿಂತ ಹೆಚ್ಚಿನದಾಗಿ ಅಧ್ಯಾತ್ಮಿಕ ಸಂಸ್ಕೃತಿಯ ವಿಶೇಷತೆಯನ್ನು ಕಾಪಾಡುವ ಜವಾಬ್ದಾರಿಯನ್ನು ಈ ರಾಷ್ಟ್ರೀಯತೆಯು ಪ್ರದರ್ಶಿಸುತ್ತದೆ. ಏಷ್ಯ ಹಾಗೂ ಆಫ್ರಿಕಾಗಳಲ್ಲಿನ ವಸಾಹತುಶಾಹಿ ವಿರೋಧದ ರಾಷ್ಟ್ರೀಯತೆಯ ಮೂಲಭೂತ ಲಕ್ಷಣವು ಈ ಸೂತ್ರದಿಂದ ರೂಪಿಸಲ್ಪಟ್ಟಿದೆ (ಪು. ೬).

ಪಾಶ್ಚಾತ್ಯ ಪ್ರಭುತ್ವವು ತನ್ನ ತಾಂತ್ರಿಕ, ವೈಜ್ಞಾನಿಕ, ವೈಚಾರಿಕ, ವಿಚಾರಗಳಿಂದ ಪೌರಾತ್ಯರ ಮೇಲೆ ತನ್ನ ಪ್ರಭುತ್ವವನ್ನು ಸಾಧಿಸುತ್ತದೆ. ತಾಂತ್ರಿಕ-ಶ್ರೇಷ್ಟತೆಯ ಆಧಾರದ ಮೇಲೆ ತನ್ನ ನಾಗರೀಕತೆಯು ಪೌರಾತ್ಯರಿಗಿಂತ ಉತ್ತಮವೆಂದು ಸಾಧಿಸುತ್ತದೆ. ಇದಕ್ಕೆ ಪ್ರಬಲ ವಿರೋಧವಾಗಿ ವಸಾಹತುಶಾಹಿಗೊಳಪಟ್ಟ ಜನರು (ಪ್ರಗತಿಪರ ರಾಷ್ಟ್ರೀಯತೆ ರೂವಾರಿಗಳು ಪಾಶ್ಚಾತ್ಯ/ಆಧುನಿಕ ವಿಚಾರಗಳನ್ನು ಅನುಕರಿಸಿ, ತಮ್ಮದೇ ಆದ ಗುರುತನ್ನು (identity) ರೂಪಿಸಿಕೊಂಡು ಪಾಶ್ಚಾತ್ಯದ ಬಾಹ್ಯ/ಪ್ರಾಪಂಚಿಕ ಜಗತ್ತಿಗೆ ಎದುರೇಟನ್ನು ನೀಡುವ ತಂತ್ರ ರೂಪಿಸುತ್ತಾರೆ. ಶತೃವಿನ ಜೊತೆಗೆ ಹೋರಾಡುವ ಕೂಡಾ ಅವರಿಂದಲೇ ಕಲಿತ ಅಂತರಂಗೀಕರಿಸಿಕೊಂಡ ಪರಿಕಲ್ಪನೆಗಳ, ಗ್ರಹಿಕೆಗಳ ಬಳಕೆಯಾಗುತ್ತದೆ. ಆದರೆ ಈ ಅನುಕರಣೆ ಪಾಶ್ಚಾತ್ಯರ ಅಂಧ ಅನುಕರಣೆಯಾಗಿರುವುದಿಲ್ಲ. ಪಾಶ್ಚಾತ್ಯ ಮಾದರಿಗಳನ್ನು/ವಿಚಾರಧಾರೆಗಳನ್ನು ತನ್ನ ಅನುಕೂಲಕ್ಕೆ, ಅಂದರೆ ತನ್ನ ವಿಚಾರಧಾರೆಗಳಿಗೆ, ಪೂರಕವಾಗಿ ಬಗ್ಗಿಸಿಕೊಂಡು ಅದಕ್ಕೊಂದು ರಾಷ್ಟ್ರೀಯ ಸ್ಥಾನಮಾನ ಕಲ್ಪಿಸಿಕೊಳ್ಳುತ್ತಾರೆ. ಹೀಗೆ ವಸಾಹತುಶಾಹಿಗೆ ಎದುರೇಟನ್ನು ನೀಡುವ ರಾಷ್ಟ್ರೀಯತೆಯ ತಂತ್ರವು ಆಂತರಿಕ/ಆಧ್ಯಾತ್ಮಿಕ ಕ್ಷೇತ್ರವನ್ನು ಸದಾ ಕಾಲ ಆಧುನಿಕತೆಯ "ಅನಿಷ್ಟತೆ"ಗಳಿಂದ ದೂರವಿಡಲು ಪ್ರಯತ್ನಿಸುತ್ತದೆ. ಆದ್ದರಿಂದಲೇ ಈ ಕ್ಷೇತ್ರವು ಪಾಶ್ಚಾತ್ಯರಿಗಿಂತ ಶ್ರೇಷ್ಟವಾದದು. ಇದು ಪಾಶ್ಚಾತ್ಯ ಪ್ರಭಾವದಿಂದ ಮುಕ್ತವಾದ, ತನ್ನತನದಿಂದ ರೂಪಿಸಲ್ಪಟ್ಟ ಭಾರತೀಯ ವಿಚಾರಧಾರೆ. ಇದು ಬರೀಯ ರಾಜಕೀಯ ತಂತ್ರವಾಗಿರದೆ ಭಾರತೀಯರ ಪ್ರಾಪಂಚಿಕ ಹಾಗೂ ಅಧ್ಯಾತ್ಮಿಕ ಜೀವನದ ಪ್ರತಿಯೊಂದು ಅಂಶವನ್ನು ಪ್ರಭಾವಿಸುವಲ್ಲಿ ಯಶಸ್ವಿಯಾಯಿತು. ಸಾಹಿತ್ಯ, ಪತ್ರಿಕೋದ್ಯಮ, ಸಂಸ್ಕೃತಿ, ಸ್ತ್ರೀ ಪ್ರಶ್ನೆ, ಇತ್ಯಾದಿಗಳು ಈ ವಿಚಾರಧಾರೆಯ ಪ್ರಭಾವಕ್ಕೆ ಒಳಗಾದವು (೧೯೩೪-೧೯೪೬)[೬].

ಚಟರ್ಜಿಯವರ ಪ್ರಕಾರ ಈ ಎರಡು ಕ್ಷೇತ್ರಗಳ ನಡುವೆ ಸ್ತ್ರೀ ಪ್ರಶ್ನೆಯನ್ನು ನಿಭಾಯಿಸುವ ಪ್ರಯತ್ನಗಳು ನಡೆದವು. ಬಾಹ್ಯ/ಪ್ರಾಪಂಚಿಕ ಕ್ಷೇತ್ರವು ಹೊರಗಿನದಾದರೆ, ಗೃಹವು ಆಂತರಿಕ/ಆಧ್ಯಾತ್ಮಿಕ ಕ್ಷೇತ್ರವಾಯಿತು. ಬಾಹ್ಯ ಪ್ರಪಂಚವು ಮೋಸ, ದಗಾ ಮತ್ತು ಭೌತಿಕ ಆಸಕ್ತಿಗಳಿಂದ ಕೂಡಿದ ಪುರುಷ ಕ್ಷೇತ್ರವಾದರೆ, ಗೃಹವು ಇದ್ಯಾವುದೆ ಭೌತಿಕ ಆಸಕ್ತಿಗಳಿಂದ ಮುಕ್ತವಾದ ಸ್ತ್ರೀ ಪ್ರಪಂಚ (ಪು.೬) ಈ ರೀತಿಯ ಸ್ತ್ರೀ-ಪುರುಷ ವಿಭಜನೆಗಳಿಗೆ ವಸಾಹತುಶಾಹಿ ಹಾಗೂ ರಾಷ್ಟ್ರೀಯತೆಯೂ ಹೊಸದಾಗಿ ರೂಪಿಸಿಕೊಂಡ ಪಿತೃಪ್ರಧಾನ ವ್ಯವಸ್ಥೆಯೆ ಕಾರಣ ಎಂದು ಚಟರ್ಜಿಯವರು ವಾದಿಸುತ್ತಾರೆ.

ಈ ರಾಷ್ಟ್ರೀಯತೆಯು ಸ್ತ್ರೀಯರ ಸ್ಥಾನಮಾನಗಳನ್ನು ಸುಧಾರಿಸಲು, ಅವರಿಗೆ ಆಧುನಿಕ ಶಿಕ್ಷಣ ದೊರಕಿಸಲು ಮತ್ತು ಅವರನ್ನು ಸಂಪ್ರದಾಯ, ಮೂಢ ನಂಬಿಕೆಗಳಿಂದ ಮುಕ್ತವಾಗಿಸಲು ಪ್ರಯತ್ನಿಸಿತು. ಆದರೆ ಇಂತಹ ಸಮಾಜ ಸುಧಾರಣೆಯು ಆಧುನಿಕ ಸ್ತ್ರೀಯು ಕಪಟಿಯಾಗದೆ, ಸ್ವಾರ್ಥಿಯಾಗದೆ, ಗಂಡಂದಿರನ್ನು ಶೋಷಿಸುವ, ಕುಟುಂಬವನ್ನು ನಿರ್ಲಕ್ಷಿಸುವ ಗರ್ವಿಯಾಗದೆ, ಗಂಡನಿಗೆ, ತಂದೆ-ತಾಯಂದಿರಿಗೆ, ಅತ್ತೆ-ನಾದಿನಿಯರಿಗೆ, ಮಕ್ಕಳಿಗೆ ಪ್ರೀತಿ-ಪ್ರೇಮ ನೀಡುವ, ವಿಧೇಯಳಾದ, ಸವಿನಯ ಹಾಗೂ ಸುಗುಣವತಿಯಾದ ಸ್ತ್ರೀಯಾಗಿರಬೇಕೆಂದು ಪ್ರತಿಪಾದಿಸಿತು. ಉಮ ಚಕ್ರವರ್ತಿಯವರು ಹೇಳುವ ಪ್ರಕಾರ ಹೊಸ ಕೌಟುಂಬಿಕ ವ್ಯವಸ್ಥೆಯು ಸ್ತ್ರೀಯ ಶಿಕ್ಷಣವನ್ನು ಪ್ರತಿಪಾದಿಸಿದುದು ಅವರನ್ನು ಭಾರತೀಯ ಸಂಪ್ರದಾಯವನ್ನು ಅರ್ಥಮಾಡಿಕೊಂಡು ಅದರಂತೆ ಜೀವನ ನಡೆಸಲು. ಹಾಗಾಗಿ ಶಿಕ್ಷಣದಿಂದ ಯಾವುದೇ ಉಪಯೋಗ ಅಥವಾ ಸಬಲರಾಗಲು ಅವಕಾಶಗಳಿರಲಿಲ್ಲ (೧೯೮೯-೨೧೦).[೬] ಪಿತೃಪ್ರಧಾನ ವ್ಯವಸ್ಥೆಯ ಮೂಲಭೂತ ಸಮಸ್ಯೆಗಳನ್ನು ಪರಿಹರಿಸಲು ಸುಧಾರಣವಾದಿಗಳು ಪ್ರಯತ್ನಪಡಲಿಲ್ಲ. ಹಾಗಾಗಿ, ಹೊಸ ಸ್ತ್ರೀಯ ಉಗಮವು ಹೊಸ ಪಿತೃಪ್ರಧಾನ ವ್ಯವಸ್ಥೆಯ ಚೌಕಟ್ಟಿನಲ್ಲಿಯೇ ಉಂಟಾಯಿತು. ಜೊತೆಗೆ ಈ ಹೊಸ ಸ್ತ್ರೀಯು ಆಧುನಿಕ, ಪಾಶ್ಚಾತ್ಯ ಸಮಾಜಕ್ಕೆ ತದ್ವಿರುದ್ಧವಾದ ಭಾರತೀಯ ಸಂಸ್ಕೃತಿ/ಪರಂಪರೆಯ ಪ್ರತಿನಿಧಿಯಾದಳು. ಇದರರ್ಥ ಹೊಸ ಪಿತೃಪ್ರಧಾನ ವ್ಯವಸ್ಥೆಯು ಭಾರತೀಯ ಸಂಸ್ಕೃತಿ ಮತ್ತು ಸಂಪ್ರದಾಯವನ್ನು ಹೊಸ ವಾತಾವರಣಕ್ಕೆ ತಕ್ಕಂತೆ ಮತ್ತು ಆಧುನಿಕ ಜಗತ್ತಿಗೆ ಸರಿಹೊಂದುವಂತೆ ವ್ಯಾಖ್ಯಾನಿಸಿ, ಉದಾರವಾದ ಧೋರಣೆಯನ್ನು ಪ್ರದರ್ಶಿಸಿತು. ಆದ್ದರಿಂದಲೆ ಇದಕ್ಕೆ ಸತಿ ಸಾವಿತ್ರಿ, ಶಬರಿ, ಸೀತೆಯರು ಪುರಾಣದ, ಸಂಪ್ರದಾಯನಿಷ್ಟ ಸ್ತ್ರೀಯರಾಗಿ ಕಾಣದೆ, ಮಾನವೀಯತೆ, ಪ್ರೀತಿ, ಪ್ರೇಮವನ್ನು ಮೈಗೂಡಿಸಿಕೊಂಡ, ಅನುಕರಣೀಯ ಸ್ತ್ರೀಯರಾಗಿ ಕಾಣಿಸುತ್ತಾರೆ. ರಾಷ್ಟ್ರೀಯತೆ ವಿಚಾರಧಾರೆಯ ಆಧುನಿಕ ಸ್ತ್ರೀಯರು ಅವರಂತೆ ಆದರ್ಶಪ್ರಾಯರಾಗಿ, ಗಂಡಂದಿರಿಗೆ ಪ್ರೀತಿಪಾತ್ರರಾಗಿ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಬೇಕೆಂದು ಉಪದೇಶಿಸಲ್ಪಟ್ಟರು.

ವಾಸಹತುಶಾಹಿಯ ಕೊನೆಯ ದಶಕಗಳಲ್ಲಿ ನಾಟಕಗಳನ್ನು ಬರೆದ ಕೈಲಾಸಂರು ಸಹ ಚಟರ್ಜಿಯವರ ಮಂಡಿಸಿರುವ ಬಾಹ್ಯ ಮತ್ತು ಆಂತರಿಕ ಚೌಕಟ್ಟಿನಲ್ಲಿ ಸ್ತ್ರೀಯರ ಬಗ್ಗೆ ಪರಸ್ಪರ ವಿರುದ್ಧ ಭಾವನೆಗಳನ್ನು, ಅಂದರೆ ಕಾಳಜಿ, ಕಳವಳ, ಗೌರವ, ತಿರಸ್ಕಾರಗಳನ್ನು,

ವ್ಯಕ್ತಪಡಿಸಿದ್ದಾರೆ. ಚಟರ್ಜಿಯವರ ರಾಷ್ಟ್ರೀಯತೆಯ ಚೌಕಟ್ಟಿನಲ್ಲಿ ಕೈಲಾಸಂರನ್ನು ಇಟ್ಟು ನೋಡಿದರೆ ಅವರನ್ನು ರಾಷ್ಟ್ರೀಯತೆಯ ವಕ್ತಾರ ಎಂದು ನಿಃಸಂಶಯವಾಗಿ ಹೇಳಬಹುದು. ಆದರೆ ಅದಕ್ಕೆ ಮೊದಲು ಚಟರ್ಜಿಯವರ ಕೆಲವು ಅಂಶಗಳನ್ನು ಮತ್ತಷ್ಟು ವಿಶ್ಲೇಷಣೆಗೆ ಒಳಪಡಿಸಬೇಕಾಗುತ್ತದೆ.

ಮೊದಲು ತಿಳಿಸಿದ ಹಾಗೆ ಚಟರ್ಜಿಯವರ ಅಧ್ಯಯನ ಕ್ಷೇತ್ರವು ಬ್ರಿಟೀಷರ ನೇರ ಆಡಳಿತಕ್ಕೆ ಒಳಪಟ್ಟ ಬಂಗಾಳ. ಜೊತೆಗೆ ಅವರು ಚರ್ಚಿಸುವ ಸ್ತ್ರೀ ಪ್ರಶ್ನೆಯು ಭದ್ರಲೋಕ ಮಹಿಳೆಗೆ ಸಂಬಂಧಿಸಿದ್ದು. ಹೀಗಾಗಿ ಅವರು ಚರ್ಚಿಸಿದ ಬಾಹ್ಯ ಮತ್ತು ಆಂತರಿಕ ಪರಿಕಲ್ಪನೆಗಳನ್ನು ಭಿನ್ನ, ಭಿನ್ನ, ಚಾರಿತ್ರಿಕ, ರಾಜಕೀಯ, ಸಾಮಾಜಿಕ ಹಾಗೂ ಪಿತೃಪ್ರಧಾನ ಅನುಭವಗಳನ್ನು ಹೊಂದಿದ ಪ್ರದೇಶಗಳಿಗೆ ಅನ್ವಯಿಸಲು ಸಾಧ್ಯವೆ ಎಂದು ಪರಿಶೀಲಿಸ ಬೇಕಾಗುತ್ತದೆ. ಇತಿಹಾಸಕಾರರಾದ ಜಾನಕಿ ನಾಯರವರ ಒಂದು ಅಧ್ಯಯನದಿಂದ[೬] ಭಿನ್ನ, ಭಿನ್ನ ಚಾರಿತ್ರಿಕ ಮತ್ತು ರಾಜಕೀಯ ವ್ಯವಸ್ಥೆಗಳಲ್ಲಿ ಆದ ಸಮಾಜ ಸುಧಾರಣೆ ಮತ್ತು ಸ್ತ್ರೀಗೆ ಸಂಬಂಧಿಸಿದ ಶಾಸನಗಳನ್ನು ಅಧ್ಯಯನ ಮಾಡಲು ಚಟರ್ಜಿಯರವರ ರಾಷ್ಟ್ರೀ ಯತೆಯ ಸೈದ್ಧಾಂತಿಕ ಚೌಕಟ್ಟು ಮಿತಿಯನ್ನು ಹೊಂದಿದೆ ಎಂದು ತೋರಿಸಿಕೊಟ್ಟಿದ್ದಾರೆ.

ಜಾನಕಿ ನಾಯರರ ಪ್ರಕಾರ ಸಮಾಜ ಸುಧಾರಣೆ ಮತ್ತು ಆಧುನೀಕರಣದ ಪ್ರಕ್ರಿಯೆಯು ಬ್ರಿಟೀಷರ ನೇರ ಆಡಳಿತಕ್ಕೊಳಪಡದ ಮೈಸೂರು ಸಂಸ್ಥಾನದಂತ ಪ್ರಾಂತ್ಯಗಳಲ್ಲಿ ಭಿನ್ನವಾಗಿತ್ತು. ಅವರ ಪ್ರಕಾರ ಸಮಾಜ ಸುಧಾರಣೆ ಮತ್ತು ಆಧುನೀಕರಣವು ಮೈಸೂರು ಸಂಸ್ಥಾನದ ಆಡಳಿತ ವರ್ಗದ ಪ್ರಯತ್ನಗಳಿಂದ ಆರಂಭಗೊಂಡಿತು. ಹಾಗಾಗಿ ವಸಾಹತುಶಾಹಿ ವಿರೋಧದ ಆಂತರಿಕ ಕ್ಷೇತ್ರ ತಳಹದಿಯ ಮೇಲೆ ಹುಟ್ಟಿದ ಸಮಾಜ ಸುಧಾರಣೆ ಮತ್ತು ಆಧುನೀಕರಣದ ಪ್ರಕ್ರಿಯೆಯು ಮೈಸೂರಂತಹ ಪ್ರಾಂತ್ಯಗಳಲ್ಲಿ ಪ್ರತ್ಯೇಕ ಸ್ವರೂಪವನ್ನು ಹೊಂದಿತ್ತು. ಕುಟುಂಬ, ವಿವಾಹ, ಇತ್ಯಾದಿಗಳಿಗೆ ಸಂಬಂಧಿಸಿದಂತೆ ಪುನರ್ರಚನೆಯ ಪ್ರಯತ್ನಗಳಿಗೆ ಮೈಸೂರು ಮಹಾರಾಜರ ಅಭಯ ಹಸ್ತ ಇದ್ದುದಾದ್ದರಿಂದ ಆಡಳಿತ ವರ್ಗವು, ಕುಟುಂಬದ ಆಂತರಿಕ ವಿಷಯಗಳಲ್ಲಿ ತಾನು ಹಸ್ತಕ್ಷೇಪ ಮಾಡುತ್ತಿದ್ದೇನೆ ಎಂಬ ಅರಿವಿದ್ದರು, ಶಾಸನಗಳನ್ನು ಹೊರಡಿಸಿತು. ೧೮೮೦ರ ದಶಕದಲ್ಲಿ ಮೈಸೂರು ಪ್ರಾಂತ್ಯದ ಅಭಿವೃದ್ಧಿಗಾಗಿ ಆಡಳಿತ ವರ್ಗವು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು. ಈ ಪ್ರಾಂತ್ಯದಲ್ಲಿ ಪ್ರಜಾಪ್ರಭುತ್ವೀಕರಣವು ಮತ್ತು ಸಮಾಜ ಸುಧಾರಣೆಯು ಆಡಳಿತ ವರ್ಗದ ಪ್ರಯತ್ನಗಳಿಂದ ಉಂಟಾದರೂ, ಕುಟುಂಬದ ಆಂತರಿಕ ವಿಷಯಗಳಲ್ಲಿ ಆಡಳಿತದ ಹಸ್ತಕ್ಷೇಪಕ್ಕೆ ಸ್ಥಳೀಯ ಜನರಿಂದ ಅಷ್ಟೊಂದು ವಿರೋಧ ವ್ಯಕ್ತವಾಗಲಿಲ್ಲ. ಆದರೆ ಬ್ರಿಟೀಷ್ ಪ್ರಾಂತ್ಯಗಳಲ್ಲಿ ಆಡಳಿತದ ಹಸ್ತಕ್ಷೇಪಕ್ಕೆ ಬಹಳಷ್ಟು ವಿರೋಧ ವ್ಯಕ್ತವಾಯಿತು ಎಂದು ಜಾನಕಿಯವರು ಭಾವಿಸುತ್ತಾರೆ. ಮೈಸೂರು ಪ್ರಾಂತ್ಯದಲ್ಲಿ ಹೊರಡಿಸಲ್ಪಟ್ಟ ಶಾಸನಗಳಲ್ಲಿ ದೇವದಾಸಿ ಪ್ರಶ್ನೆಯು ಮುಖ್ಯವಾಗಿತ್ತು. ದೇವದಾಸಿ ಪದ್ಧತಿಯನ್ನು ರದ್ದು ಮಾಡುವುದಕ್ಕೆ ಸಂಬಂಧಿಸಿ ದಂತೆ ಹೊರಡಿಸಿದ ಶಾಸನವು ಮತ್ತು ಅದರ ಸುತ್ತಲು ನಡೆದ ವಾದ-ವಿವಾದಗಳು, ಕುಟುಂಬ,

ಸ್ತ್ರೀಯರು ಮತ್ತು ಲಿಂಗ ಸಂಬಂಧಿ ಅಂಶಗಳಿಗೆ ಹೊಸ ತಿರುವನ್ನು ನೀಡಿತು. ಆದರೆ ಸುಧಾರಣ ಶಾಸನಗಳು ಪಿತೃಪ್ರಧಾನ ವ್ಯವಸ್ಥೆಗೆ ಯಾವುದೇ ಧಕ್ಕೆಯನ್ನುಂಟು ಮಾಡದೆ, ಅದಕ್ಕೆ ಹೊಸ ರೂಪ ನೀಡಿತು. ಪರಿಣಾಮವಾಗಿ ಲಿಂಗಸಂಬಂಧಗಳು ಮತ್ತು ಅದಕ್ಕೆ ಮೂಲವಾದ ಪಿತೃಪ್ರಧಾನ ವ್ಯವಸ್ಥೆ ಬ್ರಿಟೀಷ್ ಪ್ರಾಂತ್ಯದಲ್ಲಿಯಾಗಲಿ ಅಥವಾ ಮೈಸೂರು ಪ್ರಾಂತ್ಯದಲ್ಲಿಯಾಗಲಿ ಯಾವುದೇ ರೀತಿಯಲ್ಲಿ ಬದಲಾಗಲಿಲ್ಲ. ಬ್ರಿಟೀಷ್ ಆಡಳಿತದ ಪ್ರಾಂತ್ಯಗಳಲ್ಲಿ ಸಮಾಜ ಸುಧಾರಣೆಯ ಚಳುವಳಿಗಳು ತೀವ್ರವಾಗಿದ್ದರೆ, ಮೈಸೂರು ಪ್ರಾಂತ್ಯದಲ್ಲಿ ಕ್ಷೀಣವಾಗಿತ್ತು ಎಂಬುದು ಜಾನಕಿಯವರ ಅಭಿಪ್ರಾಯ. ದೇವದಾಸಿ ಸುಧಾರಣೆಯು ನೇರವಾಗಿ ಮೇಲ್ಜಾತಿ ಸಮುದಾಯಕ್ಕೆ ಸಂಬಂಧಿಸಿದುದಾಗಿರಲಿಲ್ಲ. ಹೀಗಾಗಿ ಮೇಲ್ಜಾತಿ ಸಮಾಜ ಸುಧಾರಕರ ಮತ್ತು ದೇವದಾಸಿ ಸಮುದಾಯದ ನಡುವಿನ ಸಾಮಾಜಿಕ ಸಂಬಂಧಗಳು ಚಟರ್ಜಿಯವರ ಗಮನಕ್ಕೆ ಬಂದಿಲ್ಲ. ಇದರ ಬಗ್ಗೆ ಮುಂದೆ ಮತ್ತಷ್ಟು ಚರ್ಚೆ ಮಾಡ ಬಹುದು.

ರಾಷ್ಟ್ರೀಯತೆ ಮತ್ತು ಸಮಾಜ ಸುಧಾರಣೆಯು ವಸಾಹತುಶಾಹಿ ಭಾರತದಾದ್ಯಂತ ಏಕರೂಪವಾಗಿತ್ತೆ? ಬಾಹ್ಯ/ಆಂತರಿಕ ಕ್ಷೇತ್ರಗಳು ಸದಾ ಕಾಲಕ್ಕೆ ಸಿದ್ಧವಾದ ಹಾಗೂ ಎಲ್ಲಾ ಮಧ್ಯಮ ವರ್ಗದಿಂದ ಅಂಗೀಕೃತವಾದ ರಾಷ್ಟ್ರೀಯತೆಯೇ? ಏಕರೂಪವಾಗಿದ್ದರೆ, ರಾಷ್ಟ್ರೀಯತೆಗೆ ಉಂಟಾದ ವಿರೋಧಗಳನ್ನು ಅರ್ಥೈಸಿಕೊಳ್ಳುವುದು ಹೇಗೆ? ಚಟರ್ಜಿಯವರ ಪ್ರಕಾರ ಮಧ್ಯಮ ವರ್ಗಕ್ಕೆ ವಸಾಹತುಶಾಹಿ ಮಾತ್ರ ಶತೃವಾಗಿತ್ತು. ವಸಾಹತುಶಾಹಿ ಭಾರತದಲ್ಲಿ ರೂಪಿಸಲ್ಪಟ್ಟ ಸಂಸ್ಕೃತಿಯನ್ನು ವಿವರಿಸಲು colonialsim/nationalism ಗಳು ಇಲ್ಲಿ ವಿವರಣಾತ್ಮಕ ಪರಿಕಲ್ಪನೆಗಳಾಗಿ ಬಳಸಲ್ಪಟ್ಟಿವೆ. ರಾಷ್ಟ್ರೀಯತೆಯ ಬೆಳವಣಿಗೆಯು ವಸಾಹತುಶಾಹಿ ಮತ್ತು ಆಧುನಿಕತೆಗೆ ಮುಖಾಮುಖಿಯಾಗಿ ನಿಂತಿದ್ದರಿಂದ ಉಂಟಾದುದು ಎಂದು ಭಾವಿಸುವುದು ಸ್ಥಳೀಯ ಚಾರಿತ್ರಿಕ ಸನ್ನಿವೇಶಗಳು, ಒತ್ತಡಗಳು ಹಾಗೂ ನಿರ್ದಿಷ್ಟ ಸಾಮಾಜಿಕ ಸಂಬಂಧಗಳ ಸ್ವರೂಪ ಹಾಗೂ ರಾಷ್ಟ್ರೀಯತೆಯನ್ನು ರೂಪಿಸುವಲ್ಲಿ ಅವು ವಹಿಸುವ ಪಾತ್ರವನ್ನು ಗೌಣವಾಗಿಸುವ ಅಪಾಯ ಇರುತ್ತದೆ. ಜೊತೆಗೆ ಆಧುನಿಕತೆಗೆ ಮೈ ಒಡ್ಡಿದ ಬ್ರಾಹ್ಮಣ ಮಧ್ಯಮವರ್ಗವು ಬರಿಯ ಅನುಕರಣೆಯಲ್ಲಿ ನಿರತವಾಗಿರಲಿಲ್ಲ. ಆಧುನಿಕತೆಯನ್ನು ತನಗೆ ಒಗ್ಗಿಕೊಳ್ಳುವಂತೆ ಮಾಡುತ್ತಾ, ಅದನ್ನು ರೂಪಿಸುವಲ್ಲಿ ಮಹತ್ತರ ಪಾತ್ರವನ್ನು ವಹಿಸಿತು. ತನ್ನ ಆಧುನಿಕತೆಗೆ ಅನುಗುಣವಾಗಿ ರಾಷ್ಟ್ರೀಯತೆಯನ್ನು ಕಲ್ಪಿಸಿಕೊಳ್ಳುವ ಚಾರಿತ್ರಿಕ ಘಟನೆಯನ್ನು ವಸಾಹತುಶಾಹಿ-ವಿರೋಧಿ ಎಂಬ ಚೌಕಟ್ಟಿನಲ್ಲಿ ಅರ್ಥೈಸಿಕೊಳ್ಳುವುದು ಸಮಸ್ಯಾತ್ಮಕವಾಗುತ್ತದೆ. ಸಂಜಯ್ ಜೋಷಿಯವರು ಚಟರ್ಜಿಯವರ ರಾಷ್ಟ್ರೀಯತೆ ಮಿತಿಯನ್ನು ಮತ್ತೊಂದು ರೀತಿಯಲ್ಲಿ ತೋರಿದ್ದಾರೆ. ಅವರ ಪ್ರಕಾರ,

> ಚಟರ್ಜಿಯವರ ವಿಶ್ಲೇಷಣಾ ಚೌಕಟ್ಟು, ರಾಷ್ಟ್ರೀಯತೆಯ ತಳಹದಿಯ ಮೇಲೆ ನಿಂತಿದೆ. ಹಾಗಾಗಿ ಅಂತಿಮವಾಗಿ ಚಟರ್ಜಿಯವರಿಗೆ ಮಧ್ಯಮ ವರ್ಗದ ನಿರ್ದಿಷ್ಟ ರಾಜಕೀಯವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾ

> ಗುವುದು ರಾಷ್ಟ್ರೀಯವಾದಿಗಳು ಹಾಗೂ ವಸಾಹತುಶಾಹಿ ನಡುವಿನ ಸಂಘರ್ಷದ ಮೂಲಕ. ರಾಷ್ಟ್ರೀಯತೆಗೆ ಪ್ರಮುಖ ಸ್ಥಾನವನ್ನು ನೀಡುವುದರಿಂದ ಮಧ್ಯಮ ವರ್ಗದ ಯಜಮಾನಿಕೆಯ ಹಿತಾಸಕ್ತಿಗಳು ಅಮೂಲ್ಯವಾಗುತ್ತದೆ. (೨೦೦೨-೬)[೯]

ಜೋಷಿಯವರು ಮಾಧ್ಯಮ ವರ್ಗದ ಯಜಮಾನಿಕೆಯ ಹಿತಾಸಕ್ತಿಗಳ ಬಗ್ಗೆ ನಮ್ಮ ಗಮನ ಹರಿಸಿರುವುದು ಗಮನಾರ್ಹವಾಗಿದೆ. ಅಂದರೆ ಮಧ್ಯಮ ವರ್ಗದ ರಾಷ್ಟ್ರೀಯತೆಯು ಬರೀಯ ವಸಾಹತುಶಾಹಿ ವಿರೋಧಿಯಾಗಿರದೆ, ತನ್ನ ಸ್ವ-ಹಿತಾಸಕ್ತಿಗಳನ್ನು ಪೂರೈಸಿಕೊಳ್ಳುವುದಕ್ಕೂ ಹಾತೊರೆಯುತ್ತಿರುತ್ತದೆ. ಈ ಸ್ವ-ಹಿತಾಸ್ತಕ್ತಿಗಳು ತನ್ನ ಸಮುದಾಯದ ಗುರುತಿಗೆ ಅಥವಾ ಬೇರೆ ಸಮುದಾಯಗಳನ್ನು ಎದುರಿಸುವ ತಂತ್ರಗಳಿಗೆ ಸಂಬಂಧಿಸಿದ್ದಿರಬಹುದು.

ರಾಷ್ಟ್ರೀಯತೆ, ಮಧ್ಯಮವರ್ಗ ಹಾಗೂ ಬಾಹ್ಯ/ಆಂತರಿಕ ಪರಿಕಲ್ಪನೆಗಳು ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ಸಂಸ್ಕೃತಿಗಳು, ಸಮುದಾಯಗಳು/ಜಾತಿಗಳು, ಧರ್ಮಗಳು ಹಾಗೂ ಪ್ರಾಂತೀಯಗಳ ನಡುವಿನ ಮಂಥನ, ಸಂಘರ್ಷ ಅಥವಾ ಸಹಕಾರದಿಂದ ರೂಪಿಸಲ್ಪಡುವ ಘಟಕಗಳು ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಅಂದರೆ ರಾಷ್ಟ್ರೀಯತೆ, ಬಾಹ್ಯ/ಆಂತರಿಕ ಕಲ್ಪನೆಗಳನ್ನು ರೂಪಿಸುವ ಮಧ್ಯಮ ವರ್ಗವು ಏಕೀಕೃತ/ಏಕರೂಪವುಳ್ಳ ವರ್ಗವಲ್ಲ. ಅದು ಆಂತರಿಕ ಭೇದಗಳನ್ನು (ಲಿಂಗ, ಜಾತಿ, ಧರ್ಮ, ಇತ್ಯಾದಿ ಆಧಾರಿತ) ಒಳಗೊಂಡು ಇತರ ಮಧ್ಯಮ ವರ್ಗಗಳಿಗೆ ಸಂಬಂಧಿಸಿದಂತೆ ತನ್ನನ್ನು ತಾನು ರೂಪಿಸಿಕೊಳ್ಳುತ್ತಿರುತ್ತದೆ. ಇದರರ್ಥ ನಾವು ಅನೇಕ ಮಧ್ಯಮ ವರ್ಗಗಳ ಅಸ್ತಿತ್ವವನ್ನು ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ. ಜೊತೆಗೆ ಒಂದು ಮಧ್ಯಮ ವರ್ಗವು ತನ್ನನ್ನು ತಾನು ಗುರುತಿಸಿಕೊಳ್ಳಲು ಅನೇಕ ಆಸರೆಗಳನ್ನೊಳಗೊಂಡಿರುತ್ತದೆ. ಉಪಜಾತಿಗಳು, ಧರ್ಮ, ಪ್ರಾಂತ, ಭಾಷೆ, ಇತ್ಯಾದಿಗಳ ಆಧಾರದ ಮೇಲೆ ಮಧ್ಯಮ ವರ್ಗವು ಸಾಂಸ್ಕೃತಿಕ ಅಥವಾ ರಾಜಕೀಯ ಪಾತ್ರವನ್ನು ನಿರ್ವಹಿಸುತ್ತದೆ. ಒಂದು ಸಮಾಜದಲ್ಲಿ ವಿವಿಧ ಮಧ್ಯಮ ವರ್ಗಗಳಿದ್ದಾಗ, ವರ್ಗದ ಹಿತಾಸಕ್ತಿಗಳು ಸಹ ವಿವಿಧವಾಗಿರುತ್ತವೆ. ಹೀಗಾಗಿ ತಮ್ಮ, ತಮ್ಮ ಹಿತಾಸಕ್ತಿಗಳನ್ನು (ಗುರುತಿನ ಕಲ್ಪನೆ, ತನ್ನ ಸಾಹಿತ್ಯದ ಪುನರ್‌ರಚನೆ, ರಾಜಕೀಯ-ಆರ್ಥಿಕ ಲಾಭಗಳು, ಮೇಲ್ತರಗಲೆಯನ್ನು ತಲುಪುವ ಗುರಿ, ಸಾಂಸ್ಕೃತಿಕ ಯಾಜಮಾನಿಕೆ) ಸಾಧಿಸಲು ಇತರ ಮಧ್ಯಮ ವರ್ಗಗಳ ಜೊತೆಗೆ ಪೈಪೋಟಿಗಿಳಿಯಬಹುದು[೧೦] ಅಥವಾ ಸಹಕರಿಸಬಹುದು. ಇದ್ಯಾವುದು ಸಾಧ್ಯವಾಗದಿದ್ದರೆ ಎದುರಾಳಿಯನ್ನು ಒಳಗಾಗಿಸಿಕೊಳ್ಳುವ ತಂತ್ರಗಳನ್ನು ರೂಪಿಸಿಕೊಳ್ಳಬಹುದು.

ವಸಾಹತುಶಾಹಿ ಕಾಲದಲ್ಲಿನ ಸಮಾಜ ಸುಧಾರಣೆ ಮಧ್ಯಮ ವರ್ಗ ವಿದ್ಯಾವಂತರ ರಾಷ್ಟ್ರೀಯತೆ ಪರಿಣಾಮ ಎಂದು ಭಾವಿಸಿರುವ ಚಟರ್ಜಿಯವರು ಅದೇ ಮಧ್ಯಮ ವರ್ಗದ ಸಂಪ್ರದಾಯಸ್ಥರು ಮತ್ತು ಅವರ ಆಧುನಿಕತೆಗೆ ಪ್ರತಿಕ್ರಿಯಿಸಿದುದರ ರೀತಿ, ಅವರ ನಡುವೆ ಇದ್ದ ವ್ಯತ್ಯಾಸಗಳು ಮತ್ತು ಸಂಘರ್ಷಗಳ ಬಗ್ಗೆ ಹೆಚ್ಚಿನ ಗಮನಹರಿಸುವುದಿಲ್ಲ.

ಪರಿಣಾಮವಾಗಿ ರಾಷ್ಟ್ರೀಯತೆ ಹಾಗೂ ಅದು ಕಲ್ಪಿಸಿಕೊಳ್ಳುವ ಬಾಹ್ಯ ಮತ್ತು ಆಂತರಿಕ ಕ್ಷೇತ್ರಗಳು ಯಾವುದೇ ಸಂಘರ್ಷವಿಲ್ಲದ, ಎಲ್ಲರಿಂದಲೂ ಅಂಗೀಕೃತವಾದ ಘಟಕಗಳಾಗಿ ಕಾಣಿಸುತ್ತವೆ.

ನಾವು ತಿಳಿಯಬೇಕಾದುದೇನೆಂದರೆ ವಸಾಹತುಶಾಹಿ ವಿರುದ್ಧದ ರಾಷ್ಟ್ರೀಯತೆ ಮತ್ತು ಅದು ಕಲ್ಪಿಸಿಕೊಂಡು ಬಾಹ್ಯ ಮತ್ತು ಆಂತರಿಕ ದ್ವಿ-ವಿರೋಧಿ ಕ್ಷೇತ್ರಗಳು ಸಂಘರ್ಷ ವಲಯಗಳಾಗಿವೆ. ರಾಷ್ಟ್ರೀಯತೆ, ಬಾಹ್ಯ ಮತ್ತು ಆಂತರಿಕ ಕಲ್ಪನೆಗಳು ಏಕ ಸಮುದಾಯ/ಮಧ್ಯಮ ವರ್ಗಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಇತರ ಅನೇಕ ಸಮುದಾಯ/ಮಧ್ಯಮ ವರ್ಗಗಳೂ ಸಹ ರಾಷ್ಟ್ರೀಯತೆಯನ್ನು ಅಭಿವ್ಯಕ್ತಿಸಿವೆ ಮತ್ತು ಹೀಗೆ ಅಭಿವ್ಯಕ್ತಿಸುವ ಪ್ರಕ್ರಿಯೆಯಲ್ಲಿ ಸಮುದಾಯಕ್ಕೆ ಅನುಕೂಲವಾಗುವ ಬಾಹ್ಯ/ಆಂತರಿಕ ಕ್ಷೇತ್ರಗಳನ್ನು ರೂಪಿಸಿಕೊಂಡಿವೆ. ಹೀಗೆ ರೂಪುಗೊಂಡ ಬಾಹ್ಯ ಮತ್ತು ಆಂತರಿಕ ಕ್ಷೇತ್ರಗಳು ಒಂದನ್ನೊಂದು ತಾಕಲಾಡುವ, ಮುಖಾಮುಖಿಯಾಗುವ, ಸಂವಾದಿಸುವ, ಪ್ರಭಾವಿಸುವ ಹಾಗೂ ಪ್ರಭಾವಿತ ವಾಗುವ ಲಕ್ಷಣಗಳನ್ನು ಹೊಂದಿವೆ.

ದಕ್ಷಿಣ ಭಾರತದ ತಮಿಳುನಾಡಿನಲ್ಲಿ ನಡೆಯುತ್ತಿದ್ದ Self-Respect Movement (೧೯೨೦ರ ದಶಕಗಳಲ್ಲಿ) ಪ್ರತಿಪಾದಕರು ಮತ್ತು ಅನುಯಾಯಿಗಳು ಸಹ ಚಟರ್ಜಿಯವರು ವಿವರಿಸುವ ರಾಷ್ಟ್ರೀಯತೆಗೆ ಪ್ರಬಲ ಎದಿರೇಟನ್ನು ನೀಡಿದರು. ಎಸ್. ಆನಂದಿಯವರ ಪ್ರಕಾರ "ಸ್ವ-ಗೌರವ ಚಳುವಳಿಯು ಸ್ತ್ರೀಯರ ಬಗ್ಗೆ ತಾಳಿದ ನಿಲುವು, ರಾಷ್ಟ್ರೀಯತೆ ಚಳುವಳಿಗೆ ತೀವ್ರ ರೀತಿಯಲ್ಲಿ ವಿರುದ್ಧವಾಗಿತ್ತು. ರಾಷ್ಟ್ರೀಯತೆ ಚಳುವಳಿಯ ಪಿತೃಪ್ರಧಾನ ಸಂಸ್ಥೆಗಳಾದ ಕುಟುಂಬ ಮದುವೆ ಹಾಗೂ ಪಾತಿವ್ರತ್ಯವನ್ನು ಪ್ರತಿಪಾದಿಸಿತು. ಆದರೆ ಸ್ವ-ಗೌರವ ಚಳುವಳಿಯ ಪೆರಿಯಾರ್ ಮತ್ತು ಆತನ ಅನುಯಾಯಿಗಳು ಅಂತಹ ಪಿತೃಪ್ರಧಾನ ಸಂಸ್ಥೆಯನ್ನು ಬಲವಾಗಿ ಪ್ರಶ್ನಿಸಿದರು. ಸ್ವ-ಗೌರವ ಮದುವೆಗಳ ಮೂಲಕ ಈ ಸಂಸ್ಥೆಗಳನ್ನು ವ್ಯವಸ್ಥಿತವಾಗಿ ವಿರೋಧಿಸಿದರು. ಮಹಿಳೆಯರನ್ನು ರಾಜಕೀಯಕ್ಕಾಗಿ ಸಂಘಟಿಸಲು ರಾಷ್ಟ್ರೀಯತೆಯ ನಾಯಕರು ಪಿತೃಪ್ರಧಾನ ವ್ಯವಸ್ಥೆಯನ್ನು ಸಂರಕ್ಷಿಸಿದರೆ, ಸ್ವ-ಗೌರವ ಚಳುವಳಿಯು ಅದೇ ಪಿತೃಪ್ರಧಾನ ವ್ಯವಸ್ಥೆಗೆ ಸವಾಲೆಸೆಯಿತು" (೧೯೯೧ : ಪು. ೩೮).[೧೧] ವಿಶೇಷವೇನೆಂದರೆ Self-Respect Movement ತನ್ನದೆ ಆದ ಬಾಹ್ಯ ಮತ್ತು ಆಂತರಿಕ ಕ್ಷೇತ್ರಗಳನ್ನು ರೂಪಿಸಿಕೊಂಡಿತು. ಪೆರಿಯಾರ್ ರಾಮಸ್ವಾಮಿಯವರ ಹಿಂದು ಧರ್ಮದ ಬಗ್ಗೆ ಇದ್ದ ಚಿಂತನೆಗಳು ಇದಕ್ಕೆ ಸಾಕ್ಷಿ. ಚಟರ್ಜಿಯವರು ವಿವರಿಸುವ ರಾಷ್ಟ್ರೀಯತೆಯ ವಿಚಾರಧಾರೆಯಿಂದ ಪ್ರಭಾವಿಸಲ್ಪಟ್ಟ ಸಮಾಜ ಸುಧಾರಣೆಯೂ ಇತರ ಸಮುದಾಯದ/ವರ್ಗಗಳಿಂದಲು ಬಿಕ್ಕಟ್ಟನ್ನು ಎದುರಿಸಬೇಕಾಯಿತು. ಇದಕ್ಕೆ ಪ್ರಮುಖ ಕಾರಣ ಈ ಸಮಾಜ ಸುಧಾರಣೆಯು ಇತರ ವರ್ಗಗಳನ್ನು ತನ್ನ ತೆಕ್ಕೆಯಲ್ಲಿ ಹಾಕಿಕೊಳ್ಳುವ ಪ್ರಯತ್ನಗಳನ್ನು ಮಾಡಿದ್ದು. ಇಂತಹ ಸಮಾಜ ಸುಧಾರಣೆಯು ರಾಷ್ಟ್ರೀಯತೆಯ ಮೂಲವಾದ್ದರಿಂದ ಮತ್ತು ಬ್ರಾಹ್ಮಣರಿಂದ ತುಂಬಿದ್ದರಿಂದ, ಸಮಾಜ ಸುಧಾರಣೆಗೆ ವಸ್ತುವಾಗಿದ್ದ ಇತರ ವರ್ಗದ

ಸ್ತ್ರೀಯರು, ವಿಶೇಷವಾಗಿ ದೇವದಾಸಿ/ವೇಶ್ಯೆಯರು ಹಾಗೂ ಪುರುಷರು, ಸಮಾಜ ಸುಧಾರಣೆಗೆ ಭಿನ್ನ, ಭಿನ್ನವಾಗಿ ಪ್ರತಿಕ್ರಿಯಿಸಿದರು. ದೇವದಾಸಿ ಹಿನ್ನೆಲೆಯ ಸಮುದಾಯಗಳಲ್ಲಿ ಕೆಲವರು ಸಮಾಜ ಸುಧಾರಣೆಗೆ ಬೆಂಬಲವಿತ್ತರೆ, ಅದೇ ಸಮುದಾಯದ ಇನ್ನು ಕೆಲವರು ಯಾವುದೇ ಸಮಾಜ ಸುಧಾರಣೆಗೆ ಬಲವಾಗಿ ವಿರೋಧಿಸಿದರು. ಇಲ್ಲಿ ಗಮನಿಸಬೇಕಾದುದೇನೆಂದರೆ ರಾಷ್ಟ್ರೀಯತೆ ಅಥವಾ ಬಾಹ್ಯ ಮತ್ತು ಆಂತರಿಕ ಪರಿಕಲ್ಪನೆಗಳು ಸಮುದಾಯದ/ವರ್ಗದ ಗುರುತನ್ನು ಕಲ್ಪಿಸಿಕೊಳ್ಳುವ ಹತ್ಯಾರುಗಳಾಗಿವೆ. ಹೀಗಾಗಿ ಇತರ ಸಮುದಾಯ/ವರ್ಗವನ್ನು ಸಂಕೇತಗಳು, ಧರ್ಮ, ಸಂಪ್ರದಾಯ, ಜಾತಿಗಳ ಆಧಾರದ ಮೇಲೆ ದೂಷಿಸುವ ಮತ್ತು ತನ್ನ ಯಜಮಾನಿಕೆಯನ್ನು ಸಾಧಿಸುವ ತಂತ್ರಗಳನ್ನು ಇಲ್ಲಿ ಕಾಣಬಹುದು.

ಮೇಲೆ ತಿಳಿಸಿದ ಹಾಗೆ ಬ್ರಾಹ್ಮಣ ಸಮುದಾಯವು "ಸಂಪ್ರದಾಯ" ಮತ್ತು "ಪ್ರಗತಿಪರ" ಮಧ್ಯಮ ವರ್ಗಗಳೆರಡನ್ನು ಹೊಂದಿತ್ತು. ಇಬ್ಬರಲ್ಲಿ ವ್ಯತ್ಯಾಸ ಕಂಡುಬರುವುದು ತಮ್ಮ ವಿಚಾರಗಳನ್ನು ಅರ್ಥೈಸಿಕೊಳ್ಳುವಲ್ಲಿ ಮತ್ತು ಅವುಗಳನ್ನು ಅಳವಡಿಸಿಕೊಳ್ಳುವಲ್ಲಿ. ಹಾಗಾಗಿ "ಪ್ರಗತಿಪರ" ಮಧ್ಯಮ ವರ್ಗದವರು ತನ್ನ ಸಮುದಾಯದ ಸುಧಾರಣೆಗೆ ಪ್ರಯತ್ನಪಟ್ಟರೆ, "ಸಂಪ್ರದಾಯಸ್ಥ"ರು ಅದನ್ನು ವಿರೋಧಿಸಿದುದಕ್ಕೆ ಕಾರಣ ಇತರರ ಮೇಲೆ ಯಜಮಾನಿಕೆಯು ಸಡಿಲಿಸಿತೆಂಬ ಆಂತಕ ಇದ್ದುದರಿಂದ. ಇದಲ್ಲಕ್ಕಿಂತ ಮೊದಲು ಬ್ರಾಹ್ಮಣರ ಸಮಾಜ ಸುಧಾರಣೆಯು ವಿಚಾರಧಾರೆಯು ಎಷ್ಟೊಂದು ಪ್ರಗತಿಪರವಾಗಿತ್ತು ಎಂದು ಪರೀಕ್ಷಿಸಬೇಕಾಗುತ್ತದೆ. ಕೈಲಾಸಂ ನಾಟಕಗಳಲ್ಲಿ ಕಂಡುಬರುವ ಪ್ರಗತಿಪರ ಅಥವಾ ಕ್ರಾಂತಿಕಾರಕ ವಿಚಾರಗಳು ಸಂಪ್ರದಾಯಸ್ಥ ಮಧ್ಯಮ ವರ್ಗದವರ ವಿರುದ್ಧ ಇದ್ದರೂ ತಾವು ಮಂಡಿಸುವ ವಿಚಾರಗಳು ಮತ್ತು ಆರಾಧಿಸುವ ಪೌರಾಣಿಕ ವ್ಯಕ್ತಿಗಳು ವಿಶಾಲ ಬ್ರಾಹ್ಮಣ ಸಮುದಾಯದ/ವರ್ಗದ ವಾತಾವರಣದಿಂದ ನಿರ್ಮಿಸಲ್ಪಟ್ಟಿತ್ತು.

ಕೈಲಾಸಂರನ್ನು ಬರಿಯ ಸಮಾಜ ಸುಧಾರಕ, ಹಾಸ್ಯ ನಾಟಕಕಾರ ಅಥವಾ ನಾಟಕ ರಂಗದ ಉದ್ಧಾರಕ ಎಂದು ಭಾವಿಸಿದರೆ, ಅವರು ಆಗಿನ ಮೈಸೂರು ಸಂಸ್ಥಾನದ ಸರಕಾರಿ ಹುದ್ದೆಗಳಲ್ಲಿ ಮತ್ತು ಸಾರ್ವಜನಿಕ ಶಿಕ್ಷಣದಲ್ಲಿ ಸಮುದಾಯ ಆಧಾರಿತ ಮೀಸಲಾತಿಗೆ ಒತ್ತಾಯಿಸುತ್ತಿದ್ದ ಬ್ರಾಹ್ಮಣೇತರ ಚಳುವಳಿ, ಭಾರತಾದ್ಯಂತ ಆಗುತ್ತಿದ್ದ ಸ್ತ್ರೀ ಸುಧಾರಣ ವಾದ-ವಿವಾದಗಳು ಮತ್ತು ಅದಕ್ಕೆ ಸಂಬಂಧಿಸಿದ ಶಾಸನಗಳಿಗೆ ತಮ್ಮದೇ ಆದ ರೀತಿಯಲ್ಲಿ ಅಭಿವ್ಯಕ್ತಿಸಿರುವ ವಿಚಾರಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗದಿರಬಹುದು. ಕೈಲಾಸಂರಂತ ಪ್ರಗತಿಪರ ಚಿಂತನಕಾರರು ಮತ್ತು ಲೇಖಕರು 'ಜಾತ್ಯಾತೀತ' ಸ್ವ ವನ್ನು ಕಟ್ಟಿಕೊಳ್ಳುವ ಮುಖಾಂತರ ಬ್ರಾಹ್ಮಣೇತರ (ಶೂದ್ರ) ವಿಚಾರಧಾರೆಗಳಿಗೆ ಪ್ರತಿಕ್ರಿಯಿಸಿದರು. ಈ ಪ್ರತಿಕ್ರಿಯೆಗಳು ಬ್ರಾಹ್ಮಣೇತರರನ್ನು ಒಳಗಾಗಿಸಿಕೊಳ್ಳುವ/ಸ್ವಾಧೀನಗೊಳಿಸಿಕೊಳ್ಳುವ ಉದಾರವಾದಿ ಮನೋಭಾವನೆಯನ್ನು ಪ್ರದರ್ಶಿಸುತ್ತವೆ. ಕೈಲಾಸಂರ ನಾಟಕಗಳಲ್ಲಿ ವ್ಯಕ್ತವಾಗಿರುವ ಉದಾರವಾದಿತನವನ್ನು ವಿಶ್ಲೇಷಿಸುವ ಮೊದಲು ಜಾತ್ಯಾತೀತ ಸ್ವ ದ ಬಗ್ಗೆ ತಿಳಿದುಕೊಳ್ಳೋಣ.

ವಿವೇಕ್ ಧಾರೇಶ್ವರರ[೨] ಪ್ರಕಾರ ಜಾತ್ಯಾತೀತ ಸ್ವ ವು ಜಾತಿಯನ್ನು ಅಡಗಿಸುವ ಧೋರಣೆಯನ್ನು ಪ್ರದರ್ಶಿಸುತ್ತದೆ. ಜಾತಿಯು 'ಅನುಭವ-ಅಂತರ' (experience-distant) ಪರಿಕಲ್ಪನೆ. ಅಂದರೆ ಆಧುನಿಕ ಅನುಭವಗಳಲ್ಲಿ ಜಾತಿಯ ಪಾತ್ರ ಬಹು ಮುಖ್ಯವಾಗಿದ್ದರು, ಅದರ ಪಾತ್ರವನ್ನು ಮಾನ್ಯೀಕರಿಸದೇ ಅಡಗಿಸುವುದು ಎಂದರ್ಥ. ಜಾತಿಯನ್ನು ಅಡಗಿಸುವ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಎರಡು ಅಂಶಗಳನ್ನು ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ. ೧. ಜಾತ್ಯಾತೀತ ಸ್ವವನ್ನು ರೂಪಿಸುವ ಕಾಲ್ಪನಿಕ ಕ್ಷಿತಿಜವು ಜಾತಿಯೆಂಬ ಸಾಮಾಜಿಕ ಸಂಸ್ಥೆಯನ್ನು ಸಾರ್ವಜನಿಕವಾಗಿ ಮತ್ತು ರಾಜಕೀಯವಾಗಿ ನಿರಾಕರಿಸಿ ಸ್ತಬ್ಧಗೊಳಿಸುವ ಕ್ರಿಯೆ. ಮತ್ತು ೨. ಗಣ್ಯರು ಆಧುನಿಕತೆಯ ಸಾಂಕೇತಿಕವನ್ನು ಶೋಧಿಸಿ/ಸ್ವಾಧೀನಗೊಳಿಸಿಕೊಂಡು ಜಾತಿಯನ್ನು ಹೆಸರಿಸುವ, ವಿಂಗಡಿಸುವ ಮತ್ತು ಪ್ರತಿನಿಧಿಸುವ ಅಧಿಕಾರವನ್ನು ಪಡೆಯುವ ಕುಶಲತೆಗಳು. ಅಂದರೆ ಜಾತಿಯನ್ನು ಸಾರ್ವಜನಿಕ/ರಾಜಕೀಯವಾಗಿ ಅಂಗೀಕರಿಸದೆ, ಅದನ್ನು ಜಾತ್ಯತೀತ ಸ್ವ ಕ್ಕೆ ಅನುಕೂಲವಾಗುವಂತೆ ವಿಂಗಡಿಸಿ, ಪ್ರತಿನಿಧಿಸುವ ಅಧಿಕಾರವನ್ನು ಪ್ರದರ್ಶಿಸುತ್ತದೆ. ಉದಾರವಾದಿ ಪ್ರಗತಿಪರ ಕಥನಗಳು ಇಂತಹ ಸ್ವ-ನಿರ್ಮಾಣದ ಪಥವನ್ನು ಸೂಚಿಸುತ್ತದೆ. ಈ ಸ್ವ-ನಿರ್ಮಾಣದ ಪ್ರಕ್ರಿಯೆಯಲ್ಲಿ ಸ್ವ ವು ನಾಗರೀಕ ಅಥವಾ ವ್ಯಕ್ತಿಯ ಅಮೂರ್ತ ಗುರುತನ್ನು ಪಡೆಯುತ್ತದೆ. ಹೀಗೆ ಆಧುನಿಕ ವಿಚಾರಧಾರೆಗಳಿಂದ ಪ್ರಭಾವಿಸಲ್ಪಟ್ಟ ವ್ಯಕ್ತಿಯು ಸಾರ್ವಜನಿಕ ವಲಯದಲ್ಲಿ ಜಾತಿಯ ಗುರುತುಗಳನ್ನು ಮೀರಿ ಜಾತ್ಯಾತೀತವಾಗುವ ಆಸಕ್ತಿಯನ್ನು ಪ್ರದರ್ಶಿಸುತ್ತದೆ.

ಕೈಲಾಸಂರ ಜಾತ್ಯತೀತ ಸ್ವದ ಸ್ವರೂಪವನ್ನು ಅರಿಯಬೇಕಾದರೆ ಕೆಳಗಿನ ಅಂಶಗಳನ್ನು ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ :

೧. ತಾವು ಸಂಪ್ರದಾಯಸ್ಥ ಬ್ರಾಹ್ಮಣರಿಂದ ಭಿನ್ನ ಎಂದು ತೋರಿಸಿಕೊಳ್ಳುವುದರ ರೀತಿ,
೨. ಹಿಂದೂ ಸಂಪ್ರದಾಯದ ಪುರಾಣಗಳನ್ನು ಮರು ವ್ಯಾಖ್ಯಾನಿಸಿದುದರ ಮನೋಭೂಮಿಕೆ,
೩. ಶೂದ್ರರನ್ನು ರಮ್ಯ ಮತ್ತು ಉದಾರವಾದಿತನದಿಂದ ಚಿತ್ರೀಕರಿಸಿದುದರ ಹಿಂದಿನ ಚಾರಿತ್ರಿಕ ಕಾರಣಗಳು.

ಮುಂದಿನ ಚರ್ಚೆಯು ಮೇಲಿನ ಮೂರು ಅಂಶಗಳನ್ನು ವಿವರಿಸುತ್ತಾ, ಸ್ತ್ರೀ ಪ್ರಶ್ನೆಯು ಹೇಗೆ ಕೈಲಾಸಂರ ಜಾತ್ಯತೀತ ಸ್ವ ವನ್ನು ರೂಪಿಸಿಕೊಳ್ಳಲು ತಳಹದಿಯಾದವು ಎಂದು ನಿರೂಪಿಸಲಾಗಿದೆ.

## ಭಾಗ-ಮೂರು

### ಕೈಲಾಸಂ ನಾಟಕಗಳು, ಸಮಾಜ ಸುಧಾರಣೆ ಮತ್ತು ಸ್ತ್ರೀ ಪಾತ್ರಗಳು

ವಸಾಹತುಶಾಹಿ ಕನ್ನಡ ಸಾಹಿತ್ಯದಲ್ಲಿ ಸಮಾಜ ಸುಧಾರಕ ಅಂಶಗಳನ್ನು ಅಧ್ಯಯನ ಮಾಡುವಾಗ ಕೆಲವೊಂದು ವಿಷಯಗಳ ಬಗ್ಗೆ ಗಮನಹರಿಸಬೇಕಾಗುತ್ತದೆ. ಈ ಕಾಲದಲ್ಲಿ ಬರೆಯಲ್ಪಟ್ಟ ಸಮಾಜ ಸುಧಾರಣೆಯ ಸಾಹಿತ್ಯ ಕೃತಿಗಳನ್ನು ಎರಡು ಹಂತಗಳನ್ನಾಗಿ

ವಿಭಾಗಿಸಿಕೊಳ್ಳಬೇಕಾಗುತ್ತದೆ. ಈ ಎರಡು ಹಂತಗಳನ್ನು ವಿವರಿಸುತ್ತಾ ಎಸ್. ಚಂದ್ರಶೇಖರ್‌ರವರು ಮೊದಲ ಹಂತದ ಸಮಾಜ ಸುಧಾರಕ ಕೃತಿಗಳಲ್ಲಿ ಮತ್ತು ಲೇಖಕರಲ್ಲಿದ್ದ ದ್ವಂದ್ವಗಳನ್ನು ಹೀಗೆ ಪ್ರಸ್ತಾಪಿಸುತ್ತಾರೆ,

> ಕರ್ನಾಟಕದ ಲೇಖಕ ವರ್ಗವು ತಿಳಕವಾದಿಯಾಗಿತ್ತು. ಶಿವಾಜಿ, ಗಣೇಶ ಪೂಜೆ, ವೈದಿಕ ಧರ್ಮ ಮತ್ತು ಸಂಸ್ಕೃತಿಯನ್ನು ಪುನರ್ ಸ್ಥಾಪಿಸುವಲ್ಲಿ ಅವರಿಗೆ ವಿಶೇಷ ಆಸಕ್ತಿ ಇತ್ತು. ಅಂದರೆ ತಮ್ಮ ಲೇಖನಗಳಲ್ಲಿ ಸಮಾಜ ಸುಧಾರಕ ಅಂಶಗಳನ್ನೂ ಸಹ ಅಭಿವ್ಯಕ್ತಿಸುತ್ತಿದ್ದರು. ಅವರಿಗೆ ಸಮಾಜ ಸುಧಾರಣೆಯು ಮುಖ್ಯವಾಗಿತ್ತು. ಆದರೆ ಈ ಸಮಾಜ ಸುಧಾರಕ ಅಂಶಗಳು ತಿಳಕವಾದಿ ಚೌಕಟ್ಟಿಗೆ ವ್ಯತಿರಿಕ್ತವಾಗಿದ್ದವು (೧೯೯-೪).[೧೩]

ವೈದಿಕ ಸಂಸ್ಕೃತಿಯನ್ನು ಬಹಳವಾಗಿ ನೆಚ್ಚಿಕೊಂಡಿದ್ದ ಗಳಗನಾಥ, ಗುಲ್ವಾಡಿ ವೆಂಕಟರಾವ್, ಕೆರೂರ್ ವಾಸುದೇವಚಾರ್ಯರು ಮೊದಲ ಹಂತದ ಗುಂಪಿಗೆ ಸೇರಿದವರಾದರೆ, ಕೈಲಾಸಂ, ಶ್ರೀರಂಗರಂತವರು ಎರಡನೆ ಹಂತದ ಗುಂಪಿಗೆ ಸೇರಿದವರು. ಎರಡನೇ ಹಂತದ ಸಮಾಜ ಸುಧಾರಣೆಯಲ್ಲಿ ರಾಷ್ಟ್ರೀಯತೆಯ ತೀಕ್ಷ್ಣತೆ ಅಷ್ಟೊಂದು ಪ್ರಖರವಾಗಿರಲಿಲ್ಲ. ಅದು ಹಿಂದೂ ಸಂಸ್ಕೃತಿಯ ದೇವರು, ದೇವತೆಗಳನ್ನು ಆಚಾರ-ವಿಚಾರಗಳನ್ನು ತೀಕ್ಷ್ಣವಾಗಿ ಪ್ರತಿಪಾದಿಸುವ ಜಾಯಮಾನದಲ್ಲ. ಧರ್ಮರಹಿತ, ಜಾತಿರಹಿತ, ಆಧ್ಯಾತ್ಮಿಕ ಮತ್ತು ವೈಚಾರಿಕತೆಯಿಂದ ಕೂಡಿದ ಹಿಂದೂ ಜೀವನ ಶೈಲಿಯನ್ನು ರೂಪಿಸುವ ಧೋರಣೆಯುಳ್ಳದ್ದು. ಆದಾಗ್ಯೂ ಕೈಲಾಸಂರಲ್ಲಿ ವಿರೋಧಾಭಾಸವನ್ನು ಕಾಣುತ್ತೇವೆ. ಹಿಂದೂ ಧರ್ಮದ ಸಂಪ್ರದಾಯಸ್ಥರನ್ನು (ಮುಖ್ಯವಾಗಿ ಬ್ರಾಹ್ಮಣ ಪುರೋಹಿತರು) ತೆಗಳುವ ಧೋರಣೆಯನ್ನು ತೋರಿಸುವ ಕೈಲಾಸಂರು ಅದನ್ನು ಮರುವ್ಯಾಖ್ಯಾನಗೊಳಿಸಿ ಆ ಧರ್ಮದ ಮೇಲೆ ತಮ್ಮ ಯಜಮಾನಿಕೆಯನ್ನು ಮುಂದುವರೆಸುವ ಪ್ರಯತ್ನವನ್ನೂ ಹೊಂದಿದ್ದರು.[೧೪]

ಕೈಲಾಸಂರ ಧೋರಣೆಯು ಗಾಂಧೀವಾದಕ್ಕೆ ಸಮೀಪವಾಗಿದ್ದಿತು. ವಿದ್ಯಾವಂತ ಬ್ರಾಹ್ಮಣರ ಸಂಕುಚಿತತನ, ಪೌರೋಹಿತ್ಯದ ಕೃತಕತೆ, ಡಾಂಬಿಕತೆ, ಇತ್ಯಾದಿಗಳನ್ನು ಟೀಕಿಸುವುದರ ಜೊತೆಗೆ, ಅವುಗಳಿಗೆ ಪರ್ಯಾಯವಾಗಿ ನಿಜವಾದ ಹಿಂದೂ ಧರ್ಮ, ಜಾತಿಯ ತಿರುಳನ್ನು ತಿಳಿಸಿ ಹೇಳುವ ಆಸಕ್ತಿಯನ್ನು ಕೈಲಾಸಂರಲ್ಲಿ ಕಾಣಬಹುದು. ನಿಜವಾದ ಧರ್ಮ ವರ್ಣಾಶ್ರಮಧರ್ಮವಾದರೆ, ಅದರಲ್ಲಿ ಪ್ರತಿಪಾದಿತವಾಗಿರುವ ಸಾಮಾಜಿಕ ಶ್ರೇಣಿಯು ಆಧುನಿಕ ಜಾತಿ ಪದ್ಧತಿಗೆ ಮಾದರಿಯಾದುದೆಂದು ಕೈಲಾಂಸರು ನಂಬಿದ್ದರು. ನಮ್ಮ್ ಬ್ರಾಹ್ಮಣ್ಕೆ ನಾಟಕವು ಪುರಾತನ ವರ್ಣಾಶ್ರಮಧರ್ಮವನ್ನು ಎತ್ತಿ ಹಿಡಿಯುವುದು ಇದೇ ಕಾರಣಕ್ಕಾಗಿ. ಆಧುನಿಕ ಜಾತಿ ಪದ್ದತಿ ಮತ್ತು ಅದರ ಸುತ್ತ ಎದ್ದ ವಾದ-ವಿವಾದಗಳಿಗೆ ತಮ್ಮ ಅಸಂತೋಷವನ್ನು ಈ ನಾಟಕದ ಮೂಲಕ ವ್ಯಕ್ತಪಡಿಸಿದ್ದಾರೆ. "ಬ್ರಾಹ್ಮಣೇತರ"ನಾದ ಕೃಷ್ಣ ಭಗವಾನನಿಂದ ಸೃಷ್ಟಿಸಲ್ಪಟ್ಟ ಚಾತುರ್ವರ್ಣ್ಯವನ್ನು ಯಾವುದೇ ಹಿಂಜರಿಕೆಯಿಲ್ಲದೆ ಕೈಲಾಸಂರು ಒಪ್ಪಿಕೊಳ್ಳುತ್ತಾರೆ. ಈ ನಾಟಕದಲ್ಲಿ ಆತನ ವೈಯಕ್ತಿಕ ಯೋಗ್ಯತೆಗೆ ಮೌಲ್ಯವನ್ನು

ಕೊಡುವ ಚಾತುರ್ವರ್ಣ್ಯವನ್ನು ಸರೋಜಾಳು ಪ್ರತಿಪಾದಿಸುತ್ತಾಳೆ. ಕೈಲಾಸಂರಿಗೆ ಹಿಂದೂ ಧರ್ಮದ ಮೇಲೆ ಇದ್ದ ವಿಶ್ವಾಸಕ್ಕೆ ಮತ್ತೊಂದು ಉದಾಹರಣೆ ಹೆಣ್ಣಿನ ಶೀಲದ ಬಗ್ಗೆ ಇರುವ ಭಾವನೆಗಳು. ತಮ್ಮ ಪ್ರೀತಿಯ ಶಿಷ್ಯನಾದ ರಾ. ಶಿವರಾಂನಿಗೆ ಅವರು ಯಾವಾಗಲೂ ಹೀಗೆ ಹೇಳುತ್ತಿದ್ದರು :

ಹೆಣ್ಣಿನ ಶೀಲ ಮತ್ತು ಪಾತಿವ್ರತ್ಯವೇ ಹಿಂದೂ ಧರ್ಮದ ಸಾರಭೂತವಾದ ತಿರುಳು. ಅವಳ ಶೀಲ ಕುಟುಂಬದ ರಕ್ಷಾಕವಚ. ಅದು ಕುಟುಂಬದ ಸಮಗ್ರತೆ. ರುಜುತ್ವಗಳನ್ನು ಭದ್ರಪಡಿಸುತ್ತಿತ್ತು ಹಾಗೂ ಗಂಡ ಸುರಕ್ಷಿತ; ಇಂಥ ಕುಟುಂಬದಲ್ಲಿ ಜನಿಸಿದ ಮಕ್ಕಳಿಗೆ ಒಂದು ರೀತಿಯ ಸ್ಥಾಪಿತ ಭದ್ರತೆ ಇರುತ್ತಿತ್ತು. ಆದ್ದರಿಂದ ಅವರು ತೇಜಸ್ವೀ ಸ್ತ್ರೀ ಪುರುಷರಾಗಿ ಅರಳುತ್ತಿದ್ದರು. ಕುಟುಂಬ ಸದೃಢವಾಗಿ ಅನ್ಯೋನ್ಯವಾಗಿದ್ದಲ್ಲಿ ಸಮಾಜ ವೀರ್ಯವಂತಿಕೆಯಿಂದ ಕೂಡಿದ್ದು ಸುಭದ್ರವೂ ಸುಸಂಘಟಿತವೂ ಆಗಿರುತ್ತದೆ. ಇದನ್ನು ಅರಿತೇ ನಮ್ಮ ಪ್ರಾಚೀನ ಋಷಿಮುನಿಗಳು ಮತ್ತು ದಿವ್ಯಜ್ಞಾನಿಗಳು ಶೀಲ ಪಾತಿವ್ರತ್ಯವನ್ನು ಮೂಲಭೂತ ಗುಣವೆಂದು ಎತ್ತಿ ಹಿಡಿದರು. ನಮ್ಮ ಎಲ್ಲ ಪುರಾಣಗಳೂ ಈ ಸೌಶೀಲ್ಯ ಗುಣವನ್ನು ಕೊಂಡಾಡುತ್ತವೆ ಹಾಗೂ ಇದರಿಂದ ಸ್ತ್ರೀಯರಿಗೆ ಪರಮಾನಂದ ಸಿದ್ಧಿಯ ಶಕ್ತಿ ಲಭಿಸುತ್ತದೆ ಎಂದು ಹೇಳುತ್ತವೆ (೨೦೦೦ : ಪು. ೩೦).[೧೫]

ಸರೋಜಾಳ ಗುಣಕ್ಕೆ ವಿರುದ್ಧವಾಗಿ ಮತ್ತು ಮೇಲೆ ತಿಳಿಸಿದ ನಿಜವಾದ ಹಿಂದೂ ಧರ್ಮವನ್ನು ಅರ್ಥಮಾಡಿಕೊಳ್ಳದೆ ಬರೀಯ ಸೌಂದರ್ಯಕ್ಕೆ ಮತ್ತು ಅಲಂಕಾರಕ್ಕೆ ಸಮಯವನ್ನು ವ್ಯಯಗೊಳಿಸುವ ಹೆಂಗಸರನ್ನು ಕೈಲಾಸಂರು ಕಟುವಾಗಿ ಟೀಕಿಸುತ್ತಾರೆ. ಹೀಗೆ ಹೆಣ್ಣಿನ ಶೀಲದ ಬಗ್ಗೆ ಬಹಳ "ಕಾಳಜಿ" ವಹಿಸುವ ಕೈಲಾಸಂರು ಸೂಳೆ ಮತ್ತು ಅವಳ ಜೀವನದ ಬಗ್ಗೆ ನಾಟಕವನ್ನು ಯಾಕೆ ಬರೆದರು? ೧೯೩೦ರ ನಂತರ ಕೈಲಾಸಂರಲ್ಲಿ ಕೆಲವೊಂದು ಬದಲಾವಣೆಗಳನ್ನು ಕಾಣುತ್ತೇವೆ. ಮಧ್ಯಮ ವರ್ಗದ ಚಿತ್ರಣದಿಂದ ದೂರ ಹೋಗಿ ಶೂದ್ರರ ಮೇಲೆ ನಾಟಕ ಮತ್ತು ಪದ್ಯಗಳನ್ನು ಬರೆಯಲು ಶುರು ಮಾಡಿದ ಕೈಲಾಸಂರು ಗಾಂಧಿಯ ಸ್ವರಾಜ್ಯ ಸಿದ್ಧಾಂತದ ಪ್ರಭಾವಕ್ಕೆ ಒಳಗಾಗಿದ್ದರು. ಕೈಲಾಸಂರ ಅಪ್ರಕಟಿತ ಕೃತಿಯಾದ ಕಾಳಮ್ಮನ ಐಕ್ಳುಗೆ ಪರಿಚಯವನ್ನು ಬರೆಯುತ್ತಾ ವೈ.ಎನ್. ಕೃಷ್ಣಮೂರ್ತಿಯವರು ಈ ಬದಲಾವಣೆಯ ಬಗ್ಗೆ ಹೀಗೆ ಹೇಳಿದ್ದಾರೆ :

> ಇದುವರೆಗೆ ಸಮಾಜದ ಮಧ್ಯಮ ವರ್ಗವನ್ನೇ ತಮ್ಮ ಚಿತ್ರಣಕ್ಷೇತ್ರವಾಗಿಟ್ಟುಕೊಂಡ ಕೈಲಾಸಂರು ತಮ್ಮ ನಾಟಕ ರಚನೆ ಆರಂಭವಾದ ಒಂದು ದಶಕದಲ್ಲಿ ಮತ್ತೊಂದು ಹೆಜ್ಜೆ ಮುಂದೆ ಹೋಗಿ ಸಮಾಜದಲ್ಲಿ ಬಾಹಿರಳಾದ ಅತಿ ಅಧೋಗತಿಗೆ ನೂಕಲ್ಪಟ್ಟ ಸೂಳೆಯ ಬಾಳನ್ನು ಅದ್ಭುತವಾಗಿ ಚಿತ್ರಿಸಿರುವುದಲ್ಲದೆ ಜತೆಗೆ ರೈತರ ಜೀವನವನ್ನೂ ಚಿತ್ರಿಸಿದರು (೨೦೦೧ : ಪು. ೭೨).[೧೬]

ಕೃಷ್ಣಮೂರ್ತಿಯವರಿಗೆ ಬದಲಾವಣೆ ಒಂದು "ಹೆಜ್ಜೆ ಮುಂದೆ". ಈ ಬದಲಾವಣೆಗಳು

Russian Formalistರು ಭಾವಿಸುವ ಹಾಗೆ ಸಾಹಿತ್ಯಕ್ಕೆ ಹೊಸತನ್ನು ಕೊಡಲು ಆಧರಿಸುವ ಆಕರಗಳು.

## ಸೂಳೆ, ಪಾತಿವ್ರತ್ಯ ಮತ್ತು ಕೈಲಾಸಂ

ಕೈಲಾಸಂರ ನಾಟಕ ವೃತ್ತಿಯಲ್ಲಿ ಅವರು ಬರೆದ ಸೂಳೆಯು ಚಾರಿತ್ರಿಕವಾಗಿ ಬಹಳ ಮಹತ್ವದ್ದಾಗಿದೆ. ಅಂದಿನ ಕಾಲದಲ್ಲಿ ಸ್ತ್ರೀಯರ, ವಿಶೇಷವಾಗಿ ದೇವದಾಸಿ ಮತ್ತು ಸೂಳೆಗಾರಿಕೆ, ಬಗ್ಗೆ ಆಗುತ್ತಿದ್ದ ಸುಧಾರಣೆಯ ವಾದ-ವಿವಾದಗಳಿಗೆ ಕೈಲಾಸಂರವರು ಉದಾರವಾದಿ ಮೂಲದಿಂದ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಬಹುತೇಕ ಬ್ರಾಹ್ಮಣ ಸ್ತ್ರೀ ಮತ್ತು ಸಂಸಾರಗಳ ಬಗ್ಗೆ ನಾಟಕಗಳನ್ನು ಬರೆದಿರುವ ಕೈಲಾಸಂರವರು ಸೂಳೆ ಮತ್ತು ಅಂದು ಅವಳ ಬಗ್ಗೆ ಇದ್ದ ಜನಾಭಿಪ್ರಾಯಗಳನ್ನು ಪ್ರಶ್ನಿಸುತ್ತಾ ಸೂಳೆಯ ಅಪರಿಚಿತ ಮುಖವನ್ನು ಪರಿಚಯಿಸುವ ಪ್ರಯತ್ನ ಕಾಣಬಹುದು. ಜನ ಸಾಮಾನ್ಯರಲ್ಲಿ ಸೂಳೆ ಮತ್ತು ಸೂಳೆಗಾರಿಕೆಯ ಬಗ್ಗೆ ಪ್ರಚಲಿತವಿದ್ದ "ಕೆಟ್ಟ" ಅಭಿಪ್ರಾಯಗಳನ್ನು ಹಳಿಯುವ ಮತ್ತು ಸೂಳೆಯ ನಿಜ ಸ್ವರೂಪವನ್ನು ಪರಿಚಯಿಸುವ ಪ್ರಯತ್ನವನ್ನು ಕೈಲಾಸಂರವರು ಮಾಡಿದ್ದಾರೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಸಣ್ಣತನ ತೋರುವ ಸಂಸಾರಸ್ಥ ಹೆಣ್ಣಿಗಿಂತಲು (ಬ್ರಾಹ್ಮಣ ಹೆಣ್ಣು) ಸೂಳೆಯ ಪ್ರೀತಿ, ಪ್ರೇಮ ಮತ್ತು ಪ್ರಾಮಾಣಿಕತೆ ಆದರ್ಶಮಯವಾದುದು ಎಂದು ಪ್ರತಿಪಾದಿಸಿದ್ದಾರೆ. ಈ ನಾಟಕ ಬರೀಯ ಸೂಳೆಯ ಬಗ್ಗೆ ಆಗಿರದೆ, ಅಂದಿನ ಸಮಾಜದ ಚಿತ್ರವನ್ನು ಮತ್ತು ಚರಿತ್ರೆಯನ್ನು ನಮ್ಮ ಮುಂದಿಡುತ್ತದೆ.

ಕೈಲಾಸಂರ ಸೂಳೆ (ಅಥ್ವಾ ಒಲವಿನ ಕೊಲೆ) ಒಂದು ದುರಂತ ನಾಟಕ. ಮರುಳ ಸಿದ್ಧಪ್ಪನವರ ಪ್ರಕಾರ "ಸೂಳೆಯಲ್ಲಿ ಹೆಣ್ಣಿನ ಶೋಷಣೆಯ ನಮೂನೆ" (೨೦೦೦-೪೩)[೭] ಯನ್ನು ಕೈಲಾಸಂರು ಚಿತ್ರಿಸಿದ್ದಾರೆ. ಈ ನಾಟಕವು ಎರಡು ಅಂಕಗಳಿಂದ ಕೂಡಿದ್ದ, ಅದಕ್ಕೆ ಮೊದಲು ಒಂದು ಸಣ್ಣ ಪ್ರಸ್ತಾವನೆಯನ್ನು ಕೊಡಲಾಗಿದೆ. ಪ್ರಧಾನ ಪಾತ್ರವಾದ ಸೂಳೆಯು ಅತಿ ಲೋಭಿಯಾಗಿರದೆ, ಬಂದಂತ ಗಿರಾಕಿಗಳ ಜೊತೆಗೆ ಬಹಳ ಮಮತೆಯಿಂದ ವ್ಯವಹರಿಸುತ್ತಾಳೆ. ಹದಿನಾಲ್ಕು ವರ್ಷದ ವಯಸ್ಸಿನಲ್ಲೇ ಸೂಳೆಗಾರಿಕೆಗೆ ನೂಕಲ್ಪಡುವ ಸೂಳೆಯು ಅತೃಪ್ತ ಜೀವನವನ್ನು ನಡೆಸುತ್ತಾಳೆ. ತನಗೂ ಮತ್ತು ಸಂಸಾರಸ್ಥ ಹೆಣ್ಣಿನ ನಡುವೆ ಇರುವ ಅಂತರಕ್ಕೆ ಕಾರಣವಾದ ಸಮಾಜ ಮತ್ತು ದೇವರ ಬಗ್ಗೆ ತಿರಸ್ಕಾರ ಭಾವನೆಯನ್ನು ಬೆಳೆಸಿಕೊಳ್ಳುತ್ತಾಳೆ. ಆದ್ದರಿಂದಲೆ ತನಗೆ ಹುಟ್ಟುವ ಮಗಳನ್ನು ಸೂಳೆಗಾರಿಕೆಗೆ ದೂಕದೆ, ಅವಳನ್ನು ವಿದ್ಯಾವಂತರನ್ನಾಗಿ ಮಾಡಲು ತವಕಿಸುತ್ತಾಳೆ. ತನ್ನ ತಾಯಿಯ ಬಲವಂತಕ್ಕೆ ಮಣಿದು ಸೂಳೆಗಾರಿಕೆಗೆ ತೊಡಗುವ ಸೂಳೆಯು, ತನ್ನಂತೆ ತನ್ನ ಮಗಳು ಆಗಬಾರದೆಂದು ಇಚ್ಛಿಸುತ್ತಾಳೆ. ಆದರೆ ನೆನೆಸುವುದು ಒಂದು, ಆಗುವುದು ಮತ್ತೊಂದು ಎಂಬಂತೆ ಸೂಳೆಯು ತನ್ನ ಮಗಳ ಮೇಲಿಟ್ಟ ಆಸೆಯನ್ನು ಈಡೇರಿಸಿಕೊಳ್ಳಲಾರದೆ ಹೋಗುತ್ತಾಳೆ. ಸಮಾಜದಲ್ಲಿ ಸೂಳೆಯರ ಬಗ್ಗೆ ಇರುವ ದುರಾಭಿಪ್ರಾಯ ಮತ್ತು ತನ್ನ ತಾಯಿಯ ಹಣದಾಸೆ ಸೂಳೆಯನ್ನು ಮತ್ತು ಆಕೆಯ ಹದಿನಾಲ್ಕು ವರ್ಷದ ಮಗಳನ್ನು ಸಾಯಿಸುತ್ತದೆ. ನಾಟಕದ ಕೊನೆಯಲ್ಲಿ

ಸೂಳೆಯು ತನ್ನ ಮಗಳನ್ನು ವಿಷ ಕೊಟ್ಟು ಸಾಯಿಸುತ್ತಾಳೆ. ಜೊತೆಗೆ ತಾನು ಸಹ ವಿಷ ಸೇವಿಸಿ ಸಾಯುತ್ತಾಳೆ. ಸೂಳೆಯ ಅಂತ್ಯವು ಒಲವಿನ ಕೊಲೆಯನ್ನು ಸಂಕೇತಿಸುತ್ತದೆ.

ನಾಟಕದ ಪ್ರಾರಂಭವು ಸೂಳೆಯು ಸರಸ್ವತಿ ಪಟಕ್ಕೆ ಪುಷ್ಪಮಾಲೆಯನ್ನು ಹಾಕಿ, ಪ್ರಾರ್ಥನೆಯನ್ನು ಹಾಡುವುದರ ಮೂಲಕ ಶುರುವಾಗುತ್ತದೆ. ಇಬ್ಬರು ವಿಟರು (ಸೂಳೆಗೋಸ್ಕರ ಬಂದಂತ ಗಿರಾಕಿಗಳು) ತಮ್ಮ ಕೆಲಸವನ್ನು ಮುಗಿಸಿಕೊಂಡು ಸೂಳೆಯ ಮನೆಯಿಂದ ನಿರ್ಗಮಿಸುವುದರ ಮೂಲಕ ಸೂಳೆಯ ಮನೆಯ ವಾತಾವರಣವನ್ನು ಪರಿಚಯಿಸಲಾಗಿದೆ. ಹದಿನಾಲ್ಕು ವರ್ಷದ ಸೂಳೆಗೆ ಇದು ಹೊಸದು ಮತ್ತು ತ್ರಾಸದಾಯಕ. ತಮ್ಮ ಸ್ಥಿತಿ ಹೀಗೇಕೆ ಎಂಬ ಚಿಂತೆ ಅವಳನ್ನು ಕಾಡುತ್ತದೆ. ಒಂದು ಕಡೆ ತನ್ನಂತ ನತದೃಷ್ಟರನ್ನು ಸೃಷ್ಟಿಸಿ, ಮತ್ತೊಂದು ಕಡೆ ಶೀಲವಂತ ಗೃಹಸ್ಥ ಸ್ತ್ರೀಯರನ್ನು ಸೃಷ್ಟಿಸಿರುವ ದೇವರನ್ನು ದೂಷಿಸುತ್ತಾಳೆ. ಇಲ್ಲಿ ಸೂಳೆಯ ಮುಗ್ಧತೆಯನ್ನು ಕೈಲಾಸಂರು ಎತ್ತಿ ತೋರಿಸಿದ್ದಾರೆ. ಆದರೆ ಬೇರೆ ದಾರಿಯಿಲ್ಲದೆ ಸೂಳೆಯು ತಾನು ತೊಡಗಿಸಿಕೊಂಡಿರುವಧಂದೆಯಲ್ಲಿ ಜೀವನ ಸಾಗಿಸಬೇಕಾಗುತ್ತದೆ. ನಾಟಕದುದ್ದಕ್ಕೂ ಸೂಳೆಯು ಹಣದಾಸೆಗೆ ಬಾಳಿದವಳಲ್ಲ ಎಂಬುದನ್ನು ಪದೆ, ಪದೆ ತೋರಿಸಲಾಗಿದೆ. ಹೆಂಡತಿಯ ತೊಂದರೆಯಿಂದ ತಪ್ಪಿಸಿಕೊಂಡು ಬರುವ ಗಿರಾಕಿಗಳಿಗೆ ದೇಹದಾಸೆಯನ್ನು ತೀರಿಸುವುದರ ಜೊತೆಗೆ, ಪ್ರೀತಿ, ಪ್ರೇಮ ಮತ್ತು ಅನುಕಂಪವನ್ನು ತೋರಿಸುವ ಸೂಳೆಯು ಪರಿಸ್ಥಿತಿಯ ಲಾಭವನ್ನು ಪಡೆಯದೆ, ಅವರನ್ನು ಸುರಕ್ಷಿತವಾಗಿ ತಮ್ಮ, ತಮ್ಮ ಮನೆಗೆ ತಲುಪಿಸುವ ಜವಾಬ್ದಾರಿಯನ್ನು ಮತ್ತು ದೊಡ್ಡತನವನ್ನು ತೋರಿಸುತ್ತಾಳೆ. ತನ್ನ ಮಗಳನ್ನು ಇತರ ಮಕ್ಕಳಂತೆ ವಿದ್ಯಾ-ಬುದ್ಧಿವಂತರನ್ನಾಗಿ ಮಾಡಿ ಸಮಾಜದಲ್ಲಿ ಮರ್ಯಾದೆಯಿಂದ ಬಾಳುವಂತೆ ಮಾಡಲು ಆಶಿಸ, ಕೊನೆಗೆ ಅದು ಸಾಧ್ಯವಾಗದಾದಾಗ ಮತ್ತು ನಲವತ್ತನಾಲ್ಕು ವಯಸ್ಸಿನಲ್ಲಿ ಅನಾರೋಗ್ಯ ಪೀಡಿತಳಾಗುವ ಸೂಳೆಯು ತಾನು ಸತ್ತ ಮೇಲೆ ತನ್ನ ತಾಯಿಯು ಮೊಮ್ಮಗಳನ್ನು ಹಣಕ್ಕಾಗಿ ಸೂಳೆಗಾರಿಕೆಗೆ ನೂಕುತ್ತಾಳೆಂದು ತಿಳಿದು ಹತಾಶೆಯಿಂದ ಮಗಳನ್ನು ಕೊಲ್ಲುವುದಲ್ಲದೆ, ತಾನೂ ಸಾಯುತ್ತಾಳೆ. ನಾಟಕದಲ್ಲಿ ಸುಬ್ಬು ಎಂಬ ಮತ್ತೊಬ್ಬ ಪಾತ್ರದ ಪರಿಚಯವಿದೆ. "ದೊಡ್ಡ ಕುಲ್ದಲ್ಲಿ ಹುಟ್ಟಿ, ದೊಡ್ಡ್ ಪದ್ವೀನ ಅನುಭವಿಸಿದ್ದ" (ಪು. ೫೪೪)[೨೮] ಸುಬ್ಬುವು ಹೆಂಡತಿ, ಮಕ್ಕಳು, ಆಸ್ತಿ-ಪಾಸ್ತಿ ಎಲ್ಲವನ್ನು ಬಿಟ್ಟು ಸೂಳೆಯ ಬಳಿಯಲ್ಲೆ ಇರುತ್ತಾನೆ.[೧೯] ಸೂಳೆಯು ಇವನನ್ನು ಕೊನೆತನಕ ಕೈ ಬಿಡುವುದಿಲ್ಲ. ತಾನು ಸಾಯುವ ಮೊದಲು, ಇದ್ದ ಆಸ್ತಿಯನ್ನು ಸುಬ್ಬುವಿನ ಹೆಸರಿನಲ್ಲಿ ಬರೆಯುತ್ತಾಳೆ. ಹಿಂತಿರುಗಿ ತನ್ನ ಸಂಸಾರವನ್ನು ಸೇರಲು ಅವನಿಗೆ ಪ್ರೀತಿಯಿಂದ ಉಪದೇಶಿಸುತ್ತಾಳೆ.

ಒಂದು ಕಡೆ ಸೂಳೆಯ ಅನುಕಂಪಪೂರಿತ ಮತ್ತು ಕರುಣಾಮಯ ಚಿತ್ರವನ್ನು ಎತ್ತಿತೋರಿಸಿರುವ ಕೈಲಾಂಸರು, ಮತ್ತೊಂದು ಕಡೆ ಸಭ್ಯ, ಗೃಹಸ್ಥ ಸ್ತ್ರೀಯರ ಟೊಳ್ಳುತನವನ್ನು ಹೊರಗೆಳೆದಿದ್ದಾರೆ. ಇದಕ್ಕೆ ನಾಟಕದ ಕೆಲವೊಂದು ತುಣುಕುಗಳನ್ನು ಇಲ್ಲಿ ಉದಾಹರಿಸಬಹುದು. ನಾಟಕ ಮೊದಲಲ್ಲಿ ಬರುವ ದೊಡ್ಡ ಮನುಷ್ಯ (ಗಿರಾಕಿಯೂ ಕೂಡ) ಸೂಳೆಯ ಎದುರಿಗೆ ತನ್ನ ಹೆಂಡತಿಯ ಬಗ್ಗೆ ಹೀಗೆ ಹೇಳುತ್ತಾನೆ :

> My Fateoo...My wife you know by name...But I know to my cost...ಕೂದ್ಲೆಲ್ಲಾ ಕೆದರ್ಕೊಂಡು, ಅಚಿಜೂರು, ಆಮಂಡ್, all the Vibgyor Colours of ಬುಳ್ಳಣ್ಣ and ಬುಳ್ಳಪ್ಪ, ಅವಳಿ ಮರ್ಚೆಂಟ್ಸ್ ಅವರ goods ನ ... Lock stock and barrel ಬಂಗ್ಲೇಗೇನೆ transfer ಮಾಡ್ಕೊಂಡು, bed-room ತುಂಬಾ ಪೇರ್ಸಿಧೇನೆ ..... ಇದರ ಬೆಲೆಯೆಲ್ಲಾ debitoo...ನನ್ನ salary billನಲ್ಲಿ ...ಇದ್ನೆಲ್ಲಾ ಇಟ್ಬಿಟ್ಟು ಮನೇಲಿರೋ oldest and ಹರ್ಕ್ಲೆಷ್ಟ್ ಷೀರೆನ್ನೂ ಷುತ್ಕೊಂಡು .....Barton'sh besht jewellesh ಕೊಂಡ್ಕೊಟ್ಟಿದೇನೆ.....ಅದ್ನೆಲ್ಲಾ safe ಆಗಿ ಬೀಗಹಾಕಿ ಬೀಗದ್ಕೈನ ಬಚ್ಚಿಟ್ಕೊಂಡು... good old ಅಮರಾ style ನಲ್ಲಿ "ನಾರಾಯಣೀ....ಭದ್ರಕಾಳೀ ರುದ್ರಾಣಿ ರಂಟ ಟಂಟಟಂ!" (ಪು. ೫೧೨).[೨೦]

ಹೆಂಡತಿಯಿಂದ ಬೇಸತ್ತು ಸೂಳೆಯ ಸಂಗದಲ್ಲಿ ಸಂತೋಷವನ್ನು ಪಡೆಯಲು ಬರುವಿಟರಿಗೆ ಸಂಸಾರವೆಂಬುದು ಭಾರದ ಚೀಲ. ಸೂಳೆಯ ಬಳಿಗೆ ಬರುವ ದೊಡ್ಡ ಮನುಷ್ಯರು ಅವಳ ಹೃದಯ ವೈಶಾಲ್ಯಕ್ಕೆ ಶರಣಾಗುತ್ತಾರೆ. ಗರತಿಯರು, ಪಾತಿವ್ರತ್ಯರು ಎಂದು ಹೇಳಿಕೊಳ್ಳುವ ಗೃಹಸ್ಥ ಸ್ತ್ರೀಯರ ಹುಳುಕುಗಳನ್ನು ಮತ್ತು ಕುಹಕ ಬುದ್ಧಿಯನ್ನು ಸೂಳೆಯ ಪ್ರಾಮಾಣಿಕತೆಗೆ ಹೋಲಿಸಿ ನೋಡುವ ಕೈಲಾಸಂರವರು ಒಳಗೊಂದು-ಹೊರಗೊಂದು ಗುಣಗಳನ್ನು ಪ್ರದರ್ಶಿಸುವ ಸ್ತ್ರೀಯರನ್ನು ಹಾಸ್ಯ ಮಾಡಿದ್ದಾರೆ. ನಾಟಕದಲ್ಲಿ ಪ್ರಧಾನ ಪಾತ್ರವಾದ ಸೂಳೆಯ ಮುಖಾಂತರ ಸಮಕಾಲೀನ ಮಧ್ಯಮ ವರ್ಗದ ಸಾಂಸಾರಿಕ ಜೀವನದ ಟೊಳ್ಳನ್ನು ತೋರಿಸುವುದಕ್ಕೆ ಪ್ರಯತ್ನಿಸಿದ್ದಾರೆ. ಸೂಳೆಯನ್ನು ಅನೈತಿಕ, ನೀತಿಗೆಟ್ಟವಳು ಮತ್ತು ಕುನಡತೆಯವಳು ಎಂದು ಭಾವಿಸುವ ಸಮಾಜವು ಈ ನಾಟಕದಲ್ಲಿ ಸೂಳೆಯ ಟೀಕೆಗೆ ವಸ್ತುವಾಗುತ್ತದೆ. ಒಮ್ಮೆ ಸುಬ್ಬುವನ್ನು ಉದ್ದೇಶಿಸುತ್ತಾ ಹೀಗೆನ್ನುತ್ತಾಳೆ :

> ಹೀಗೆ ನೋಡ್ಸುಬ್ಬೂ! (ಅವನ ಕಡೆ ತಿರುಗಿ) "ಏನ್ಮಾಡ್ತಿದೀಯಾ?" (ಮತ್ತೆ ಮೊದಲಿನಂತೆ) ಈ ಕಾಲದ ಸಂಸಾರಗಳಲ್ಲಿ ಗಂಡ ಹೆಂಡತಿಯರು ಒಬ್ಬೊಬ್ಬರ ಯೋಗ್ಯತೇನ ಅರೀದೆ....ರೇಗಿ....ತಮ್ಮ ತಮ್ಮ ಕಣ್ಣಿಗೆ ಎಣ್ಣೆ ಬಿಟ್ಕೊಂಡು ಪರಸ್ಪರ ಐಬುಗಳನ್ನು ಹುಡ್ಕಿ ಹೇಸ್ಗೆ ಪಟ್ಕೊಳ್ಳೋದ್ರಿಂದ ಮುಂದಕ್ಕೆ ಬೆಳೆದು...ಹಬ್ಬಿ ಹರಡೋ ಎಷ್ಟು ಸಾವಿರ ಕುಟುಂಬಗಳು ಹಾಳಾಗ್ತಿವೆ....ಈಗ. ...ಈಗ ಗೊತ್ತೆ ಸುಬ್ಬೂ? (ಸುಸ್ತಿನಿಂದ ಸಿಟ್ಟುಸಿರಿಟ್ಟು, ಬಾಗಿಲಿನ ವಾಸ್ಕಾಲಿಗೆ ಒರಗಿಕೊಳ್ಳುವಳು) (ಪು. ೫೧೮).[೨೧]

ಇಲ್ಲಿ ಗಮನಿಸಬೇಕಾದ್ದೇನೆಂದರೆ ಸಂಸಾರವು ಕೆಡುವದಕ್ಕೆ ಅನೇಕ ಕಾರಣಗಳು. ಕುಡಿಯೋದು, ಹಣವನ್ನು ಬೇಕಾಬಿಟ್ಟಿಯಾಗಿ ಖರ್ಚು ಮಾಡುವುದು ಇತ್ಯಾದಿ. ಸೂಳೆಯ

ಜೊತೆಗಿನ ಸಂಬಂಧವು ವ್ಯಭಿಚಾರಕ್ಕೆ ದಾರಿ ಮಾಡಿಕೊಡುತ್ತದೆಂದು ನಾಟಕದಲ್ಲಿ ಎಲ್ಲಿಯೂ ಹೇಳಲಾಗಿಲ್ಲ. ಬದಲಾಗಿ ಗಂಡ-ಹೆಂಡಿರ ಐಬುಗಳು ಇಬ್ಬರ ಮನಸ್ತಾಪಕ್ಕೆ ಕಾರಣ ಎಂದು ಚಿತ್ರಿಸಲಾಗಿದೆ. ನೈತಿಕತೆಯ ಸೋಗನ್ನು ಪ್ರದರ್ಶಿಸುವ ಸಾಂಸಾರಿಕ ಜೀವನವನ್ನು ವಿಡಂಬಿಸುವ ಕೈಲಾಸಂರವರು ಸೂಳೆಯ ಪ್ರಾಮಾಣಿಕತೆ ಮತ್ತು ಸದ್ಗುಣವನ್ನು ಹಂತ, ಹಂತದಲ್ಲಿಯೂ ತೋರಿಸಿದ್ದಾರೆ. ಹಣದ ಆಮಿಷ ಒಡ್ಡಿದಾಗಲು ವಿಟರ ಹೆಂಡತಿ, ಮಕ್ಕಳ ಬಗ್ಗೆ ಅನುಕಂಪ ತೋರಿಸುವ ಸೂಳೆಯು ತನ್ನಿಂದಾಗಿ ಅವರ ಸಂಸಾರವು ಒಡೆಯದಂತೆ ಎಚ್ಚರ ಮತ್ತು ಕಾಳಜಿ ತೋರಿಸುತ್ತಾಳೆ.

ನಾಟಕದಲ್ಲಿ ಸೂಳೆಯನ್ನು ಭೋಗ ವಸ್ತುವನ್ನಾಗಿ ಚಿತ್ರಿಸಿಲ್ಲ. ಅವಳಿಗೂ ಅನುಭವ, ಅಂತಃಕರಣ, ತಿಳುವಳಿಕೆ ಮತ್ತು ವಿವೇಚನಾ ಶಕ್ತಿ ಇದೆ ಎಂದು ಕೈಲಾಸಂರು ಪದೆ, ಪದೆ ತೋರಿಸುತ್ತಾರೆ. ನಾಟಕದಲ್ಲಿನ ಎರಡು ವಿಷಯಗಳು ಈ ಅಂಶವನ್ನು ಸಾಬೀತುಪಡಿಸುತ್ತವೆ. ಒಮ್ಮೆ ರಾತ್ರಿ ದಣಿವಾರಿಸಲು ಪಾನ ಮತ್ತಳಾದ ಸೂಳೆಯು ತನ್ನ ತಾಯಿಯನ್ನು ಉದ್ದೇಶಿಸಿ ಸಂಸಾರಸ್ಥ ಗೃಹಿಣಿಯರ ಬಗ್ಗೆ ಹೀಗೆ ಹೇಳುತ್ತಾಳೆ :

ಈಗರ್ತಿಯರ್ಗ್ ಎಷ್ಟ್ ಜಂಭಾಂತೀಯಾ?..... ಇಷ್ಟಕ್ಕೂ ಮೂವತ್ತು್ಮಟ್ಟೋಕ್ಕುಂಚಿ ಎಂಟು ಹತ್ತು ಮರೀಹಾಕಿ ಮೂತಿ ಮೈಯೆಲ್ಲಾ ಉಬ್ಬಿ, ಅಕ್ಕಿ ಮೂಟೇ ಮೇಲ್ತಂಬ್ಗೆ ಕವಿತಗೋ....ಇಲ್ಲ ಹೊತ್ತೂ, ಹೆತ್ತೂ, ದುಡ್ಡೂ, ದುಡ್ಡೂ, ಕುಗ್ಗೀ, ಕುಗ್ಗೀ ಹಂಚಿಕಡ್ಡಿಗೆ ಸೀರೆ ಸುತ್ತಿದಾಗೆ ಒಣ್ಗೀ ಹಲ್ಲೀ ಹಾಗಿರೋದಲ್ದೇ ತಲೆಯೆಲ್ಲಾ ನರ್ತು....ಕಣ್ಗ್ಳು ಆಳಾಳುದ್ದ ಇಳ್ದು....ಇಲ್ಲಾ ಮೂತಿಯೆಲ್ಲಾ ಉಬ್ಬಿ, ಗಲ್ಲದ್ತ್ಳಗ್ಲೆಲ್ಲಾ ನಾಲ್ಕು ಗಲ್ಲಗ್ಳು ಜೋಲಾಡ್ತಾ....ಮದ್ವೆ ಆದ್ದಕ್ಕೆ, ತಬ್ಕೊಂಡು ಮುತ್ತಿಟ್ ಸಾಕೋಕೆ ತನ್ನೊಟ್ಟೇಲಿ ಒಂದ್ ಮಗೂನೂ ಹೆರ್ದನೇ ಆನೇ ಹಾಗೆ ವಾಲಾಡ್ತಾ ಇರೋ ಈ ಗರ್ತೀರ್ಗೆ ನಮ್ಮೇಲಿರೋ ತಾತ್ಸಾರ.....ನಗೂ ಬರುತ್ತೇ ಅಮ್ಮಾ...ಗರ್ತಿ ಏನೂ....ಸೂಳೆ ಏನೂ...ಹೆಂಗ್ಸೆಂಗ್ಸೇ....(ಪು. ೫೨೨).[೨೨]

ಇಲ್ಲಿ ಗಮನಿಸಬೇಕಾದುದು ಸೂಳೆಯ ಭಾವನೆಗಳಿಗೆ ಪ್ರಾತಿನಿಧ್ಯವನ್ನು ನೀಡಿರುವುದು. ಮೇಲಿನ ಭಾವನೆಗಳು ಸಂಸಾರಸ್ಥ ಸ್ತ್ರೀಯರ ಕರುಣಾಜನಕ ಪರಿಸ್ಥಿತಿಯನ್ನು ಪರಿಚಯಿಸಿದಿರೂ, ಅವರಿಗಿರುವ ಅಹಂಕಾರದ ಬಗ್ಗೆ ಸೂಳೆಗೆ ತಾತ್ಸಾರ ಇದೆ. ಜೀವನದಲ್ಲಿ ಸಾಕಷ್ಟು ಕಹಿ ಅನುಭವವನ್ನು ಪಡೆದಿರುವ ಸೂಳೆಯು ಗೃಹಸ್ಥ ಸ್ತ್ರೀಯರ ಗೋಸುಂಬೆತನ ವನ್ನು ಹೊರಗೆಳೆಯುತ್ತಾಳೆ. ತಮ್ಮ ತಟ್ಟೆಯಲ್ಲಿ ಇಲಿ ಬಿದ್ದಿದ್ದರೂ, ಬೇರೆಯವರ ತಟ್ಟೆಯಲ್ಲಿ ನೊಣ ಬಿದ್ದಿದೆಯೆಂದು ಬೆರಳನ್ನು ತೋರಿಸುವ "ಸಭ್ಯ" ಗೃಹಸ್ಥ ಸ್ತ್ರೀಯರ ಬಗ್ಗೆ ಕೋಪವನ್ನು ವ್ಯಕ್ತಪಡಿಸುತ್ತಾಳೆ. ನಾಟಕದ ಪೂರ್ವಾರ್ಧವು ಸೂಳೆಯ ಪ್ರಾಮಾಣಿಕತೆ, ಪ್ರೀತಿ ಮತ್ತು ಮಮತೆಯನ್ನು ಪರಿಚಯಿಸುವುದರ ಜೊತೆಗೆ ಸಂಸಾರಸ್ಥ ಸ್ತ್ರೀಯರ ಬಗ್ಗೆ ಮತ್ತು ಅವರ ಸಣ್ಣತನದ ಬಗ್ಗೆ ಕಟು ಟೀಕೆ ಇದ್ದರೆ, ನಾಟಕದ ಉತ್ತರಾರ್ಧವು ಸೂಳೆಗಾರಿಕೆಯ ನಿರ್ಮೂಲನಕ್ಕಾಗಿ ಅಂದು ನಡೆಯುತ್ತಿದ್ದ ಸ್ತ್ರೀ ಸುಧಾರಣ ಚಳುವಳಿಯ ಇತಿ-ಮಿತಿಗಳನ್ನು

ಚರ್ಚಿಸುತ್ತದೆ. ಸುಧಾರಣವಾದಿ ಕಾರ್ಯಕರ್ತೆ ಮತ್ತು ಸ್ತ್ರೀ ಸಂಘಟನೆಯ ಸದಸ್ಯೆಯಾದ ಲೇಡಿ ಶಿವದಾಸ ಐಯ್ಯರ್ ಸೂಳೆಗಾರ್ಕೆಯ ಸಮಸ್ಯೆಯನ್ನು ಸಮಾಜದಿಂದ ಹೋಗಲಾಡಿಸಲು ಸೂಳೆಯ ಮನೆಗೆ ಬಂದು ಅವಳ ಸಹಕಾರ ಕೇಳಿದಾಗ ಸೂಳೆಯು ಆಡುವ ಮಾತುಗಳನ್ನು ಕೈಲಾಸಂರು ಬಹಳ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಅವರಿಬ್ಬರ ನಡುವೆ ನಡೆಯುವ ಸಂಭಾಷಣೆಯು ಸ್ತ್ರೀ-ಪುರುಷರ ಮತ್ತು ಸ್ತ್ರೀಯರ ನಡುವೆ ಇರುವ ಲಿಂಗ ಸಂಬಂಧಿ ತಾರತಮ್ಯಗಳನ್ನು ತೋರಿಸುತ್ತದೆ.

ಲೇಡಿ ಶಿವದಾಸ ಐಯ್ಯರ್‌ರಂತಹ ದೊಡ್ಡ ಮನೆತನದ ಹೆಂಗಸು ತನ್ನ ಮನೆಗೆ ಬಂದಿದ್ದು ಆಶ್ಚರ್ಯವಾದರು ಅದನ್ನು ಒಂದು ದೊಡ್ಡ ಅದೃಷ್ಟ ಎಂದು ಸೂಳೆಯು ಭಾವಿಸುತ್ತಾಳೆ. "ನಾವಾಯ್ತು ನಮ್ ಬಂಗ್ಲೇ ಆಯ್ತು ನಮ್ಮ್ ಸುಖ ನಮ್ಮದಾಯ್ತು"! ಅಂತ ಸಂತೋಷವಾಗಿ ಇರ್ದೆ ಈ ಪ್ರಾಣೀಗೆ ಈ ವಯಸ್ನಲ್ಲಿ ತಾನು ಸುಖವಾಗಿದ್ರೂ ದೇವ್ರ್ ಎದುರ್ಗೆ ತನ್ನ ಹಾಗೇ ಹೆಂಗಸ್ರಾಗಿ ಹುಟ್ಟಿ ನರಳ್ತಿರೊ ನನ್ನಂಥಾವ್ರ ಯೋಚ್ನೆ ತಗಲಿರೋ ಈ ಹುಚ್ಚು ಯಾಕ್ ಹುಟ್ಟಿದ್ದೋ ಕಾಣೆ" (ಪು. ೫೨೮)[೨೩] ಎಂದು ಹೇಳುವ ಸೂಳೆಗೆ ಲೇಡಿ ಶಿವದಾಸ ಐಯ್ಯರ್‌ರ ಬಗ್ಗೆ ಬಹಳ ಗೌರವ. ಸೂಳೆಯರನ್ನು ಕೀಳಾಗಿ ಕಾಣುವ ಸಮಾಜದಲ್ಲಿ ಅವರಂತವರು ತನ್ನ ಮನೆಗೆ ತಾವಾಗೆ ಬಂದದ್ದು ಸೂಳೆಗೆ ದೇವರನ್ನು ನೋಡಿದ ಹಾಗೆ ಅನಿಸುತ್ತದೆ. ಆದರೂ ಲೇಡಿ ಶಿವದಾಸ ಐಯ್ಯರ್‌ರಂತವರ ಸುಧಾರಣವಾದಿಗಳ ಬಗ್ಗೆ ಮತ್ತು ಅವರ ಸಮಾನ ಸಮಾಜದ ಬಗ್ಗೆ ಸೂಳೆಗೆ ಅಷ್ಟೊಂದು ನಂಬಿಕೆ ಮತ್ತು ಭರವಸೆ ಇಲ್ಲ. ಲೇಡಿ ಶಿವದಾಸ ಐಯ್ಯರ್‌ರನ್ನು ವೈಯಕ್ತಿಕವಾಗಿ ಬಹಳ ಮೆಚ್ಚುವ ಸೂಳೆಯು ಅವರ ಸಹಪಾಟಿಗಳ ಬಗ್ಗೆ ಅನುಮಾನ ವ್ಯಕ್ತಪಡಿಸುತ್ತಾಳೆ. ಸೂಳೆ ಹೇಳೊ ಹಾಗೆ "ನಿಮ್ಮ ಬಂಗ್ಲೆಗಳಲ್ಲಿ ಗೋಡೇಗ್ ತಗ್ಲ್ ಹಾಕೋ ಸೀತಾ, ಸಾವಿತ್ರಿಗ್ಳ ಪಟಗಳ್ನೇ ನಮ್ ಮನೇಲ್ಲೂ ಗೋಡೇಗ್ ತಗ್ಲ್ ಹಾಕೊಂಡಿರೋದು ಮನ್ತನ್ದ ಮಾಮೂಲು. ಇದೊಂದೇ ನಮ್ಮಿಬ್ರ ಬಾಂಧವ್ಯ. ನೀವೆಲ್ಲಿ?...... ನಾವೆಲ್ಲಿ? ಸಮಾಜದಲ್ಲಿ!?!" (ಪು. ೫೩೧).[೨೪] ಸೂಳೆಗೆ ಸಮಾಜದಲ್ಲಿ ತನ್ನ ಸ್ಥಾನಮಾನದ ಬಗ್ಗೆ ಸಾಕಷ್ಟು ಅರಿವು ಇದೆ. ಮೊದಲಿಂದಲೂ ತಾನು ಬೇರೆಯವರಿಗಿಂತ ಯಾಕೆ ಕೀಳು ಮಟ್ಟದಲ್ಲಿದ್ದಿನಿ ಅಂತ ಆಶ್ಚರ್ಯ ಮತ್ತು ಬೇಸರ. ನಾಟಕದ ಪ್ರಾರಂಭದಲ್ಲಿಯೇ ತನ್ನ ತಾಯಿಗೆ ಸೂಳೆಗಾರಿಕೆಯ ಅನಿಷ್ಟತೆಯ ಬಗ್ಗೆ ಬೇಸರ ವ್ಯಕ್ತಪಡಿಸುತ್ತಾಳೆ. ಕೆಲವರನ್ನು "ಕುಲೀನ"ರನ್ನಾಗಿಯು, ಇನ್ನು ಕೆಲವರನ್ನು "ಹೀನ"ರನ್ನಾಗಿಯೂ ಸೃಷ್ಟಿಸಿದ ದೇವರ ಪಕ್ಷಪಾತವನ್ನು ದೂಷಿಸುತ್ತಾಳೆ.

ಜೀವನದಲ್ಲಿ ಸಾಕಷ್ಟು ದುಃಖವನ್ನು ಅನುಭವಿಸಿದ ಸೂಳೆಗೆ ತಮ್ಮಂತ ಬಡವರಿಗೆ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನ ದೊರಕುವುದು ಅಸಾಧ್ಯ ಎಂಬ ಸ್ಪಷ್ಟ ಅರಿವಿದೆ. ಎಲ್ಲರೂ ಸಹೋದರಿಯರಂತೆ ಎಂದು ಹೇಳುವ ಲೇಡಿ ಶಿವದಾಸ ಐಯ್ಯರ್‌ರರಿಗೆ ಸಮಾಜದಲ್ಲಿನ ಅಸಮಾನತೆಯ ಬಗ್ಗೆ ಸೂಳೆಯು ಎಚ್ಚರಿಸುತ್ತಾಳೆ. ಮುವತ್ತೊಂಬತ್ತು ವಯಸ್ಸಿನಲ್ಲಿ ಸಾಕಷ್ಟು ಗಂಡಸರ ಅನುಭವ ಪಡೆದ ಸೂಳೆ ಸ್ತ್ರೀಯರ ಕಷ್ಟ-ಕಾರ್ಪಣ್ಯಗಳಿಗೆ ಗಂಡಸೆ ಕಾರಣ ಎಂದು ಹೇಳುತ್ತಾಳೆ :

> ಇಬ್ಬನರ್ೂ ಹೆಂಗ್ಸಾಗಿ ಹುಟ್ಟಿದ ಜನ್ಮಾನೆಲ್ಲಾ ತನ್ನ ಆಹಾರ ನಿದ್ರೆ ಮೈಥುನಕ್ಕೆ ಗರ್ತಿನೂ ಸೂಳೇನ್ನೂ ಗೊಂಬೆಗ್ಳ ಹಾಗೆ ಆಡಿಸ್ತ್ರೋ ಗಂಡು ಮೃಗದಿಂದ್ಲೇ ನಿಮ್ಮ.....ನಮ್ಮಿ ಸ್ಥಿತೀಗೆ ಮೂಲಕಾರಣವಾದ ತಿಳಿದು ತಿಳಿಯಲೊಲ್ಲದ ಗಂಡು ಮೃಗದಿಂದಲ್ಲೆ (ಪು. ೫೩೩).[೨೫]

ಹೀಗೆ ಸ್ತ್ರೀಯರ ಬಗ್ಗೆ ಮಾತಾನಾಡುವಾಗ ಸೂಳೆಯು ಎಲ್ಲಾ ಸ್ತ್ರೀಯರ ಕಷ್ಟಗಳನ್ನು ಪ್ರಾತಿನಿಧಿಸುವ ವಿಶಾಲ ಮನೋಭಾವನೆಯನ್ನು ತೋರಿಸುತ್ತಾಳೆ. ಅಂದರೆ ಎಲ್ಲಾ ಸ್ತ್ರೀಯರ ದುಃಸ್ಥಿತಿಗೆ ಗಂಡಸರ ಶೋಷಣೆಯೆ ಕಾರಣ ಎಂದು ಮನವರಿಕೆ ಮಾಡುತ್ತಾಳೆ. ಅವಳೇ ಹೇಳುವ ಪ್ರಕಾರ "ಹೆಂಗ್ಸಿನ ಯೋಗ್ತ್ಯೇ ಗಂಡ್ಸು ತಿಳೀದೇನೂ ಗಂಡ್ಸಿನ ಅಯೋಗ್ಯತೇಗೆ ಹೆಂಗ್ಸು ಕಣ್ ಮುಚ್ಕೊಂಡೂನೂ ಇರೋದ್ರಿಂದ್ಲೇ ಈ ಅವಸ್ಥೆಗಳೆಲ್ಲಾ ಈಗಿರೋದು, ಸಮಾಜಕ್ಕೆ"! (ಪು. ೫೩೩).[೨೬]

ನಾಟಕದುದ್ದಕ್ಕೂ ಸಮಾಜದ ಬಗ್ಗೆ ತಿರಸ್ಕಾರ ಭಾವನೆ ಇದ್ದು, ಅದನ್ನು ಒಳ್ಳೆಯ ರೀತಿಯಲ್ಲಿ ಮಾರ್ಪಡಿಸುವ ಪ್ರಯತ್ನಗಳು ವ್ಯರ್ಥ ಎಂಬ ನಿರಾಶಭಾವವಿದೆ. ದೇವದಾಸಿ/ ಸೂಳೆಗಾರಿಕೆಯನ್ನು ನಿರ್ಮೂಲನ ಮಾಡಲು ಮತ್ತು ಸ್ತ್ರೀಯರ ಅಭಿವೃದ್ಧಿಗಾಗಿ ಶಾಸನಗಳನ್ನು ಮಾಡುವ ಪ್ರಯತ್ನಗಳ ಸಾರ್ಥಕತೆಯನ್ನು ನಾಟಕದಲ್ಲಿ ಪ್ರಶ್ನಿಸಲಾಗಿದೆ. ಸಮಾಜದ ಮೂಲಭೂತ ಸಮಸ್ಯೆಯಾದ ಬಡತನ, ಸ್ತ್ರೀಯರ ನಡುವೆ ಇರುವ "ಅಂತಸ್ತು ತರಾತಮೆಗಳು" (ಪು. ೫೩೭)[೨೭] ಮತ್ತು ಜನರ ಆರ್ಥಿಕ ಮುಗಟ್ಟನ್ನು ಅರ್ಥಮಾಡಿಕೊಳ್ಳದೆ ಯಾವುದೇ ಸುಧಾರಣೆಯು ಸಾಧ್ಯವಿಲ್ಲ ಎಂದು ವಾದಿಸಲಾಗಿದೆ. ಇಲ್ಲಿ ಗಮನಿಸಬೇಕಾದುದು ಏನೆಂದರೆ ಶ್ರೀಮಂತ-ಬಡವ ಎಂಬ ಭೇದ-ಭಾವವಿರುವವರೆಗೆ ಮತ್ತು ಸಮಸ್ಯೆಗಳಿಗೆ ಒಬ್ಬ ವ್ಯಕ್ತಿಯಲ್ಲದೆ ಎಲ್ಲರೂ ಜವಾಬ್ದಾರರು ಎಂಬ ಅರಿವು ಮೂಡುವವರೆಗೆ ಸಮಾಜದಲ್ಲಿ ಯಾವುದೇ ತರಹದ ಸುಧಾರಣೆಗಳು ಸಾಧ್ಯವಿಲ್ಲ ಎಂಬುದು.

ಸೂಳೆ ಮತ್ತು ಲೇಡಿ ಶಿವದಾಸ ಐಯ್ಯರ್‌ರ ನಡುವೆ ನಡೆಯುವ ಸಂಭಾಷಣೆಯು ನಾಟಕದಲ್ಲಿ ಒಂದು ಬಾಗ. ನಾಟಕವು ಸೂಳೆಗಾರಿಕೆ ವಿಷಯವನ್ನು ಆರ್ಥಿಕ ಮಗ್ಗಲುಗಳಿಂದ ಚರ್ಚಿಸಿದರೂ, ಸಮಸ್ಯೆಗೆ ಯಾವುದೇ ರೀತಿಯ ಪರಿಹಾರವನ್ನು ಸೂಚಿಸುವುದಿಲ್ಲ. ಸಮಾಜ ಆಧುನಿಕವಾಗುತ್ತಿದ್ದರೂ "ಪರಕೀಯ ಜನರ ಭಾಷೆ, ನಾಗರೀಕತೆ ಇತ್ಯಾದಿ ಸಂಪರ್ಕಕ್ಕೆ ಸೋತು, ಸ್ವಧರ್ಮಾನೇ ತೊರೆದು" (ಪು. ೫೪೦)[೨೮] ಜನ ಬಾಳುವೆ ಸಾಗಿಸುತ್ತಿರುವುದರಿಂದ ಮತ್ತು ಸೂಳೆಯಂತಹ ಸ್ತ್ರೀಯರು ಇತರರಂತೆ ಸಾಮಾನ್ಯ ಬದುಕನ್ನು ಸಾಗಿಸಲು ಪಡುವ ಪ್ರಯತ್ನಗಳನ್ನು ಅರ್ಥಮಾಡಿಕೊಳ್ಳಲಾಗದೆ ಹೋದುದರಿಂದ ಸೂಳೆ ಮತ್ತು ಆಕೆಯ ಹದಿ ಹರೆಯದ ಹದಿನಾಲ್ಕು ವರ್ಷದ ಮಗಳು ಆತ್ಮಹತ್ಯೆ ಮಾಡಿಕೊಳ್ಳಬೇಕಾಗುತ್ತದೆ ಎಂದು ಶೋಕಿಸಲಾಗಿದೆ. ಆಧುನಿಕ ಜಗತ್ತು ಸೂಳೆಯಂತಹ ಸ್ತ್ರೀಯರ ಮೂಲಭೂತ ಸಮಸ್ಯೆಯನ್ನು ಅರ್ಥಮಾಡಿಕೊಳ್ಳದಾದಾಗ ಆಗುವ ದುರಂತವನ್ನು ಸೂಳೆ ನಾಟಕವು ಚಿತ್ರಿಸುತ್ತದೆ. ಸೂಳೆಯ ಅಂತ್ಯವು ಒಲವಿನ ಅಂತ್ಯವೂ ಆಗುತ್ತದೆ.

## ಭಾಗ-ನಾಲ್ಕು

### ವಾಸ್ತವತೆ, ಸೂಳೆ ಪದ್ಧತಿ ಮತ್ತು ಚರಿತ್ರೆ

ಕೈಲಾಸಂರನ್ನು ವಾಸ್ತವ ನಾಟಕಗಳ ಹರಿಕಾರ ಮತ್ತು ಸಾಮಾಜಿಕ ಸುಧಾರಣೆಯನ್ನು ಪ್ರತಿಪಾದಿಸಿದ ಕ್ರಾಂತಿಕಾರ ಎಂದು ವರ್ಣಿಸಲಾಗಿದೆ (ಎ.ಎನ್. ಮೂರ್ತಿರಾವ್, (೨೦೦೦-೧೦೭).[೨೯] ಸೂಳೆಯರನ್ನು ಮತ್ತು ಸೂಳೆಗಾರಿಕೆ ಪದ್ಧತಿಯನ್ನು ತುಚ್ಛವಾಗಿ ಕಾಣುತ್ತಿದ್ದ ಕಾಲದಲ್ಲಿ ಸೂಳೆಗೂ ಹೃದಯ, ಮನಸ್ಸು ಮತ್ತು ಭಾವನೆಗಳು ಇವೆ ಎಂದು ಕೈಲಾಸಂರು ತೋರಿಸಿರುವರು. ಆಕೆಯೂ ಸಹ ಹಲವರಂತೆ ಸಹಜ ಮತ್ತು ಪ್ರಾಮಾಣಿಕವಾದ ಸ್ತ್ರೀ ಎಂದು ನಂಬಿದ್ದಾರೆ. ಸೂಳೆಗಾರಿಕೆಯನ್ನು ಮತ್ತು ಅದರ ಸುತ್ತ-ಮುತ್ತ ಇರುವ ಸಮಸ್ಯೆಯನ್ನು ಚಿತ್ರಿಸಿರುವ ಕೈಲಾಸಂರವರು ವಾಸ್ತವವನ್ನು ಎಷ್ಟರಮಟ್ಟಿಗೆ ಅರ್ಥಮಾಡಿಕೊಂಡಿದ್ದರು? ಕಂಪನಿ ನಾಟಕಗಳನ್ನು ಅವುಗಳ ಆಡಂಬರಕ್ಕೆ, ಅವಾಸ್ತವಿಕ ಕಥೆ ಮತ್ತು ಪಾತ್ರಗಳನ್ನು ನಂ ಕಂಪ್ನಿಯಲ್ಲಿ ಗೇಲಿ ಮಾಡಿದ ಕೈಲಾಸಂರು ವಾಸ್ತವ ಜೀವನದಲ್ಲಿನ ಸೂಳೆಯ ಸಮಸ್ಯೆಗಳಿಗೆ ಎಷ್ಟರಮಟ್ಟಿಗೆ ಸ್ಪಂದಿಸಿದ್ದಾರೆ? ಕೆ. ಮರುಳ ಸಿದ್ಧಪ್ಪನವರ ಪ್ರಕಾರ ಸೂಳೆಗಾರಿಕೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಕೈಲಾಸಂರವರು ವಿಫಲರಾಗಿದ್ದಾರೆ. ಸೂಳೆ ನಾಟಕವನ್ನು ವಿಮರ್ಶಿಸುತ್ತಾ ವಾಸ್ತವವನ್ನು ಅರ್ಥಮಾಡಿಕೊಳ್ಳಲು ಕೈಲಾಸಂರು ಪ್ರದರ್ಶಿಸಿರುವ ಮಿತಿಯ ಬಗ್ಗೆ ಹೀಗೆ ಹೇಳಿದ್ದಾರೆ :

> 'ಸೂಳೆ'ಯಲ್ಲಿ ಹೆಣ್ಣಿನ ಶೋಷಣೆಯ ಮತ್ತೊಂದು ನಮೂನೆಯನ್ನು ಚಿತ್ರಿಸುವ ಕೈಲಾಸಂ, ನಾಟಕದ ಮುಕ್ತಾಯಕ್ಕೆ ಸೂಳೆಯ ಆತ್ಮಹತ್ಯೆಯಿಂದ ಪರಿಹಾರ ಒದಗಿಸಿದ್ದಾರೆ. ಸೂಳೆ, ಬಹಿಷ್ಕಾರ ಎರಡೂ ನಾಟಕಗಳಲ್ಲಿ ಕೇಂದ್ರ ಪಾತ್ರಗಳ ಆತ್ಮಹತ್ಯೆ ಅಪರಿಹಾರ್ಯವೆಂಬಂತೆ ಚಿತ್ರಿಸುವ ನಾಟಕಕಾರರು ಪಾತ್ರ ರಚನೆಯಲ್ಲಿ ಭಾವನಾಮಯತೆಗೆ ಎಡೆಮಾಡಿ ಕೊಡುವುದು ಅನಿವಾರ್ಯವಾಗಿದೆ. ಸೂಳೆಗಾರಿಕೆಯನ್ನು ಸಾಮಾಜಿಕ ವಿಕೃತಿಯೆಂದು ಮಾತ್ರ ಭಾವಿಸಿರುವ ನಾಟಕಕಾರರು ಅಲ್ಲಿ ಅಂತರ್ಗತ ವಾಗಿರುವ ಆರ್ಥಿಕ, ಲೈಂಗಿಕ ಕಾರಣಗಳನ್ನು ಗಮನಿಸಿಲ್ಲ. ನಾಟಕಕಾರರ ಸುಧಾರಕ ಪ್ರವೃತ್ತಿ ಮೇಲುಗೈಯಾಗಿ ಪಾತ್ರಗಳು ಸಹಜವಾಗಿ ಆವಿಷ್ಕಾರ ಗೊಳ್ಳುವುದಿಲ್ಲ (ಪು. ೧೪೩).[೩೦]

ಮರುಳ ಸಿದ್ಧಪ್ಪನವರು ಕೈಲಾಸಂರವರು ಮೂಲತಃ ಸಂಪ್ರದಾಯವಾದಿಗಳು ಮತ್ತು ಅವನತಿಯ ಹಾದಿ ಹಿಡಿದಿದ್ದ ವೈದಿಕ ಸಂಸ್ಕೃತಿಯನ್ನು ತಮ್ಮ ನಾಟಕಗಳ ಮೂಲಕ ಎತ್ತಿ ಹಿಡಿದರು ಎಂದು ವಾದಿಸಿದ್ದಾರೆ. ಆದರೆ ಅವರ ವಿಮರ್ಶೆ ಪಠ್ಯದ ಆಚೆ ಹೋಗದೇ ಇರುವುದರಿಂದ ಸಂಪ್ರದಾಯ ಧೋರಣೆಯನ್ನು ಕೈಲಾಸಂರು ಯಾವ ರೀತಿಯಲ್ಲಿ ಮೈಗೂಡಿಸಿಕೊಂಡಿದ್ದರು ಮತ್ತು ಯಾವ ವಿಧದಲ್ಲಿ ವ್ಯಕ್ತಪಡಿಸಿದರು ಎಂಬ ವಿವರವು

ಸಿಗುವುದಿಲ್ಲ. ಹಾಗಾಗಿ ಸಮಾಜದ ವಾಸ್ತವತೆಗೂ ಮತ್ತು ನಾಟಕದ ವಾಸ್ತವತೆಗೂ ಇರುವ ವ್ಯತ್ಯಾಸಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಕೈಲಾಸಂರ ಸೂಳೆಯನ್ನು ಅಂದಿನ ಸಾಮಾಜಿಕ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಚರ್ಚಿಸಬೇಕಾಗುತ್ತದೆ.

ಸೂಳೆಯು ನಾಟಕದ ಮಧ್ಯದಲ್ಲಿ ಒಮ್ಮೆ ಸೂಳೆ /Prostitution ಎಂಬ ಪದಗಳನ್ನು ಕೇಳುತ್ತಿದಂತೆ ಸೂಳೆಯು ಅದರ ವಿರುದ್ಧ ಆಕ್ಷೇಪ ಎತ್ತುತ್ತಾಳೆ. ಲೇಡಿ ಶಿವದಾಸ ಐಯ್ಯರ್ ಸ್ನೇಹಿತ ರಾಮ್ರಾಯ ಸೂಳೆಯನ್ನು ಅವರಿಗೆ ಪರಿಚಯಿಸುವಾಗ Prostitution ಪದವನ್ನು ಉಪಯೋಗಿಸುತ್ತಾನೆ. ಇದನ್ನು ಕೇಳಿದ ಸೂಳೆಗೆ "ಮೈ ಉರಿದಿದ್ದಲ್ದೆ, ಕಣ್ಣುಗಳು ಕಿಡಿ ಕಾರಿದವು" (ಪು. ೫೨೮).[೩೧] ಸೂಳೆ ಪದವನ್ನು ಹಿಡಿದು ಕರೆಯುವವರ ವಿರುದ್ಧ ಈ ರೀತಿಯಾಗಿ ಸ್ವಾಭಿಮಾನ ವ್ಯಕ್ತಪಡಿಸುವ ಸೂಳೆಯು ಅಂದಿನ ವೇಶ್ಯ/ದೇವದಾಸಿ ಸಮುದಾಯದ ಸ್ವ-ಗೌರವ ಚಳುವಳಿಯ ಸಂಕೇತವಾಗುತ್ತಾಳೆ. ನಾಟಕದಲ್ಲಿ ವೇಶ್ಯ/ದೇವದಾಸಿ ಸಮುದಾಯದ ಬಗ್ಗೆ ಹೆಚ್ಚಿನ ವಿವರಗಳಿಲ್ಲದಿದ್ದರೂ, ಸೂಳೆಗಾರಿಕೆ/ದೇವದಾಸಿ ಪದ್ಧತಿಯ ಸುಧಾರಣೆಗೆ ಅಂದು ಆಗುತ್ತಿದ್ದ ವಾದ-ವಿವಾದಗಳ ನಡುವೆ ಸೂಳೆ ಎಂಬ ಪದವು ವಿಶೇಷವಾದ ಚಾರಿತ್ರಿಕ ಅರ್ಥವನ್ನು ಹೊಂದಿದೆ. ಕೈಲಾಸಂ ಈ ನಾಟಕವನ್ನು ಬರೆಯಲು ನಿರ್ಧರಿಸಿದ್ದು ಮದರಾಸಿನಲ್ಲಿದ್ದಾಗ. ೧೯೪೨ರಲ್ಲಿ ತಮ್ಮ ಬಂಧು-ಮಿತ್ರರನ್ನು ನೋಡಲು ಕೈಲಾಸಂರು ಮದ್ರಾಸಿಗೆ ಹೋಗಿದ್ದರು. ಅಲ್ಲಿಂದ ಜಿ.ಪಿ. ರಾಜರತ್ನಂಗೆ ಬರೆದ ಪತ್ರದಲ್ಲಿ ಈ ನಾಟಕವನ್ನು ಬರೆಯುವ ಇಂಗಿತವನ್ನು ವ್ಯಕ್ತಪಡಿಸಿದ್ದಾರೆ (ವಿಜಿಕೆ, ೧೯೯೯. ಪು. ೨೯).[೩೨] ಸೂಳೆಯೊಬ್ಬಳ ಜೀವನ ಚರಿತ್ರೆ ಮತ್ತು ಅವಳ ಪ್ರಾಮಾಣಿಕತೆಯನ್ನು ಪರಿಚಯಿಸುವ ಈ ನಾಟಕವು ಅಂದು ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಜಾರಿಗೆ ತರಬೇಕೆಂದುಕೊಂಡಿದ್ದ ದೇವದಾಸಿ ಪದ್ಧತಿ ರದ್ದು ಶಾಸನ ಬಗೆಗಿನ ವಾದ-ವಿವಾದಗಳಿಗೆ ಪ್ರತಿಕ್ರಿಯೆಯಾಗಿದೆ. ಈ ಶಾಸನವನ್ನು ರೂಪಿಸಲು ಮತ್ತು ಜಾರಿಗೆಗೊಳಿಸಲು ಆದ ವಾದ-ವಿವಾದಗಳು ಭಾರತೀಯ ಸ್ತ್ರೀಯರ ಇತಿಹಾಸದಲ್ಲಿ ಒಂದು ಪ್ರಮುಖ ಘಟ್ಟ.

೧೯೩೦ರ ದಶಕದಲ್ಲಿ ದೇವದಾಸಿ ಪದ್ಧತಿಯನ್ನು ರದ್ದು ಮಾಡುವ ಶಾಸನವನ್ನು ಹೊರಡಿಸಬೇಕೆಂದು ಸಮಾಜ ಸುಧಾರಣೆ ಚಳುವಳಿಯ ಸ್ತ್ರೀಯರು ಪ್ರಯತ್ನಪಟ್ಟರು. ದೇವದಾಸಿ ಪದ್ಧತಿಯು ಒಂದು ಸಾಮಾಜಿಕ ಪಿಡುಗು, ಅದು ಆಧುನಿಕ ಭಾರತಕ್ಕೆ ಕಳಂಕವನ್ನು ತರುತ್ತದೆ ಎಂದು ಅದನ್ನು ರದ್ದು ಮಾಡಲು ಮದ್ರಾಸ್ ಸರಕಾರವನ್ನು ಒತ್ತಾಯ ಮಾಡಲಾಯಿತು. ಪಾರಂಪರಿಕವಾಗಿ ಹಿಂದೂ ಧರ್ಮದಲ್ಲಿ ಅಂಗೀಕೃತವಾದ ಈ ಪದ್ಧತಿಯು ಆಧುನಿಕ ಕಾಲದಲ್ಲಿ ಸೂಳೆಗಾರಿಕೆಗೆ ಹಾದಿ ಮಾಡಿಕೊಟ್ಟಿರುವುದರಿಂದ ಅದನ್ನು ನಿರ್ಮೂಲನ ಮಾಡುವುದು ಸಮಾಜದ ನೈತಿಕತೆಗೆ ಮತ್ತು ಆರೋಗ್ಯಕ್ಕೆ ಒಳಿತು ಎಂದು ವಾದಿಸಲಾಯಿತು. ಹೀಗೆ ಈ ಶಾಸನದ ಅವಶ್ಯಕತೆಯನ್ನು ಮನನ ಮಾಡಿಕೊಡುವಲ್ಲಿ Women's India Association ನ ಮುತ್ತುಲಕ್ಷ್ಮಿ ರೆಡ್ಡಿಯ ಪಾತ್ರ ಹಿರಿದು. ಮುತ್ತುಲಕ್ಷ್ಮಿಯ ಜೊತೆಗೆ ಇತರ ಜಾತಿಯ ಸಂಸ್ಥೆಗಳು ಸಹ ಸಹಕಾರ ನೀಡಿದವು. ಗಾಂಧಿಯ ಸಿದ್ಧಾಂತಗಳಿಂದ

ಪ್ರಭಾವಿತರಾದ ಮುತ್ತುಲಕ್ಷ್ಮಿ ರೆಡ್ಡಿಯ ಪ್ರಯತ್ನವು ಬಹಳಷ್ಟು ವಿರೋಧವನ್ನು ಎದುರಿಸಬೇಕಾಯಿತು. ರಾಷ್ಟ್ರೀಯ ಕಾಂಗ್ರೆಸ್‌ನ ಸಂಪ್ರದಾಯಸ್ಥರೆ ಈ ಶಾಸನ ಪ್ರಯತ್ನವನ್ನು ಪ್ರಬಲವಾಗಿ ಎದುರಿಸಿದರು. ಅವರಲ್ಲಿ ಎಸ್. ಸತ್ಯಮೂರ್ತಿಯವರು ಪ್ರಮುಖರು. ಶಾಸನದ ಬಗ್ಗೆ ಮದ್ರಾಸ್ ಅಸೆಂಬ್ಲಿಯಲ್ಲಿ ಚರ್ಚೆ ನಡೆಯುತ್ತಿದ್ದಾಗ, ಸತ್ಯಮೂರ್ತಿಯು ದೇವದಾಸಿಗಳ ಸಭೆಯನ್ನು ನಡೆಸಿದರು. ಸಭೆಯ ಪ್ರಮುಖ ಕಾರಣ ಶಾಸನದ ಪ್ರಯತ್ನಗಳನ್ನು ವಿಫಲಗೊಳಿಸುವುದು. ಅವರ ಪ್ರಕಾರ ದೇವದಾಸಿ ಪದ್ಧತಿಯು ಭಾರತೀಯ/ರಾಷ್ಟ್ರೀಯ ಸಂಸ್ಕೃತಿಯ ಪ್ರತೀಕ. ದೇವದಾಸಿ ಪದ್ಧತಿಯನ್ನು ರದ್ದು ಮಾಡಿದರೆ ಮುಂದೆ ದೇವಸ್ಥಾನಗಳಲ್ಲಿ ಬ್ರಾಹ್ಮಣರ ಪೌರೋಹಿತ್ಯವನ್ನು ರದ್ದು ಮಾಡಬೇಕೆಂದು ಬ್ರಾಹ್ಮಣೇತರರು ಒತ್ತಾಯ ಮಾಡುತ್ತಾರೆ ಎಂದು ಎಚ್ಚರಿಸಿದರು. ಸತ್ಯಮೂರ್ತಿಯು ಶಾಸನದ ವಿರುದ್ಧ ಅಸೆಂಬ್ಲಿಯಲ್ಲಿ ಬಹಳಷ್ಟು ಗಲಾಟೆ ಮಾಡಿದರು. ಸ್ವತಃ ಬ್ರಾಹ್ಮಣರಾಗಿದ್ದ ಸತ್ಯಮೂರ್ತಿಯು ಬ್ರಾಹ್ಮಣರ ಹಿತಾಸಕ್ತಿಯನ್ನು ಕಾಪಾಡಲು ಬಹಳಷ್ಟು ಪ್ರಯತ್ನಪಟ್ಟರು. ಹೀಗೆ ಪ್ರಗತಿಪರ ಮುತ್ತುಲಕ್ಷ್ಮಿ ಮತ್ತು ಆಕೆಯ ಅನುಯಾಯಿಗಳು ಒಂದು ಕಡೆಯಾದರೆ, ಬ್ರಾಹ್ಮಣ ಸಂಪ್ರದಾಯಸ್ಥರ ಪ್ರಮುಖರಾದ ಸತ್ಯಮೂರ್ತಿಯು ಮತ್ತೊಂದು ಕಡೆ. ಇವರಿಬ್ಬರ ನಡುವೆ ಸಮುದಾಯದ ಗೌರವಕ್ಕಾಗಿ ಶಾಸನದ ಪರ ಮತ್ತು ವಿರೋಧಿಗಳು ದೇವದಾಸಿ, ಜಾತಿ/ಸಮುದಾಯಗಳಲ್ಲಿಯೂ ಹುಟ್ಟಿಕೊಂಡರು. ಆಧುನಿಕಗೊಳ್ಳಲು ಮತ್ತು ತಮ್ಮ ಸಮಾಜವನ್ನು ಇತರರಂತೆ ಸುಧಾರಿಸಿಕೊಳ್ಳಲು ಪ್ರಯತ್ನಿಸಿದ್ದ ಮಧ್ಯಮ ವರ್ಗದ "ಸೆನುಗೌಂಡರ್ ಮತ್ತು ಇಸೈವೆಲ್ಲಾಲ್ಲರು ದೇವದಾಸಿ ಪದ್ಧತಿಯು ತಮ್ಮ ಸಮುದಾಯಕ್ಕೆ ಕಳಂಕವೆಂದು ಶಾಸನವನ್ನು ಬೆಂಬಲಿಸಿದರೆ" (ಎಸ್. ಆನಂದಿ, ೧೯೯೧-೭೪೧),[೩೩] ಗಣಿಕ ಸಮುದಾಯದ (ದೇವದಾಸಿ ಪರಂಪರೆಯುಳ್ಳ ಸಮುದಾಯ) ಪ್ರಸಿದ್ಧ ಗಾಯಿಕಿ ಬೆಂಗಳೂರು ನಾಗರತ್ನಮ್ಮನಂತವರು ಶಾಸನದ ವಿರುದ್ಧವಾಗಿದ್ದರು. ಬೆಂಗಳೂರು ನಾಗರತ್ನಮ್ಮಳಿಗೆ ತನ್ನ ಸಮಾಜದ ಪಾರಂಪಾರಿಕ ದೇವದಾಸಿ ಪದ್ಧತಿಯು ಆಧುನಿಕ ಕಾಲದಲ್ಲಿ ವೇಶ್ಯಾ ವೃತ್ತಿಗೆ ದಾರಿ ಮಾಡಿಕೊಟ್ಟಿದೆ ಎಂಬ ಕಳವಳವಿದ್ದರೂ, ಪ್ರಗತಿಪರರ ಸಮಾಜ ಸುಧಾರಣೆಯು ಅವಳಿಗೆ ಮೇಲ್ಜಾತಿಯವರ ಕುತಂತ್ರವೆಂದು ಬಗೆದಿದ್ದಳು. ಆಕೆಯ ವಿರೋಧಕ್ಕೆ ಪ್ರಮುಖ ಕಾರಣವೇನೆಂದರೆ ಪ್ರಗತಿಪರರು "ಸ್ಥಳೀಯ ಸಾಮಾಜಿಕ ಆಚಾರ-ವಿಚಾರಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಪಾಶ್ಚಾತ್ಯರ ಧರ್ಮದ ಆಧಾರದ ಮೇಲೆ ದೇವದಾಸಿ ಪದ್ಧತಿಯನ್ನು ಅರ್ಥಮಾಡಿಕೊಂಡಿರುವುದು" (ಕಲ್ಪನ ಕನ್ನಬೀರನ್, ೧೯೯೫ : ಡಬ್ಲ್ಯೂಎಸ್-೬೭).[೩೪] ತನ್ನ ಗಣಿಕ ಸಮುದಾಯದ ಪರಂಪರೆಯ ಬಗ್ಗೆ ಹೆಮ್ಮೆ ಇದ್ದ ನಾಗರತ್ನಮ್ಮಳಿಗೆ ದೇವದಾಸಿ ಪದ್ಧತಿಯನ್ನು ರದ್ದು ಮಾಡುವುದು ಬ್ರಾಹ್ಮಣರ ಯಜಮಾನಿಕೆಯನ್ನು ಮರುಸ್ಥಾಪಿಸುವ ತಂತ್ರವಾಗಿತ್ತು. ಅವಕಾಶ ಸಿಕ್ಕಾಗಲ್ಲೆಲ್ಲ ಹಿಂದೂ ಧರ್ಮದ ಮೇಲೆ ಇದ್ದ ಬ್ರಾಹ್ಮಣರ ಸಾಂಪ್ರದಾಯಿಕ ಯಜಮಾನಿಕೆಯನ್ನು ಕಟುವಾಗಿ ಟೀಕಿಸಿದಳು. ತಮಗೂ ಹಿಂದೂ ಧರ್ಮದಲ್ಲಿ ಗೌರವದಿಂದ ಬಾಳಲು ಹಕ್ಕಿದೆ ಎಂದು ವಾದಿಸಿದಳು. ಹೀಗೆ ಬ್ರಾಹ್ಮಣ ಸಂಪ್ರದಾಯಸ್ಥರು, ರಾಷ್ಟ್ರೀಯ ಪ್ರಗತಿಪರರು

(ಬಹುತೇಕ ಮೇಲ್ಜಾತಿಯವರು) ಮತ್ತು ದೇವದಾಸಿ ಸಮುದಾಯದ ನಡುವೆ ನಡೆದ ವಾಗ್ವಾದಗಳು ಜಾತಿ/ಸಮುದಾಯಗಳ ನಡುವಿನ ಸಾಮಾಜಿಕ ಅಸಮಾನತೆಗಳ ಮೂಲವಾಗಿದ್ದವು. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ವಿವಿಧ ಜಾತಿ/ಸಮುದಾಯದ ಮಧ್ಯಮ ವರ್ಗದ ಸ್ತ್ರೀಯರ ಉಗಮ ಮತ್ತು ಮಧ್ಯಮ ವರ್ಗಗಳ ನಡುವಿನ ಘರ್ಷಣೆಗಳು ಜಾತಿಯ ಗುರುತಿನ ಆಧಾರದ ಮೇಲೆ ರೂಪಿತವಾಗಿರುವುದು. ಅಂದರೆ ಸ್ತ್ರೀಯರ ಪ್ರಶ್ನೆ/ಸಮಸ್ಯೆಗಳು ಸಮುದಾಯ/ಜಾತಿಯಿಂದ ನಿರ್ಧಾರಿಸ್ಪಟ್ಟಿದ್ದು. ಹೀಗೆ ರೂಪುಗೊಂಡ ಮಧ್ಯಮವರ್ಗದ ಸ್ತ್ರೀಯರ ಬಗ್ಗೆ ಸೂಸಿ ತಾರು ಮತ್ತು ತೇಜಸ್ವಿನಿ ನಿರಂಜನರವರು ಹೀಗೆ ಹೇಳಿದ್ದಾರೆ :

> ಹತ್ತೊಬ್ಬತ್ತನೆಯ ಶತಮಾನದಲ್ಲಿ ವೈಷ್ಣವ ಕಲಾಕಾರರ ವಿರುದ್ಧ ನಡೆದ ಭದ್ರಲೋಕದ ಸಮರ ಮತ್ತು ಮದ್ರಾಸ್ ಪ್ರಾಂತ್ಯದಲ್ಲಿ anti-nautch ಚಳುವಳಿಯಲ್ಲಿ ಮಧ್ಯಮ ವರ್ಗ ಸ್ತ್ರೀಯರ ನೈತಿಕತೆ ಮತ್ತು ಸಭ್ಯತೆಯು ಕೆಳ ಜಾತಿಯ/ವರ್ಗದ ಸ್ತ್ರೀಯರ ಅನ್ಯೆತಿಕತೆಯನ್ನು ತೆಗಳುವುದರ ಮೂಲಕ ರೂಪುಗೊಳಲ್ಪಟ್ಟಿತು (ಪು. ೨೪೨).[೩೫]

ಹತ್ತೊಬ್ಬನೇ ಶತಮಾನದ ಕೊನೆಯ ದಶಕಗಳಲ್ಲಿ ಮತ್ತು ಇಪ್ಪತ್ತನೇ ಶತಮಾನದ ಪೂರ್ವಾರ್ಧದಲ್ಲಿ ವೇಶ್ಯಾ ವೃತ್ತಿಯಲ್ಲಿ ತೊಡಗಿಸಿಕೊಂಡವರ ಸಾಮಾಜಿಕ ಹಿನ್ನೆಲೆಯು ಬಹಳ ಮುಖ್ಯ. ಬಹುತೇಕ ವೇಶ್ಯೆಯರು ಕೆಳಜಾತಿಯ ಮತ್ತು ಕೆಳವರ್ಗದಿಂದ ಬಂದವರಾಗಿದ್ದರು. ಬಡತನ, ಸಂಸಾರದಲ್ಲಿ ಒಡಕು, ವಿಧವೆತನದಿಂದ ಉಂಟಾದ ಒಂಟಿತನ ಮತ್ತು ದಾರಿದ್ರ್ಯ, ಬರಗಾಲದಲ್ಲಿ ಅನ್ನಕ್ಕಾಗಿ ಹುಡುಗಿಯರನ್ನು ಮಾರುವ ಪರಿಸ್ಥಿತಿ ಇತ್ಯಾದಿಗಳು ಮೂಲ ಕಾರಣವಾಗಿದ್ದವು. ದೇವದಾಸಿ ಪದ್ಧತಿಯು ವ್ಯಾಪಾರೀಕರಣದ ಪ್ರಕ್ರಿಯೆಗೆ ಒಳಗಾದಾಗ ನಗರಗಳಲ್ಲಿ ವೇಶ್ಯಾವೃತ್ತಿ ನಡೆಸುವ ಸ್ತ್ರೀಯರ ಸಂಖ್ಯೆಯು ಹೆಚ್ಚಾಯಿತು. ಹೀಗೆ ಈ ವೃತ್ತಿಯಲ್ಲಿ ತೊಡಗಿಸಿಕೊಂಡವರಲ್ಲಿ ಬಹುತೇಕ ಸ್ತ್ರೀಯರು ಮೇಲೆ ತಿಳಿಸಿದ ಹಿನ್ನೆಲೆಯಿಂದ ಬಂದವರಾಗಿದ್ದರು. ಮೈಸೂರು ಪ್ರಾಂತ್ಯದ ದೇವದಾಸಿ ಪದ್ಧತಿಯಲ್ಲಿ ತೊಡಗಿಸಿಕೊಂಡವರಲ್ಲಿ ಇಂತವರೆ ಪ್ರಮುಖರು. ಮೈಸೂರು ಸುತ್ತ-ಮುತ್ತ ಇದ್ದ ಕೈಕೊಳರು ಮತ್ತು ಕೋಲಾರದಲ್ಲಿದ್ದ ನಟುವ ಸಮುದಾಯದ ಸ್ತ್ರೀಯರು ದೇವದಾಸಿ ಪದ್ಧತಿಯನ್ನು ಆಚರಿಸುತ್ತಿದ್ದರು.[೩೬] ಇತರ ಪ್ರದೇಶಗಳಲ್ಲೂ ಸಹ ಇದೇ ಪರಿಸ್ಥಿತಿ ಇತ್ತು.[೩೭]

ಕೈಲಾಸಂರ ಕಾಲದಲ್ಲಿ ದೇವದಾಸಿ ಅಥವಾ ಸೂಳೆ ಎಂಬ ಪದವನ್ನು ಸಮಾನಾಂತರವಾಗಿ ಬಳಸಿದ್ದಾರೆ. ದೇವದಾಸಿ ಪದ್ಧತಿಯನ್ನು ರದ್ದುಗೊಳಿಸುವ ವಾದ-ವಿವಾದಗಳ ಬಗ್ಗೆ ಕೈಲಾಸಂರಿಗೆ ಅರಿವು ಇದ್ದರು ಅದರ ಸುತ್ತ-ಮುತ್ತ ಇದ್ದ ಸಾಮಾಜಿಕ ಮತ್ತು ರಾಜಕೀಯ ಅಂಶಗಳ ಬಗ್ಗೆ ಹೆಚ್ಚಿನ ಮಾತನಾಡುವುದಿಲ್ಲ. ಅಂದಿನ ಜಾತಿಯ ನಡುವಿನ ಸಂಬಂಧಗಳು ಮತ್ತು ಘರ್ಷಣೆಗಳ ಬಗ್ಗೆ ಮೌನ ತಾಳಿದುದರ ರೀತಿಯ ಬಗ್ಗೆ ವಿವರಣೆ ನೋಡಬೇಕಾದರೆ ಮೊದಲಿಗೆ ನೋಡಬೇಕಾದುದು ನಾಟಕದಲ್ಲಿ ಎಲ್ಲಿಯೂ ಸಹ ಸೂಳೆ ಮತ್ತು ಸೂಳೆಯ

ತಾಯಿಯ ಜಾತಿಯ ಬಗ್ಗೆ ಪ್ರಸ್ತಾವಿಲ್ಲದಿರುವುದು. ಕೈಲಾಸಂರವರು ಅವರಿಗೆ ಯಾವುದೇ ಹೆಸರನ್ನು ನೀಡದೆ, ಅವರ ಸಾಮಾಜಿಕ ಹಿನ್ನೆಲೆಯ ಬಗ್ಗೆ ಮೌನ ತಾಳಿದ್ದಾರೆ. ಆದರೆ ಅವರು ಹಿಂದೂ ಸಮುದಾಯಕ್ಕೆ ಸೇರಿದವರೆಂದು ಸೂಳೆಯ ತಾಯಿಯ ಧಾರ್ಮಿಕ ಆಚಾರಗಳ ಮುಖಾಂತರ ತಿಳಿಯುತ್ತದೆ. ಸೂಳೆಯ ಮನೆಯಲ್ಲಿ "ಗೋಡ್ಗೋಡೇಗೂ ದೇವರ್ಗೊಂಬೆ.... ಶನಿವಾರ್ಯನಿವಾರ ತಪ್ದೆ ಭಜನೆ....ಶುಕ್ರವಾರ್ಶ್ಕ್ರವಾರ ತಪ್ದೆ ಚಾಮುಂಡಿ ಪೂಜೆ..... ಬಂದ್ಬ್ರಾಹ್ಮಣ್ಣ್ರೀಗೆ ಕಾಯಿ ದಕ್ಷಿಣೆ....ಬೇಡದಕ್ಕೆ ವಾರಕ್ಕೊಪ್ಪತ್ತು ಉಪವಾಸ" (ಪು. ೫೧೨)[೩೮]ಗಳನ್ನು ಆಚರಿಸುವ ಸೂಳೆಯ ತಾಯಿಯು ಯಾವ ಜಾತಿಗೆ ಸೇರಿದ್ದವಳೆಂದು ಎಲ್ಲಿಯೂ ಹೇಳಿಲ್ಲ. ಹಿಂದೂ ಆಚಾರಗಳ ಬಗ್ಗೆ ಬರೆಯುವ ಕೈಲಾಸಂ ಅವುಗಳ ಮತ್ತು ಜಾತಿಯ ನಡುವೆ ಇರುವ ಸಾಮಾಜಿಕ ಸಂಬಂಧಗಳ ಬಗ್ಗೆ ದಿವ್ಯ ಮೌನ ತಾಳುತ್ತಾರೆ. ಸೂಳೆಗಾರ್ಕೆ ನಡೆಸುವ ಅವಳಿಗೂ ಮತ್ತು "ಸಭ್ಯ" ಗೃಹಸ್ಥರ ನಡುವೆ ಇರುವ ಭೇದ-ಭಾವಗಳ ಸ್ಪಷ್ಟ ಅರಿವಿರುವ ಕೈಲಾಸಂರಿಗೆ ಅವು ವರ್ಗ ವ್ಯತ್ಯಾಸಗಳಾಗಿ ಕಾಣಿಸುತ್ತವೆ. high Society (ಪು. ೫೩೧)[೩೯]- low society ಮತ್ತು ಶ್ರೀಮಂತ - ಬಡವ ಎಂಬ ಪರಿಕಲ್ಪನೆಗಳ ಮೂಲಕ ಇಬ್ಬರ ನಡುವಿನ ಸಾಮಾಜಿಕ ವ್ಯತ್ಯಾಸಗಳನ್ನು ತೇಲಿಸಿಬಿಡುತ್ತಾರೆ.

ಕೈಲಾಸಂಗೆ ಸೂಳೆ ಮತ್ತು ಗೃಹಸ್ಥ ಸ್ತ್ರೀಯರ ನಡುವೆ ಇರುವ ಸಂಬಂಧವು ತಾರತಮ್ಯತೆಯಿಂದ ಕೂಡಿದೆ ಎಂಬ ಸ್ಪಷ್ಟ ಅರಿವು ಇದ್ದರು, ಮತ್ತೊಂದು ಸಂದರ್ಭದಲ್ಲಿ ಎಲ್ಲಾ ಹೆಂಗಸರ ಶೋಷಣೆಗೆ ಗಂಡು ಮೃಗವೇ ಕಾರಣ ಎಂಬ ಕಾರಣವನ್ನು ನೀಡುತ್ತಾರೆ. ಗಂಡಿನ ಮುಂದೆ ಎಲ್ಲಾ ಸ್ತ್ರೀಯರು ಒಂದೇ ರೀತಿಯಲ್ಲಿ ಶೋಷಿತರಾಗಿದ್ದಾರೆ ಎಂಬ ಧೋರಣೆಯು ಕೈಲಾಸಂರ ಸಂಕುಚಿತ ವಾಸ್ತವವನ್ನು ಪ್ರದರ್ಶಿಸುತ್ತದೆ. ವಿವಿಧ ಜಾತಿ/ಸಮುದಾಯಗಳ ಸ್ತ್ರೀ/ಪುರುಷರ ನಡುವೆ ಸಾಮಾಜಿಕ ಸಂಬಂಧಗಳು ಪಿತೃಪ್ರಧಾನ ವ್ಯವಸ್ಥೆ ಮತ್ತು ವರ್ಗ/ಜಾತಿ ಮೂಲದ power realtions ಗಳನ್ನು ರಚಿಸುತ್ತದೆ ಎಂಬ ಅಂಶ ಕೈಲಾಸಂರ ನಾಟಕಗಳಲ್ಲಿ ಎಲ್ಲಿಯೂ ಚರ್ಚಿತವಾಗುವುದಿಲ್ಲ. ಸಹಸ್ರಾರು ಸೂಳೆಯ ಬಗ್ಗೆ ಅನುಕಂಪ ವ್ಯಕ್ತಪಡಿಸಿದರೂ ಅವರ ಆರ್ಥಿಕ ಸಮಸ್ಯೆಗಳನ್ನು ಸಾಮಾಜಿಕವಾಗಿ ವಿಶ್ಲೇಷಿಸುವಲ್ಲಿ ಕೈಲಾಸಂರವರು ಮೌನ ತಾಳಿದ್ದಾರೆ. ಕೈಲಾಸಂರ ಇಂತಹ ಧೋರಣೆಗೆ ಕಾರಣ ಅವರು ಪುರಾತನ ಹಿಂದೂ ಧರ್ಮ (ವರ್ಣಾಶ್ರಮ-ಕೇಂದ್ರಿತ)ದ ಬಗ್ಗೆ ಇರಿಸಿಕೊಂಡಿದ್ದ ಅಚಲ ನಂಬಿಕೆ ಮತ್ತು ಆಧುನಿಕ ಕಾಲದಲ್ಲಿ ಬೇರುಬಿಟ್ಟುಕೊಂಡಿದ್ದ ಜಾತಿ ರಾಜಕೀಯದ (ವಿಶೇಷವಾಗಿ ಬ್ರಾಹ್ಮಣೇತರ ಜಾತಿ/ಸಮುದಾಯ ಕೇಂದ್ರಿತ ಗುರುತಿನ ರಚನೆ) ಬಗ್ಗೆ ಇರಿಸಿಕೊಂಡಿದ್ದ ಅಸಮ್ಮತಿ.[೪೦]

ನಾಟಕದ ಮತ್ತೊಂದು ಅಂಶವನ್ನು ಮರುಳ ಸಿದ್ಧಪ್ಪನವರ ಮಾತುಗಳಲ್ಲೇ ಕೇಳಬಹುದು,

> ಕೈಲಾಸಂರವರ ಬಹುಪಾಲು ಸಾಮಾಜಿಕ ನಾಟಕಗಳ ನಾಯಕರೆಲ್ಲ ನಿಷ್ಕ್ರಿಯತೆಯಿಂದಾಗಿ ದುಃಖವನ್ನು ಅನುಭಸುತ್ತಿರುವವರು. ಸಾಮಾಜಿಕ ಅನ್ಯಾಯಗಳನ್ನು ಎದುರಿಸದೆ ಪ್ರತಿಭಟಸದೆ ಸಹಿಸಿಕೊಂಡು, ಮೂಕವೇದನೆ

> ಯನ್ನು ಅನುಭವಿಸುವ ಈ ನತದೃಷ್ಟರ ಮೂಲಕ ಪ್ರತಿಷ್ಠಿತ ವರ್ಗದ ಕ್ರೌರ್ಯವನ್ನು, ಸಂಸ್ಕೃತಿಯ ಅವನತಿಯನ್ನು ಚಿತ್ರಿಸಿರುವ ಅವರು, ಸಮಸ್ಯೆಗೆ ಪರಿಹಾರವನ್ನು ಸೂಚಿಸುವುದು ಅಪರೂಪ (೨೦೦೧:೧೪೭)[೪೧]

ಸೂಳೆ ನಾಟಕದಲ್ಲಿ ಗಂಡು ಸಮಾಜದಿಂದ ಶೋಷಣೆಗೊಳಗಾದ ಸೂಳೆಯು ಅನುಭವವಿರುವ ಮತ್ತು ವಿವೇಚನೆಯಿರುವ ಒಬ್ಬ ಪ್ರಾಮಾಣಿಕ ವ್ಯಕ್ತಿ. ಆದರೆ ವ್ಯವಸ್ಥೆಯ ವಿರುದ್ಧ ರೋಷ ಅಥವಾ ಕೋಪ ತುಂಬಿಕೊಂಡ ಹೆಣ್ಣಲ್ಲ. ಸಮಾಜ ಸುಧಾರಣೆಗೆ ತನ್ನ ಅಸಮಾಧಾನವನ್ನು ವ್ಯಕ್ತಪಡಿಸುತ್ತಾಳೆಯೋ ಹೊರತು, ಸೂಳೆಗಾರಿಕೆಯ ವಿರುದ್ಧ ಹೋರಾಡುವ ಮನೋಭಾವವುಳ್ಳವಳಲ್ಲ. ಪರಿಸ್ಥಿತಿಯನ್ನು ಎದುರಿಸಲಾಗದೆ, ಅದರಿಂದ ತಪ್ಪಿಸಿಕೊಳ್ಳಲು ತಾನು ಸಾಯುವುದರ ಜೊತೆಗೆ ತನ್ನ ಮಗಳನ್ನು ವಿಷ ಕೊಟ್ಟು ಸಾಯಿಸುತ್ತಾಳೆ. ಅಂದರೆ ಸೂಳೆಯ ಸಮಸ್ಯೆಗೆ ಆತ್ಮಹತ್ಯೆ ಒಂದೇ ಪರಿಹಾರ ಎಂದು ಪ್ರತಿಪಾದಿಸಲಾಗಿದೆ. ಕಲಿಯುಗದಲ್ಲಿ ಒಳ್ಳೆಯವರಿಗೇನೆ ಕೆಡಕಾಗುವುದು ಎಂಬ ಸ್ವ-ಸಮಾಧಾನದ ಧೋರಣೆಯು ಇಂತಹ ಪರಿಹಾರವನ್ನು ಸೂಚಿಸುತ್ತದೆ. ತಮ್ಮ ಮತ್ತೊಂದು ನಾಟಕದಲ್ಲಿಯೂ (ಬಹಿಷ್ಕಾರ) ಸಹ ಕೈಲಾಸಂರು ಬಡತನದ ಸಮಸ್ಯೆಯ ಪರಿಹಾರಕ್ಕೆ ಆತ್ಮಹತ್ಯೆಯೆ ಉತ್ತರವೆಂದು ಸೂಚಿಸುತ್ತಾರೆ. ಬಡತನ ತಾಳಲಾರದೆ, ಸಂಸಾರದ ಗೋಳಿಗೆ ತಾನೇ ಕಾರಣ ಎಂದು ತಿಳಿದು ಹಿರಿಯ ಮಗಳು ನರಸು ವಿಷ ಕುಡಿದು ಸಾಯುತ್ತಾಳೆ. ಸೂಳೆಯ ಬಾಳಿನ ಬಗ್ಗೆ ಮತ್ತು ಬ್ರಾಹ್ಮಣ ಸಂಸಾರದ ಬಡತನದ ಬಗ್ಗೆ ಕನಿಕರ ಹುಟ್ಟುವಂತೆ ಮಾಡುವ ಈ ಎರಡು ನಾಟಕಗಳು ಸಮಸ್ಯೆಯ ಪರಿಹಾರಕ್ಕೆ ಇರುವ ಇತರ ಸಾಧ್ಯತೆಗಳನ್ನು ಮುಚ್ಚಿಹಾಕುತ್ತವೆ. ಇದಕ್ಕೆ ಮುಖ್ಯ ಕಾರಣ ಕೈಲಾಸಂರು ಬ್ರಾಹ್ಮಣ ಸಮಾಜದ ಆಚೆಗೆ ಹೋಗದೆ ಇದ್ದುದು. ಉದಾರವಾದಿ ಮನೋಭಾವನೆಯನ್ನು ಹೊಂದಿದ್ದರೂ, ಅದು ಬ್ರಾಹ್ಮಣ ಸಮಾಜಕ್ಕೆ ಸೀಮಿತಗೊಂಡಿತ್ತು. ಇತರರ ಬಗ್ಗೆ ಮಾತನಾಡಿದಾಗಲೂ ಸಹ ಅವರ ಮನೋಭೂಮಿಕೆಯು ಮೇಲೆ ವಿವರಿಸಿದ ವಾಸ್ತವದ ಅಂಶಗಳನ್ನು ಸ್ವೀಕರಿಸಲು ನಿರಾಕರಿಸಿತು. ಹಾಗಾದರೆ ಸೂಳೆಯ ಸಮಸ್ಯೆಗೆ ಅಂದಿನ ಸಮಾಜದಲ್ಲಿ ಇದ್ದ ಪರಿಹಾರವೇನು? ಎಲ್ಲವನ್ನು ಲೇಖಕರಿಂದ ಅಪೇಕ್ಷಿಸುವುದು ಉಚಿತವೆ? ಎಂಬ ಪ್ರಶ್ನೆಗಳು ಹುಟ್ಟಬಹುದು. ಈ ಪ್ರಶ್ನೆಗಳಿಗೆ ಉತ್ತರವನ್ನು ಅದೇ ಸಮಯದಲ್ಲಿ ಸೂಳೆಯ/ದೇವದಾಸಿ ಜೀವನದ ಬಗ್ಗೆ ಬರೆಯಲ್ಪಟ್ಟ ತಮಿಳು ಕಾದಂಬರಿಯ ಜೊತೆಗೆ ಹೋಲಿಸಿ ನೋಡಿದರೆ ಸಿಗಬಹುದು.[೪೨]

**ದಾಸಿಗಳ್ ಮೊಸವಲೈ ಅಲತ್ತು ಮಥಿಪೆಟ್ರ ಮಿನೊರ್** ಕಾದಂಬರಿಯು ಮೂವಲೂರ್ ರಮಮಿರ್ಥಮ್ ಆಮ್ಮಯ್ಯಾರ್ ಎಂಬುವವರಿಂದ ೧೯೩೬ರಲ್ಲಿ ಬರೆಯಲ್ಪಟ್ಟಿತು. ತಮಿಳು ನಾಡಿನ ಇಸೈ ವೆಲ್ಲಾಲ್ಲ ಎಂಬ ದೇವದಾಸಿ ಸಮುದಾಯಕ್ಕೆ ಸೇರಿದ ರಮಮಿರ್ಥಮರ ಈ ಕಾದಂಬರಿ ದೇವದಾಸಿಯರ ಜೀವನ ಮತ್ತು ಹೋರಾಟದ ಬಗ್ಗೆ ವಿವರಣೆಯನ್ನು ನೀಡುತ್ತದೆ. ದೇವದಾಸಿಯರು ಸಹ ಇತರರಂತೆ ಸ್ವಂತಿಕೆ ಇರುವ ಮತ್ತು ಪರರ ಅನುಕಂಪದ ಮೇಲೆ ಅವಲಂಬಿತರಾಗದ ವ್ಯಕ್ತಿಗಳೆಂದು ಈ ಕಾದಂಬರಿಯು ಚಿತ್ರಿಸುತ್ತದೆ. ಬ್ರಾಹ್ಮಣೇತರರ

Self-Respect Movementನಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದ ರಮಮಿರ್ಥಮರ ಕಾದಂಬರಿಯಲ್ಲಿ ಚಳುವಳಿಯ ಬಗ್ಗೆ ಮತ್ತು ಅದರ ಕ್ರಾಂತಿಕಾರಕ ವಿಚಾರಗಳ ಬಗ್ಗೆ ಸಾಕಷ್ಟು ವಿವರಗಳನ್ನು ನೀಡಿದ್ದಾರೆ.

ಕಾದಂಬರಿಯಲ್ಲಿ ವಿವಿಧ ಪಾತ್ರಗಳ ಚಿತ್ರಣವಿದೆ. ಬೋಗಚಿಂತಾಮಣಿಯು ಹಣಕ್ಕಾಗಿ ತನ್ನ ಇಬ್ಬರು ಹೆಣ್ಣುಮಕ್ಕಳನ್ನು ಸೂಳೆಗಾರಿಕೆಗೆ ನೂಕುತ್ತಾಳೆ. ಜಮೀನ್ದಾರರ ಮಗ ತಿರುಚಿ ಮಿನೋರನು ಈ ಇಬ್ಬರು ದಾಸಿಯರಿಗಾಗಿ ತನ್ನ ಸಂಪತ್ತನ್ನೆ ಧಾರೆಯೆರೆಯುತ್ತಾನೆ. ಗುಣಪೂಸನಿ ಎಂಬ ಮತ್ತೊಬ್ಬ ದಾಸಿಯು ದೇವದಾಸಿ ಪದ್ಧತಿಯಿಂದ ಒಡಿ ಹೋಗಿ ಸಮಾಜ ಸುಧಾರಕನನ್ನು ವಿವಾಹವಾಗುತ್ತಾಳೆ. ಮುಂದೆ ದಾಸಿಯರ ಉದ್ಧಾರಕ್ಕಾಗಿ ಸುಧಾರಣ ಕಾರ್ಯದಲ್ಲಿ ಸಕ್ರೀಯಳಾಗುತ್ತಾಳೆ. ತಿರುಚಿ ಮಿನೋರನನ್ನು ಸುಧಾರಿಸುತ್ತಾಳೆ. ಇದೇ ಸಮಯದಲ್ಲಿ ಮತ್ತೊಬ್ಬ ಜಮೀನ್ದಾರನ ಮಗ ಸೋಮಶೇಖರ ಎಂಬುವವನು ಈ ಇಬ್ಬರ ದಾಸಿಯರ ದಾಸನಾಗಿ ತನ್ನ ಹೆಂಡತಿಯನ್ನು (ಜ್ಞಾನ ಸುಂದರಿ)ಯನ್ನು ಮರೆಯುತ್ತಾನೆ. ನಂತರ ಜಮೀನ್ದಾರನ ವೇಷದಲ್ಲಿ ಬರುವ ಜ್ಞಾನಸುಂದರಿಯು ದಾಸಿಯರು ಸೋಮಶೇಖರನನ್ನು ಮರೆಯುವಂತೆ ಮಾಡುತ್ತಾಳೆ. ಜ್ಞಾನಸುಂದರಿಗೆ ದಾಸಿ ಮನೆಯ ಪರಿಚಯವಾಗುತ್ತದೆ. ಒಂದು ದಿನ ಆಕೆ ದಾಸಿ ಮನೆಯನ್ನು ಬಿಟ್ಟು ಹೋಗುತ್ತಾಳೆ. ಎಲ್ಲಿಗೆ ಹೋಗುತ್ತಿದ್ದೀಯಾ ಎಂದು ಆ ದಾಸಿಯರು ಕೇಳಿದಾಗ ಮರಳಿ ಬಂದು ಹೇಳುತ್ತೇನೆ ಎಂದು ಸುಳ್ಳು ನುಡಿಯುತ್ತಾಳೆ. ಮತ್ತೊಬ್ಬ ಜಮೀನ್ದಾರನನ್ನು ಸಂಪಾದಿಸಲು ಆಗದೆ, ಬೋಗಚಿಂತಾಮಣಿಯು ತನ್ನ ಮಗ ಮತ್ತು ಸೊಸೆಯನ್ನು ಮನೆ ಬಿಡಿಸುತ್ತಾಳೆ. ಮಗನು ಜೀವನೋಪಾಯಕ್ಕಾಗಿ ತನ್ನ ಮಗಳನ್ನು (ವಿವೇಕವತಿ) ದಾಸಿಯನ್ನಾಗಿ ಮಾಡುತ್ತಾನೆ. ಆದರೆ ವಿವೇಕವತಿಯು ದಾಸಿ ಜೀವನವನ್ನು ತ್ಯಜಿಸಿ ತನ್ನ ಸಂಗೀತ ಗುರುವಿನ ಜೊತೆಗೆ ಓಡಿ ಹೋಗುತ್ತಾಳೆ. ನಂತರ ದೇವದಾಸಿಯರ ಉದ್ಧಾರಕ್ಕಾಗಿ ಪಣತೊಡುತ್ತಾಳೆ. ಇದಕ್ಕಾಗಿ ತನ್ನ ಜಾತಿಯಿಂದಲೇ ವಿರೋಧವನ್ನು ಎದುರಿಸಬೇಕಾಗುತ್ತದೆ.

ತನ್ನ ಗಂಡನನ್ನು ಮರಳಿಪಡೆದ ಜ್ಞಾನಸುಂದರಿಯು ಅವನನ್ನು ಸುಧಾರಿಸುತ್ತಾಳೆ. ಕಾದಂಬರಿಯ ಕೊನೆಯಲ್ಲಿ ಜ್ಞಾನಸುಂದರಿ, ತಿರುಚಿ ಮಿನೋರ, ಗುಣಪೂಸನಿ ಎಲ್ಲರೂ ಸೇರಿ ಸಮಾಜ ಸುಧಾರಣ ಸಭೆಯನ್ನು ನಡೆಸುತ್ತಾರೆ. ಬ್ರಾಹ್ಮಣ ಪುರೋಹಿತರು ಮತ್ತು ಗಂಡಸರ ದಾರಿದ್ರ್ಯಕ್ಕೆ ತಳ್ಳಲ್ಪಟ್ಟ ಇಬ್ಬರು ದಾಸಿಯರೂ (ಬೋಗಚಿಂತಾಮಣಿಯ ಮಕ್ಕಳು) ಸಹ ಈ ಸಭೆಗೆ ಹಾಜರಾಗುತ್ತಾರೆ. ಸಭೆಯಲ್ಲಿ ಮಾತನಾಡುತ್ತಾ ಗುಣಪೂಸನಿಯು ಬ್ರಾಹ್ಮಣತ್ವ, ಶಾಸ್ತ್ರ-ಪುರಾಣಗಳೆ ದೇವದಾಸಿ ಪದ್ಧತಿಗೆ ಕಾರಣವೆಂದು ಆರೋಪಿಸುತ್ತಾಳೆ. ರಾಷ್ಟ್ರೀಯ ಚಳುವಳಿಗಾರರು ನಿಜವಾದ ಸಮಾಜ ಸುಧಾರಣೆಯಲ್ಲಿ ಅನಾಸಕ್ತಿ ಹೊಂದಿದ್ದಾರೆಂದು ತೆಗಳುತ್ತಾಳೆ. ಸಭೆಯ ಕೊನೆಯಲ್ಲಿ ದೇವದಾಸಿ ಪದ್ಧತಿಯನ್ನು ನಿರ್ಮೂಲನ ಮಾಡಬೇಕೆಂದು ಅನುಮೋದಿಸುತ್ತಾರೆ.

ಕಾದಂಬರಿಯಲ್ಲಿ ವಿಶೇಷವಾಗಿ ಎದ್ದು ಕಾಣುವುದು ಪಾತ್ರ, ಅನುಭವ ಮತ್ತು ದಾಸಿಯರ ಜೀವನೋದ್ಧಾರಕ್ಕಾಗಿ ಇರುವ ಅನೇಕ ಸಾಧ್ಯತೆಗಳು. ಬೋಗಚಿಂತಾಮಣಿಯು ಹಣಕ್ಕಾಗಿ

ದೇವದಾಸಿ ಪದ್ಧತಿಯನ್ನು ಅವಲಂಬಿಸಿದರೆ, ಅವಳ ವಿರುದ್ಧ ಗುಣವುಳ್ಳ ಕನಗವಳ್ಳಿ ಎಂಬುವವಳು ಬಡತನದಿಂದ ದಾಸಿ ಪದ್ಧತಿಗೆ ನೂಕಲ್ಪಡುತ್ತಾಳೆ. ಅದರಿಂದ ತಪ್ಪಿಸಿಕೊಂಡು ಶಾಂತಿಯಿಂದ ಗಂಡನ ಜೊತೆಗೆ ಬಾಳುವ ಕನಸು ಕಾಣುತ್ತಾಳೆ. ಮತ್ತೊಬ್ಬ ಬಡ ದಾಸಿಯಾದ ಗುಣಪೂಸನಿಯು ದಾಸಿ ಜೀವನದಿಂದ ಓಡಿ ಹೋಗಿ, ನಂತರ ಅದರ ವಿರುದ್ಧ ಹೋರಾಡುತ್ತಾಳೆ. Self-Respect Movementನಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಾಳೆ. ವಿವಾಹವು ಬಿಡುಗಡೆಯ ಮಾರ್ಗವಾದರು ಅವಳು monogamyಯನ್ನು ಎಂದೂ ಪ್ರತಿಪಾದಿಸುವುದಿಲ್ಲ. ಹೆಣ್ಣಿನ ಶೋಷಣೆಗೆ ಕಾರಣವಾದ ಬಾಲ್ಯ ವಿವಾಹ ಪದ್ಧತಿ, ವಿಧವೆತನ ಮತ್ತು ಹಿಂದು ಧರ್ಮವನ್ನು ವಿರೋಧಿಸುತ್ತಾಳೆ. ಗುಣಪೂಸನಿಯಂತೆ ಓಡಿ ಹೋಗಿ ವಿವಾಹವಾಗುವ ವಿವೇಕವತಿಯು ಸಹ ದಾಸಿಯರ ಬಿಡುಗಡೆಗಾಗಿ ಹೋರಾಟದಲ್ಲಿ ನಿರತಳಾಗುತ್ತಾಳೆ. ಕಾದಂಬರಿಯ ಮತ್ತೊಂದು ವಿಶೇಷವೇನೆಂದರೆ ವಿವಾಹವು ಅಂತಿಮ ಪರಿಹಾರವಲ್ಲ ಎಂದು ಪದೇ, ಪದೇ ಪ್ರತಿಪಾದಿಸಿರುವುದು. ಇತ್ತ ಕಡೆ ಜಮೀನ್ದಾರಿ ಪದ್ಧತಿಯೆ ದೇವದಾಸಿ ವ್ಯವಸ್ಥೆಗೆ ಕಾರಣವೆಂದು ಜ್ಞಾನಸುಂದರಿಯು ತನ್ನ ಸಂಪತ್ತನ್ನು ತ್ಯಾಗ ಮಾಡುತ್ತಾಳೆ. ಒಟ್ಟಿನಲ್ಲಿ ಬ್ರಾಹ್ಮಣತ್ವ, ಹಿಂದುತನ ಮತ್ತು ವರ್ಗ ಭೇದಗಳು ಹೋಗುವ ವರೆಗೆ ದೇವದಾಸಿ ಪದ್ಧತಿಗೆ ಪರಿಹಾರವಿಲ್ಲ ಎಂದು ಈ ಕಾದಂಬರಿಯಲ್ಲಿ ಒತ್ತಿ ಹೇಳಲಾಗಿದೆ.

ಕಾದಂಬರಿಯಲ್ಲಿ ಎಲ್ಲಾ ಹೆಂಗಸರ/ದಾಸಿಯರ ಶೋಷಣೆಗೆ ಕಾರಣ ಗಂಡಸರು ಮಾತ್ರ ಕಾರಣ ಎಂದು ಎಲ್ಲಿಯೂ ಹೇಳಿಲ್ಲ. ಪಿತೃಪ್ರಧಾನ ವ್ಯವಸ್ಥೆಗೆ ಬ್ರಾಹ್ಮಣರ ಪುರೋಹಿತಶಾಹಿ, ಹಿಂದೂ ಆಚಾರ-ವಿಚಾರಗಳು ಮತ್ತು ಅದರ ಪರಿಣಾಮವಾಗಿ ಉಂಟಾದ ವರ್ಗ/ಜಾತಿ ಭೇದಗಳು ಕಾರಣ ಎಂದು ತೋರಿಸಲಾಗಿದೆ. ಹೆಣ್ಣಿನ ಶೋಷಣೆ ಜೊತೆಗೆ ಅದರ ಮೂಲವಾದ ಸಾಮಾಜಿಕ ತಾರತಮ್ಯಗಳ ಬಗ್ಗೆ ಸೂಕ್ಷ್ಮ ಅರಿವಿದೆ. ಕೈಲಾಸಂರ ಸೂಳೆಯಲ್ಲಿ ಸೂಳೆಯೆ ಪ್ರಧಾನ ಪಾತ್ರ. ಅವಳ ಮನೋಸ್ಥಿತಿಯ ಚಿತ್ರಣಕ್ಕೆ ಮತ್ತು ಗೃಹಸ್ಥ ಸ್ತ್ರೀಯರ ಬಗೆಗಿನ ಅಸಮಾಧಾನ ವಿವರಗಳಿಗೆ ಹೆಚ್ಚು ಪ್ರಾಶಸ್ತ್ಯವಿದೆಯೇ ಹೊರತು ವ್ಯವಸ್ಥೆಯನ್ನು ರೂಪಿಸಿರುವ ಸಾಮಾಜಿಕ ಅಂಶಗಳ ಬಗ್ಗೆ ಅಷ್ಟೊಂದು ವಿವರಗಳಿಲ್ಲ. ಕುತೂಹಲ, ಆಶ್ಚರ್ಯ ಮತ್ತು ಅನುಕಂಪವನ್ನು ಹುಟ್ಟಿಸಿರುವ ವ್ಯಕ್ತಿಯೊಬ್ಬಳ ಕಥೆ ಹೇಳುವುದು ಮುಖ್ಯವೆ ವಿನಾ, ಆ ವ್ಯಕ್ತಿಯನ್ನು ಆವರಿಸಿರುವ ಇಡೀ ಸಾಮಾಜಿಕ ಪರಿಸರ ಅಂದರೆ ಸಮೂಹದ ಕಥೆಯನ್ನು ಹೇಳುವುದರಲ್ಲಿ ಕೈಲಾಸಂರಿಗೆ ಆಸಕ್ತಿಯಿಲ್ಲ. ಇಡೀ ಸಾಮಾಜಿಕ ರಚನೆಯಲ್ಲಿ ನಡೆಯುತ್ತಿರುವ ಪರಿವರ್ತನೆಗಳ ಬಗ್ಗೆ ಅರಿವಿದ್ದರೂ, ಸೂಳೆಯ ಕಥೆಯನ್ನು ವ್ಯಕ್ತಿಗತಕ್ಕೆ ಇಳಿಸಿಬಿಡುವ ಪ್ರಮೇಯವು ಮತ್ತು ಪರಿವರ್ತನೆಯನ್ನು ನಿರಾಕರಿಸುವ ಧೋರಣೆಯನ್ನು ಕೈಲಾಸಂರಲ್ಲಿ ಕಾಣುತ್ತೇವೆ. ಆಧುನಿಕತೆಯಿಂದ ಮೌಲ್ಯಗಳ ಜಗತ್ತಿನಲ್ಲಿಕೋಲಾಹಲಗೆಯ್ಯಬಲ್ಲ ಗುಣಪೂಸನಿ ಅಥವಾ ವಿವೇಕವತಿಯಂತವರನ್ನು ಕೈಲಾಸಂರ ನಾಟಕದಲ್ಲಿ ಕಾಣಲಾರೆವು. ಇದಕ್ಕೆ ಕಾರಣ ಬ್ರಾಹ್ಮಣ ಸಮಾಜ ಮತ್ತು ಶೂದ್ರ ಸಮಾಜಗಳ ನಡುವೆ ಇರುವ ತಾರತಮ್ಯಗಳ ಬಗ್ಗೆ ತಲೆ ಕೆಡಿಸಿಕೊಳ್ಳದೆ, ಬಡತನ ಅಥವಾ ಪೌರೋಹಿತ್ಯವು ಬ್ರಾಹ್ಮಣರ

ಆಂತರಿಕ ಸಮಸ್ಯೆಯೆಂದು ನಂಬಿದುದರರಿಂದ. ಶ್ರೀಮಂತ ಮತ್ತು ಜಡ್ಡು ಹಿಡಿದ ಬ್ರಾಹ್ಮಣತ್ವ ದಿಂದ ಬಡ ಬ್ರಾಹ್ಮಣರು ಶೋಷಿತರಾಗಿದ್ದಾರೆಂದು (ಬಹಿಷ್ಕಾರದಲ್ಲಿ) ಕೈಲಾಸಂರು ನಂಬಿದ್ದರು. ಆದರೆ ಬ್ರಾಹ್ಮಣರು ಸಾಮಾಜಿಕ ಶೋಷಣೆಗೆ ಮೂಲ ಕಾರಣರು ಎಂಬುದನ್ನು ಎಲ್ಲಿಯೂ ಹೇಳಿಲ್ಲ. ಇನ್ನೊಂದರ್ಥದಲ್ಲಿ ಹೇಳುವುದಾದರೆ ಜಾತೀಯತೆಯನ್ನು ಬ್ರಾಹ್ಮಣ ಸಮಾಜದ ಆಂತರಿಕ ಸಮಸ್ಯೆಯೆಂದು ತಿಳಿದಿದ್ದ ಅವರು ಬಾಹ್ಯ ಪ್ರಪಂಚದ ಮೇಲಾದ ಅದರ ಪರಿಣಾಮದ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲ. ಬ್ರಾಹ್ಮಣ ಸಮಾಜವು ಇತರರಿಂದ ಯಾವುದೇ ರೀತಿಯಲ್ಲಿ ಪ್ರಭಾವಕ್ಕೊಳಪಡದ ಅಥವಾ ಪ್ರಭಾವಿಸದ ಪ್ರತ್ಯೇಕ ಜಗತ್ತೆಂದು ಅವರ ಇತರ ನಾಟಕಗಳ ಮೂಲಕ ತಿಳಿಯುತ್ತದೆ. ಆದ್ದರಿಂದಲೆ ಅವರ ನಾಟಕಗಳಲ್ಲಿ ಜಾತಿ ಸಮಸ್ಯೆಯು ಬ್ರಾಹ್ಮಣರ ಆಂತರಿಕ ಸಮಸ್ಯೆಯಾಗಿ ಉಳಿದು ಬಿಡುತ್ತದೆ. ಹಾಗಾಗಿ ಸೂಳೆಗೆ ಮತ್ತು ಆಕೆಯ ಮಗಳಿಗೆ ಯಾವುದೇ ಮಾರ್ಗೋಪಾಯಗಳಿಲ್ಲದಂತೆ ಎಲ್ಲಾ ದಾರಿಗಳನ್ನು ಮುಚ್ಚುತ್ತಾರೆ. ಮೊದಲೆ ಚರ್ಚಿಸಿದಂತೆ ಕೈಲಾಸಂರು ಸುತ್ತ-ಮುತ್ತಲ ಜಗತ್ತಿನ ಬಗ್ಗೆ ನಿರಾಶೆ ಭಾವನೆಯನ್ನು ಹೊಂದಿದರಿಂದ, ಸೂಳೆಯನ್ನು ಯಾವುದೇ ಭರವಸೆಗಳಿಲ್ಲದ ನಾಟಕವಾಗಿ ಮುಗಿಸುತ್ತಾರೆ.

ಕೈಲಾಸಂರ ಕನ್ನಡ ಮತ್ತು ಇಂಗ್ಲೀಷ್ ನಾಟಕಗಳಿಂದ ತಿಳಿದು ಬರುವುದೇನೆಂದರೆ ವರ್ಗ ಮತ್ತು ಜಾತಿ ಭೇದಗಳು ಪೂರ್ವ-ನಿರ್ಧಾರಿತವಾದುವುಗಳು. ಅವರೆಡನ್ನು ತಾನೂ ಸಹ ರೂಪಿಸುತ್ತಿದ್ದೇನೆ ಮತ್ತು ಪ್ರತಿನಿಧಿಸುತ್ತಿದ್ದೇನೆ ಎಂಬ ಅರಿವು ಕೈಲಾಸಂರಿಗೆ ಇರಲಿಲ್ಲ. ಅವುಗಳ ಹೊರಗೆ ನಿಂತು ವಿಶ್ಲೇಷಿಸುವ ಮನೋಭೂಮಿಕೆಯನ್ನು ತೋರಿಸುವುದರಿಂದಲೆ ಜಾತಿ ಮತ್ತು ಸ್ತ್ರೀ ಪ್ರಶ್ನೆಯು ಆಂತರಿಕವಾಗಿ ಗೋಚರಿಸುತ್ತದೆ. ಬಾಹ್ಯವಾದುದು (ಶೂದ್ರರು) ಅವರಿಗೆ ರಮ್ಯವಾಗಿ, ಅನುಕರಣೀಯವಾಗಿ ಮತ್ತು ಆದರಣೀಯವಾಗಿ ಕಾಣಿಸುತ್ತದೆ.

## ಟಿಪ್ಪಣಿಗಳು ಮತ್ತು ಉಲ್ಲೇಖಿತ ಲೇಖನಗಳು

* ಕೈಲಾಸಂ ನಾಟಕಗಳ ಬಗ್ಗೆ ನನ್ನೊಡನೆ ಚರ್ಚಿಸಿದ ಮೈತ್ರೇಯಿ ಎಂ.ಆರ್., ರಮೇಶ್ ಬೈರಿ, ತಾರಕೇಶ್ವರ್ ಮತ್ತು ಚೈತ್ರಾಗೆ ನನ್ನ ಧನ್ಯವಾದಗಳು.


೧. ಮರುಳಸಿದ್ಧಪ್ಪ. ೨೦೦೦. ಕೈಲಾಸಂ ನಾಟಕಗಳಲ್ಲಿ ಸಾಮಾಜಿಕ ಪ್ರಜ್ಞೆ, ನಮ್ಮ ಕೈಲಾಸಂ. (ಸಂ.) ಚಿ. ಶ್ರೀನಿವಾಸರಾಜು, ಬೆಂಗಳೂರು, ಪ್ರಿಸಂ.

೨. ಮೋಹನ್ ಕುಮಾರ್, ಆರ್. ೨೦೦೧. ಕೈಲಾಸಂ ನಾಟಕಗಳಲ್ಲಿ ಸ್ತ್ರೀ ಪಾತ್ರ, ನಮ್ಮ **ಕೈಲಾಸಂ.** (ಸಂ).ಚಿ. ಶ್ರೀನಿವಾಸರಾಜು, ಬೆಂಗಳೂರು, ಪ್ರಿಸಂ.

೩. ಚಟರ್ಜಿ, ಪಾರ್ತ. ೧೯೯೭. *The Nationalist Resolution of the Women's Question.* **Recasting Women : Essays in Colonial History.** (ಸಂ.) ಕುಂಕುಮ್ ಸಂಗಾರಿ ಮತ್ತು ಸುದೇಶ್ ವೈದ್, ಕಾಳಿ ಫಾರ ವುಮೆನ್ : ದೆಹಲಿ.

೪. ಅದೇ.

೫. ಚಟರ್ಜಿ, ಪಾರ್ತ. ೧೯೯೪. Whose Imagined Community? **The Nation and Its Fragments.** ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ : ದೆಹಲಿ.

೬. ಅದೇ.

೭. ಚಕ್ರವರ್ತಿ, ಉಮ. ೧೯೯೮. *Men, Women and the Embattled Family.* **Re-writing History : The Life and Times of Pandita Ramabai.** ಕಾಳಿ ಫಾರ್ ವುಮೆನ್: ದೆಹಲಿ.

೮. ನಾಯರ್, ಜಾನಕಿ. ೧೯೯೪. The Devadasi, Dharma and the State. Economic and Political Weekily. ಸಂ. ೨೯, ಸಂ. ೫೦.

೯. ಜೋಷಿ, ಸಂಜಯ್. ೨೦೦೦. *Introduction.* **Fractured Modernity : Making of a Middle Class in Colonial North India.** ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್: ದೆಹಲಿ.

೧೦. ಕರ್ನಾಟಕದ ಸಂದರ್ಭದಲ್ಲಿ ಹೇಳಬೇಕಾದರೆ ಲಿಂಗಾಯತ ಸಮುದಾಯದ ಆಂತರಿಕ ಮತ್ತು ಬಾಹ್ಯ ಕ್ಷೇತ್ರಗಳು ಬ್ರಾಹ್ಮಣರ ವಿರುದ್ಧ ಇತ್ತು. ೧೯೧೧ರಲ್ಲಿ ನಡೆದ ಆರನೇ ವೀರಶೈವ ಮಹಾಸಭೆಯಲ್ಲಿ ಸ್ತ್ರೀಯರ ವಿಷಯಗಳನ್ನು ಚರ್ಚಿಸಿದ್ದಾರೆ. ಸಭೆಯಲ್ಲಿ ಭಾಷಣ ಮಾಡಿದ ಶ್ರೀಮತಿ ಶಾಂತವೀರವ್ವಾ ಬಿಳ್ಳೂರ ಶ್ಯಾಪೂರವರು ವೀರಶೈವ ಮಹಿಳೆಯರು ಶಿವದೀಕ್ಷಾಬದ್ದರು. ಅವರು ಶಿವನ ಹೊರತು ವಿಷ್ಣು, ಬ್ರಹ್ಮೇಂದ್ರಾದಿ, ದೇವತೆಗಳನ್ನು ಪೂಜಿಸಲಾಗದು ಎಂದು ಕರೆಕೊಡುತ್ತಾರೆ. ಸಭೆಯಲ್ಲಿ ಹಾಜರಿದ್ದ ಅನೇಕ ಗಣ್ಯರು ಸಹ ಇದೇ ಭಾವನೆಯನ್ನು ವ್ಯಕ್ತಪಡಿಸುತ್ತಾರೆ. ಇದರ ಜೊತೆಗೆ ಬ್ರಿಟೀಷ್ ಸಾಮ್ರಾಜ್ಯದ ಭಾರತದಲ್ಲಿರುವುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದ್ದಾರೆ.

೧೧. ಆನಂದಿ. ಎಸ್. ೧೯೯೧. *Women's Question in the Dravidian Movement,* c. 1925-1948. **Social Scientist.** ಸಂ. ೧೯, ಸಂ. ೫-೬.

೧೨. ಧಾರೇಶ್ವರ್, ವಿವೇಕ್. ೧೯೯೩. Cast and the Secular Self. **Journal of Arts and Ideas.** ಸಂ. ೨೫-೨೬.

೧೩. ಚಂದ್ರಶೇಖರ್, ಎಸ್. ಚರಿತ್ರೆ ಮತ್ತು ಕನ್ನಡ ಸಾಹಿತ್ಯ. ಅಕ್ಷರ : ಹೆಗ್ಗೋಡು.

೧೪. ಆಗಿನ ಚಾರಿತ್ರಿಕ ಸಂದರ್ಭದಲ್ಲಿ ಹಿಂದೂ ಧರ್ಮದ ಯಜಮಾನಿಕೆಯನ್ನು ಹೊಂದಿದ ಬ್ರಾಹ್ಮಣರಿಗೆ ಬ್ರಾಹ್ಮಣೇತರರು ಪೈಪೋಟಿ ನೀಡಿದರು. ತಮ್ಮ ಜಾತಿ/ಸಮುದಾಯದ ಸಂಸ್ಕೃತಿಯ ಮತ್ತು ಸಂಪ್ರದಾಯದ ಆಧಾರದ ಮೇಲೆ ಹಿಂದೂ ಧರ್ಮವನ್ನು ವ್ಯಾಖ್ಯಾನಿಸುವ ಮೂಲಕ ಹಿಂದೂ ಧರ್ಮದ ಮೇಲಿದ್ದ ಬ್ರಾಹ್ಮಣರ ಹಿಡಿತಕ್ಕೆ ಕೊಡಲಿ ಪೆಟ್ಟು ನೀಡಿದರು. ಈ ವ್ಯಾಖ್ಯಾನಗಳು ಮತ್ತು ಮರು-ವ್ಯಾಖ್ಯಾನಗಳು ಮತೀಯ ಬಣ್ಣವನ್ನು ಪಡೆದಿದ್ದವು. ಹೀಗಾಗಿ ಹಿಂದೂ ಧರ್ಮವನ್ನು "ಮತೀಯ"ರಿಂದ ರಕ್ಷಿಸುವ ಹೊಣೆಯನ್ನು ಕೈಲಾಸಂರಂತಹ "ಜಾತ್ಯತೀತ" ಚಿಂತನಾಕಾರರು ನಿಭಾಯಿಸಿದರು. ಆದರೆ ಈ ಜಾತ್ಯಾತೀತ ಹಿಂದೂ ಧರ್ಮದ ಸ್ವರೂಪವು ಸಹ ತನ್ನ ಮಿತಿಗಳಿಂದ ಮುಕ್ತವಾಗಿರಲಿಲ್ಲ. ಈ ಮಿತಿಗಳನ್ನು ಕೈಲಾಸಂರ ನಾಟಕಗಳನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ತೋರಿಸಲಾಗಿದೆ.

೧೫. ಶಿವರಾಂ. ಆರ್. ೨೦೦೦. ಕೈಲಾಸಂ ಮತ್ತು ನಾನು. ಭಾಷಾಂತರ : ರಘುನಾಥರಾವ್. ಪ್ರಿಸಂ : ಬೆಂಗಳೂರು.

೧೬. ಕೇಶವರಾವ್, ಬಿ.ಎಸ್. ೨೦೦೧. *ಕೈಲಾಸಂರವರ ಕಾಳಮ್ಮ್ನ ಐಕ್ಳು.* ಕೈಲಾಸಂ **Jo**ಕ್ಸೂ.....**Son**ಗ್ಸೂ....ನಗೆಹನಿಗಳು. ಅಂಕಿತ : ಬೆಂಗಳೂರು.

೧೭. ಮರುಳಸಿದ್ಧಪ್ಪ. ೨೦೦೦. ಕೈಲಾಸಂ ನಾಟಕಗಳಲ್ಲಿ ಸಾಮಾಜಿಕ ಪ್ರಜ್ಞೆ. ನಮ್ಮ ಕೈಲಾಸಂ. (ಸಂ.) ಚಿ. ಶ್ರೀನಿವಾಸರಾಜು, ಬೆಂಗಳೂರು : ಪ್ರಿಸಂ.

೧೮. ಕೈಲಾಸಂ. ೧೯೮೭. *ಸೂಳೆ.* (ಸಂ.) ಎಚ್. ತಿಪ್ಪೇರುದ್ರಸ್ವಾಮಿ, ಕನ್ನಡ ಅಧ್ಯಯನ ಸಂಸ್ಥೆ : ಮೈಸೂರು ವಿ.ವಿ.

೧೯. ಕೈಲಾಸಂರು ಸುಬ್ಬುವಿನ ಪಾತ್ರವನ್ನು ನಿಜ ಜೀವನದಲ್ಲಿ ಕಂಡ ಒಬ್ಬ ವ್ಯಕ್ತಿಯ ಆಧಾರದ ಮೇಲೆ ರಚಿಸಿದ್ದಾರೆ. ಕೈಲಾಸಂ ಹಾಸನದಲ್ಲಿ ಇದ್ದಾಗ ಒಬ್ಬ ಶ್ರೀಮಂತನ ಪುತ್ರನಾದ ಸುಬ್ಬು ಎಂಬಾತನನ್ನು ಭೇಟಿಯಾಗುವ ಪ್ರಸಂಗ ಬಂತು. ಇವನು ತನ್ನ ಆಸ್ತಿಯನ್ನೆಲ್ಲಾ ಒಬ್ಬ ಸೂಳೆಯ ವ್ಯಾಮೋಹದಿಂದ ಹಾಳುಮಾಡಿಕೊಂಡು ಕೊನೆಗೆ ಅವಳು ತನ್ನನ್ನು ತ್ಯಜಿಸಿ ತನ್ನ ಕುಲದ ಕಸುಬನ್ನು ಮುಂದುವರೆಸಿದರೂ, ಸುಬ್ಬು ಅವಳ ಹಿಂದೆಯೇ ಬಿದ್ದು ಅವಳು ನಾಟಕಗಳನ್ನು ಅಭಿನಯಿಸುತ್ತಿದ್ದಾಗ ಅವಳೊಡನೆ ಬರುತ್ತಿದ್ದ. ಆ ವ್ಯಕ್ತಿಯ ಬಗ್ಗೆ ಕೈಲಾಸಂ ತಮ್ಮ ಮಿತ್ರರಾದ ರಾ. ಶಿವರಾಂ ಅವರಿಗೆ ಹೀಗೆ ಹೇಳಿದ್ದಾರೆ : "ಸಾಮಾಜಿಕವಾಗಿ ನೋಡಿದರೆ ಅವನೊಬ್ಬ ನೀತಿಪತನ ಹೊಂದಿದ ವ್ಯಕ್ತಿ; ಆತ್ಮ ಗೌರವವನ್ನು ಕಳೆದುಕೊಡವ. ಆದರೆ ಅವನನ್ನು ಮಾನಸಿಕವಾಗಿ ಪರೀಕ್ಷಿಸಿದರೆ ಅವನ ಅನನ್ಯ ಪ್ರೇಮದಲ್ಲಿ ಪವಿತ್ರತೆ ಕಾಣಬಹುದು. ಅವನ ವರ್ತನೆ ತೀರ ಹೀನವಾದದ್ದು. ಆದರೆ ಅವನನ್ನು ತೆಗಳುವಂತಿಲ್ಲ. ಜೀವನದಲ್ಲಿ ಇಂಥ ಪ್ರಸಂಗಗಳು ಏಕಾಗುತ್ತವೆಯೋ ಕಾಣೆ" (ಪು. ೨೧.) ಮತ್ತಷ್ಟು ವಿವರಗಳಿಗಾಗಿ ನೋಡಿ, ಶಿವರಾಂ. ಆರ್. ೨೦೦೦. **ಕೈಲಾಸಂ ಮ್ತು ನಾನು.** ಭಾಷಾಂತರ : ರಘುನಾಥರಾವ್. ಪ್ರಿಸಂ : ಬೆಂಗಳೂರು.

೨೦. ಕೈಲಾಸಂ. ೧೯೮೭. *ಸೂಳೆ.* (ಸಂ.) ಎಚ್. ತಿಪ್ಪೇರುದ್ರಸ್ವಾಮಿ, ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿ.ವಿ.

೨೧. ಅದೇ.

೨೨. ಅದೇ.

೨೩. ಅದೇ.

೨೪. ಅದೇ.

೨೫. ಅದೇ.

೨೬. ಅದೇ.

೨೭. ಅದೇ.

೨೮. ಅದೇ.

೨೯. ಮೂರ್ತಿರಾವ್, ಎ.ಎನ್. ಕೈಲಾಸಂ ನಾಟಕಗಳು. **ನಮ್ಮ ಕೈಲಾಸಂ.** ಸಂ. ಚಿ. ಶ್ರೀನಿವಾಸರಾಜು, ಬೆಂಗಳೂರು : ಪ್ರಿಸಂ.

೩೦. ಮರುಳಸಿದ್ಧಪ್ಪ. ೨೦೦೦. ಕೈಲಾಸಂ ನಾಟಕಗಳಲ್ಲಿ ಸಾಮಾಜಿಕ ಪ್ರಜ್ಞೆ. ನಮ್ಮ ಕೈಲಾಸಂ. (ಸಂ.) ಚಿ. ಶ್ರೀನಿವಾಸರಾಜು, ಪ್ರಿಸಂ.

೩೧. ಕೈಲಾಸಂ. ೧೯೮೭, *ಸೂಳೆ.* (ಸಂ.) ಎಚ್. ತಿಪ್ಪೇರುದ್ರಸ್ವಾಮಿ, ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿ.ವಿ.

೩೨. ವಿಜಿಕೆ. ೧೯೯೯. ನಂ ಕೈಲಾಸಂ. ನೇತ್ರಾವತಿ : ಬೆಂಗಳೂರು.

೩೩. ಆನಂದಿ. ಎಸ್. ೧೯೯೧. Women's Question in the Dravidian Movement, c.1925-1948. **Social Scientist.** ಸಂ.೧೯, ಸಂ. ೫-೬.

೩೪. ಕನ್ನಬೀರನ್, ಕಲ್ಪನ. ೧೯೯೫. Judiciary, Social Reform and Debate an 'Religious Prastitution' in Colonial India. **Economic and Political Weekly.** ಸಂ. ೩೦, ಸಂ. ೪೩.

೩೫. ನಿರಂಜನ, ತೇಜಸ್ವಿನಿ ಮತ್ತು ಸೂಸಿ ಥಾರು. ೧೯೯೯. Problems for a Contemporary Theory of Gender. **Gender and Politics in India.** (ಸಂ.) ನಿವೇದಿತ ಮೆನನ್, ಆಕ್ಸ್‌ಫರ್ಡ ಯೂನಿವರ್ಸಿಟಿ ಪ್ರೆಸ್ : ದೆಹಲಿ.

೩೬. ನಾಯರ್, ಜಾನಕಿ. ೧೯೯೪. The Devadasi, Dharma and the State. Economic and Political Weekly. ಸಂ. ೨೯, ಸಂ. ೫೦.

೩೭. ೧೯ನೇ ಶತಮಾನದ ಬಂಗಾಳದಲ್ಲಿ ವೇಶ್ಯೆಯರು ವಿವಿಧ ಸಮುದಾಯದಿಂದ ಬಂದವರಾಗಿದ್ದರು. ಅವರೆಲ್ಲರು ಪ್ರಮುಖವಾಗಿ ಕೆಳ ಜಾತಿಗಳಾದ ತಂತಿ, ಮಲ್ಲೀ, ಜೋಗಿ, ಕುಮಾರ್, ಕಮಾರ್, ಚಮಾರ್, ಸೋನಾರ್ ಬನಿಯ, ಟೆಲ್ಲಿ, ಚಾಲಿಯ, ಕೊಯ್ ಬುಟೋ, ಮೊಯ್ರ್ರಾ, ಬಡ್ಯೆಯ್ಯ, ಗೋಲ್ಲಾ, ನಪಿಟ್ ಇತ್ಯಾದಿಗಳಿಗೆ ಸೇರಿದವರಾಗಿದ್ದರು. ಇದಕ್ಕೆ ಸಂಬಂಧಿಸಿದಂತೆ ಮತ್ತಷ್ಟು ವಿವರಗಳಿಗಾಗಿ ನೋಡಿ ಸುಮಂತ ಬ್ಯಾನರ್ಜಿಯವರ The 'Beshya' and the 'Babu' : Prostitute and Her Clientele in 19th Century Bengal. Economic and Political Weekly, ಸಂ. ೨೮, ಸಂ. ೪೪. ಪು. ೨೪೬೪.

೩೮. ಕೈಲಾಸಂ, ೧೯೮೭. ಸೂಳೆ. (ಸಂ.) ಎಚ್. ತಿಪ್ಪೇರುದ್ರಸ್ವಾಮಿ, ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿವಿ.

೩೯. ಅದೇ.

೪೦. ನನ್ನ ಮತ್ತೊಂದು ಲೇಖನವು ಕೈಲಾಸಂರ ಈ ವರ್ಗ ಕಲ್ಪನೆಯು ಅಂದು ಮೀಸಲಾತಿಗಾಗಿ ನಡೆಯುತ್ತಿದ್ದ ಬ್ರಾಹ್ಮಣೇತರ ಚಳುವಳಿಗೆ ವಿರುದ್ಧವಾದ ಪ್ರತಿಗಾಮಿ ಧೋರಣೆಯೆಂದು ತೋರಿಸಿದ್ದೇನೆ. ಮತ್ತಷ್ಟು ವಿವರಗಳಿಗಾಗಿ ನೋಡಿರಿ ವಿಜಯಕುಮಾರ ಎಂ. ಬೋರಟ್ಟಿಯವರ **ಆಧುನಿಕತೆ, ಭಾಷಾಂತರ, ಸಂಪ್ರದಾಯ, ಬ್ರಾಹ್ಮಣತ್ವ ಹಾಗೂ ಕೈಲಾಸಂ** (೨೦೦೨). **ಕನ್ನಡ ಅಧ್ಯಯನ.** ಸಂ. ೯, ಸಂ. ೨. ಮತ್ತು : Brahmin Community and the Secular Self : A Study of Kailasm's Plays. LITTCRIT. ಸಂ. ೨೮, ಸಂ. ೨.

೪೧. ಮರುಳಸಿದ್ಧಪ್ಪ. ೨೦೦೦. ಕೈಲಾಸಂ ನಾಟಕಗಳಲ್ಲಿ ಸಾಮಾಜಿಕ ಪ್ರಜ್ಞೆ. **ನಮ್ಮ ಕೈಲಾಸಂ.** (ಸಂ.) ಚಿ. ಶ್ರೀನಿವಾಸರಾಜು, ಬೆಂಗಳೂರು : ಪ್ರಿಸಂ.

೪೨. ಕಾದಂಬರಿಯ ಬಗೆಗಿನ ವಿವರಗಳಿಗಾಗಿ ಎಸ್. ಆನಂದಿಯವರ ಲೇಖನವನ್ನು ಆಧಾರವಾಗಿ ಇಟ್ಟುಕೊಳ್ಳಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ನೋಡಿರಿ Representing Devadasis : 'Dasigal Mosavalai' as a Radical Text. Economic and Political Weekly. ಸಂ. ೨೬, ಸಂ. ೧೧.

## ಸಾಂಖ್ಯ ದರ್ಶನದಲ್ಲಿ ಸ್ತ್ರೀ ಪ್ರಧಾನತೆ

ಮರಾಠೀ : ಶ್ರೀನಿವಾಸ ಹೇಮಾಡೆ

ಕನ್ನಡಕ್ಕೆ : ವಿಠಲರಾವ್ ಗಾಯಕ್ವಾಡ್

ಕೃಪೆ : ಮಹಾರಾಷ್ಟ್ರ ಟೈಮ್ಸ್

ಅವೈದಿಕ ದರ್ಶನಗಳಲ್ಲಿ ಎಲ್ಲಕ್ಕಿಂತಲೂ ಸದೃಢ ದರ್ಶನವೆಂದರೆ 'ಸಾಂಖ್ಯ ದರ್ಶನ'. ವಾಸ್ತವವಾದಿ ಭೌತಿಕ ದೃಷ್ಟಿಕೋನದಿಂದ ವಿಶ್ವನಿರ್ಮಿತಿಯ (ಒಂದರ್ಥದಲ್ಲಿ ವೈಜ್ಞಾನಿಕ) ಮೀಮಾಂಸೆ ಮಾಡಿರುವ ಮೊದಲನೆಯ ಭವ್ಯವೂ, ತರ್ಕನಿಷ್ಠನೂ ಆದ ಪ್ರಖರ ಪ್ರಯತ್ನ ವಾಗಿದೆ. ಚಾರ್ವಾಕನ ಜಡವಾದ ಮತ್ತು ಸಾಂಖ್ಯದ ವಾಸ್ತವವಾದದ ಮೂಲ ತಾತ್ವಿಕ ನೆಲೆ ಒಂದೇ ಆಗಿದೆ. ಇದರ ವಾಸ್ತವ ವಾದಕ್ಕೆ ತಾಂತ್ರಿಕರ ಸ್ತ್ರೀ ಪ್ರಧಾನ ವಿಚಾರಗಳೂ ಹೆಚ್ಚು ಆಧಾರವಾಗಿವೆ.

ಮಹಾಭಾರತವೇ ಮೊದಲಾದ ಕೃತಿಗಳ ಉಲ್ಲೇಖದ ಅನುಸಾರ ಇದೊಂದು ಅತಿ ಪ್ರಾಚೀನವಾದ ದರ್ಶನ. ಇದು ಬೌದ್ಧ ದರ್ಶನಕ್ಕೂ ಮೊದಲೇ ಇತ್ತು ಎಂಬುದು ನಿಶ್ಚಿತ ಸಂಗತಿ. ರಿಚರ್ಡ್‌ಗಾರ್ಬ್ ಎಂಬ ವಿಚಾರ ಚಿಂತಕನ ಅಭಿಪ್ರಾಯದಂತೆ 'ಕಪಿಲ ವಸ್ತು' (ಇಂದಿನ ಕಠ್‌ಮಂಡು) ಎಂಬ ಹೆಸರು ಸಾಂಖ್ಯ ದರ್ಶನದ ಪ್ರಣೇತ ಕಪಿಲ ಮುನಿಯದ್ದೇ ಆಗಿದೆ. ಬೌದ್ಧ ದರ್ಶನವು ಉಲ್ಲೇಖಿಸಿರುವಂತೆ ಸಾಂಖ್ಯ ದರ್ಶನವು ಕ್ರಿ.ಪೂ.ದಲ್ಲಿಯೇ ಭಾರತದಾಚೆಗೂ ಪ್ರಸಾರವಾಗಿತ್ತು. ಚಾರ್ವಾಕನ ಪ್ರಕಾರ ಸಾಂಖ್ಯ ದರ್ಶನವು ಪೂರ್ಣವಾಗಿ ದೇಶೀ ತತ್ವಜ್ಞಾನ.

ಇಂದು ಸಾಂಖ್ಯ ದರ್ಶನದ ಪ್ರಭಾವ ಹೆಚ್ಚಾಗಿ ಕಾಣಬರುತ್ತಿಲ್ಲ. ಇದನ್ನು ಧರ್ಮನೀತಿ ಕೋಶ ಎಂದಷ್ಟೆ ಹೇಳಲಾಗುತ್ತಿದೆ. ಆದರೆ ಸುಪ್ರಸಿದ್ಧ ಧಾರ್ಮಿಕ ಚಿಂತಕರಾದ ಮೆ.ಪು. ರೇಗೆ ಅವರು ಹೇಳುವಂತೆ ಭಾರತೀಯ ಜನಮಾನಸದ ಮೇಲೆ ವೇದಾಂತಕ್ಕಿಂತ ಸಾಂಖ್ಯದ ಪ್ರಭಾವವೇ ಅಧಿಕ. ರಿಚರ್ಡ್‌ಗಾರ್ಬ್ ಹಾಗೂ ತರ್ಕತೀರ್ಥ ಲಕ್ಷ್ಮಣಶಾಸ್ತ್ರಿಗಳ ಅಭಿಪ್ರಾಯ ದಲ್ಲಿ ಈ ದರ್ಶನವು ಶುದ್ಧ ಬುದ್ಧಿ ಪ್ರಾಮಾಣ್ಯದ ಮೇಲೆಯೇ ಆಧರಿಸಿರುವುದಾಗಿದೆ.

**ಪರಂಪರೆ**

ಮಹಾಭಾರತ, ಪುರಾಣಗಳ ಉಲ್ಲೇಖದಂತೆ ಕರ್ದಮ ಮತ್ತು ದೇವಾಹುತಿಯರ ಪುತ್ರ

'ಕಪಿಲ'ನೇ ಸಾಂಖ್ಯ ದರ್ಶನದ ಸಂಸ್ಥಾಪಕ. ಕಪಿಲನ ಶಿಷ್ಯ 'ಆಸುರಿ', ಅವನ ಶಿಷ್ಯ 'ಪಂಚಶಿಖ'. ನಂತರದಲ್ಲಿ ಐತಿಹಾಸಿಕವಾಗಿ ಗುರುತಿಸಲ್ಪಡುವ ಮಹತ್ವದ ಸಾಂಖ್ಯ ದರ್ಶನಕಾರನೆಂದರೆ 'ಈಶ್ವರ ಕೃಷ್ಣ' (ಕಾಲ ಸುಮಾರು ಕ್ರಿ.ಪೂ. ೧೫೦). ಕಪಿಲನು 'ಸಾಂಖ್ಯ ಸೂತ್ರಗಳು' ಹಾಗೂ 'ಷಷ್ಠಿತಂತ್ರ' ಎಂಬ ಕೃತಿಗಳನ್ನು ರಚಿಸಿದ್ದನು. ಇವುಗಳನ್ನು ಆಧರಿಸಿ ಈಶ್ವರ ಕೃಷ್ಣನು' ಸಾಂಖ್ಯಕಾರಿಕಾ' ಎಂಬ ಚಿಕ್ಕ ಕೃತಿಯೊಂದನ್ನು ರಚಿಸಿದನು. ಇಂದಿನ ಪ್ರಚಲಿತ ಸಂಗತಿಯೆಂದರೆ ಸಾಂಖ್ಯದರ್ಶನ ಎಂಬುದು 'ಕಾರಿಕ' ಎಂದೇ ಗುರುತಿಸುತ್ತಿರುವುದು.

**'ಸಾಂಖ್ಯ' ಪದದ ವ್ಯುತ್ಪತ್ತಿ**

'ಸಂಖ್ಯಾ' ಎಂಬ ಶಬ್ದದಿಂದ 'ಸಾಂಖ್ಯ' ಶಬ್ದ ರೂಪುಗೊಂಡಿತು. ಸಾಂಖ್ಯರು ತಮ್ಮ ವಿಶ್ವನಿರ್ಮಿತಿಯ ಪ್ರಕ್ರಿಯೆಯಲ್ಲಿ ಘಟಕಗಳ ಸಂಖ್ಯೆಯ ಮೇಲೆಯೇ ಒತ್ತು ನೀಡಿದುದರಿಂದ ಅದನ್ನು ಸಾಂಖ್ಯ ಎನ್ನಲಾಯಿತು. ಈ ಸಂಖ್ಯೆಗಳು ೨೪ ಇಲ್ಲವೆ ೨೫. ಇತರ ಸಂದರ್ಭಗಳಲ್ಲಿ 'ಸಾಂಖ್ಯ'ವೆಂದರೆ ಜ್ಞಾನ, ಚರ್ಚೆ, ಅನ್ವೇಷಣೆ, ವಿವೇಕ, ಚಿಂತನೆ, ಸಮೀಕ್ಷೆ 'ವಿಮರ್ಶೆ' ಎಂದು ಅರ್ಥೈಸಲಾಗಿದೆ.

**'ಪ್ರಕೃತಿ-ಪುರುಷತತ್ವ'**

ವೇದ, ಉಪನಿಷತ್ತುಗಳೆಲ್ಲ ಜಡ ಸೃಷ್ಟಿಯ ಅಸ್ತಿತ್ವ ಮತ್ತು ಅದರ ಸತ್ತೆಯನ್ನು ನಿರಾಕರಿಸಿ ಅವು ಹೊಳೆಯವುವುಗಳು ಎಂದು ಹೇಳಿವೆ. ಸಾಂಖ್ಯರು ಜಡ ಸೃಷ್ಟಿಯ (ನಿಸರ್ಗ) ಅಸ್ತಿತ್ವವನ್ನು ಸತ್ಯವೆಂದೇ ಸ್ವೀಕರಿಸಿದರು. ಇದು ಸಾಂಖ್ಯರ ಮೊದಲ ವೇದ ವಿರೋಧವಾಗಿದೆ. ದೃಶ್ಯ ಜಗತ್ತು ಹೊಳೆಯವುದಾಗಿದ್ದು, ನಿಜವಾದ ಸತ್ಯವು ಕೇವಲ ಆತ್ಮ ಅಥವಾ ಬ್ರಹ್ಮ ಈ ತತ್ವಕ್ಕೆ ಇರುವಂಥದು ಎಂಬುದು ವೇದಗಳ ಪ್ರತಿಪಾದನೆಯಾಗಿತ್ತು. ಆದರೆ ಸಾಂಖ್ಯರು ದೃಶ್ಯ ಜಗತ್ತಿನ ಮೂಲವು ಜಡ ದ್ರವ್ಯವೇ ಆಗಿರುವುದೆಂದು ಪ್ರತಿಪಾದಿಸಿದರು. ಇದು ಮತ್ತೊಂದು ವೇದ ವಿರೋಧ.

ವೇದಗಳು 'ಬ್ರಹ್ಮ ಸತ್ಯ'ದ ಏಕತತ್ವವಾದವನ್ನು ಮಂಡಿಸಿದರೆ, ಸಾಂಖ್ಯರು ಜಡ ದ್ರವ್ಯವೂ ಸತ್ಯ ಹಾಗೂ ಅದನ್ನು ಅರಿಯುವ ಸ್ವತಂತ್ರ ಜ್ಞಾತವೂ ಸತ್ಯವಾಗಿರುವುದೆಂದು ನಿಶ್ಚಿತವಾಗಿ ಪ್ರತಿಪಾದಿಸಿದರು. ಅವರು ಅದನ್ನು ಕ್ರಮವಾಗಿ 'ಪ್ರಕೃತಿ ಮತ್ತು ಪುರುಷ' ಎಂದು ಹೇಳಿದ್ದಾರೆ. 'ಪ್ರಕೃತಿ-ಪುರುಷ' ದ್ವಿತತ್ತ್ವದ ಮೇಲೆ ಮಂಡಿಸಿದ ಸಾಂಖ್ಯರ ಈ ವಿಚಾರ ಮೂರನೆಯ ವೇದ ವಿರೋಧವೂ ಹಾಗೂ ವೇದ ಬಾಹ್ಯವು ಎನ್ನಲಾಗಿದೆ. ಸಾಂಖ್ಯರ ಈ 'ಪ್ರಕೃತಿ-ಪುರುಷವಾದ'ವು ಭಾರತದ ಮೊಟ್ಟ ಮೊದಲ 'ದ್ವಿತವಾದ' (ದ್ವೈತ). ದ್ವೈತವಾದದ ಮೂಲಕವೇ ಅವರ ಸ್ತ್ರೀ-ಪುರುಷ ದೃಷ್ಟಿಕೋನವೂ ವ್ಯಕ್ತವಾಗಿದೆ. ಈ ಮಂಡನೆ ಮೂರು ಪಾತಳಿಗಳ ಮೇಲೆ ಮಾಡಬೇಕಾಗುತ್ತದೆ.

೧. ವಿದ್ಯಾಮಾನ ಸಾಂಖ್ಯ ಮತ

೨. ಪ್ರಾಚೀನ ಸಾಂಖ್ಯ ಮತ

೩. ಅವುಗಳ ವಿಶ್ಲೇಷಣೆ ಸಂಘರ್ಷದೊಂದಿಗೆ.

ವಿದ್ಯಾಮಾನ ಸಾಂಖ್ಯ ಮತವು ಈಶ್ವರ ಕೃಷ್ಣನ ಸಾಂಖ್ಯಕಾರಿಕೆಯ ತತ್ವಜ್ಞಾನ. ಅದರಲ್ಲಿ 'ಪ್ರಕೃತಿ-ಪುರುಷ' ಸ್ವರೂಪವಿಂತಿದೆ.

**'ಪ್ರಕೃತಿ'ಯ ಸ್ವರೂಪ**

'ಪ್ರಕೃತಿ' ಎಂಬ ಪರಿಕಲ್ಪನೆ ನಮಗೆ ಶ್ವೇತಾಶ್ವೇತರ ಉಪನಿಷತ್ತಿನಲ್ಲಿಯೂ ಅಂತೆಯೆ ತಾಂತ್ರಿಕ ಸಿದ್ಧಾಂತಗಳಲ್ಲಿಯೂ ಕಂಡು ಬರುವುದು. ಈ ಪರಿಕಲ್ಪನೆಯ ತಾತ್ವಿಕತೆಯನ್ನು ಬೇರೆ ಬೇರೆ ಕಡೆಗಳಲ್ಲಿ ಬಳಸಿದ್ದುಂಟು. ಆದರೆ ಸಾಂಖ್ಯರು ಮಾತ್ರ ಅದಕ್ಕೆ ಪ್ರಥಮವಾಗಿ ವಾಸ್ತವವೂ, ವೈಜ್ಞಾನಿಕವೂ ಆದ ಒಂದು ಸ್ವರೂಪವನ್ನು ನೀಡಿದರು.

ಪ್ರತ್ಯಕ್ಷವಾಗಿ ಅರಿಯುವ ವಿಶ್ವ/ನಿಸರ್ಗವು ಒಂದು ಕಾರ್ಯ. ಅದರ ಕಾರಣವೆಂದರೆ 'ಪ್ರಕೃತಿ'. ಈ ವಿಶ್ವಪರಿಧಿಯು ಅತ್ಯಂತ ವ್ಯಾಪಕವೂ ವಿಸ್ತೃತವೂ ಆದುದಾಗಿದ್ದರೆ, ಅದರ ಕಾರಣವಾಗಿರುವ ಪ್ರಕೃತಿಯು ಮಾತ್ರ 'ಅತ್ಯಂತ ಸೂಕ್ಷ್ಮ ಹಾಗೂ ಅವ್ಯಕ್ತ'ವಾಗಿದೆ. 'ಪ್ರತಿಯೊಂದು ಕಾರ್ಯಕ್ಕೂ ಕಾರಣವಿದ್ದೇ ಇದೆ' ಎಂಬುದು ಸಾಂಖ್ಯರ ಮುಖ್ಯ ಗೃಹೀತ ಸಂಗತಿ (ಇಂದಿನ ವಿಜ್ಞಾನವೂ ಈ ಅಂಶವನ್ನೇ ಹೊಂದಿದೆ). ಇದರ ನಿಯಮಾನುಸಾರ ವಿಶ್ವದ ಮೂಲ ಕಾರಣ ಎಂಬುದು 'ಪ್ರಕೃತಿ'. ಅದರ ಸ್ವರೂಪವೆಂದರೆ ಅದರ ವೈಶಿಷ್ಟ್ಯಗಳು.

೧. ಸೂಕ್ಷ್ಮ ಮತ್ತು ಅವ್ಯಕ್ತ

೨. ತ್ರಿಗುಣಾತ್ಮಕ

೩. ಜಡ (ಜ್ಞಾನ/ವಿವೇಕದ ಅಭಾವ)

೪. ಏಕತೆ (ಸಾಮಾನ್ಯತ್ವ)

೫. ಸಕ್ರಿಯತೆ ಹಾಗೂ ಪರಿಣಾಮಶೀಲತೆ (ಪ್ರಸವ ಧರ್ಮಾನುಸಾರಿ)

ಪ್ರಕೃತಿಯು ಸತ್ವ, ರಜಸ್ಸು ಮತ್ತು ತಮಸ್ಸಿನ ಗುಣಗಳಿಂದ ಯುಕ್ತವಾಗಿದೆ. ಅವುಗಳ ಮೂಲ ಸ್ವರೂಪವೆಂದರೆ, ಮೂರೂ ಗುಣಗಳು ಸಮಾನ ಪ್ರಮಾಣದವಾಗಿರುವುದು. ಈ ತ್ರಿಗುಣಗಳ ಅವಸ್ಥೆಯೂ ಸಾಮ್ಯವೇ ಆಗಿದೆ. ನಿದರ್ಶನಕ್ಕೆ ನಿಸರ್ಗವು ಜಡವೂ, ಅರಿವು ರಾಹಿತ್ಯವೂ ಆಗಿದೆಯೋ ಅಂತೇ ಪ್ರಕೃತಿಯು ಜಡವೂ, ಜ್ಞಾನರಹಿತವೂ ಆಗಿದೆ. ಈ ಸಾಮ್ಯಾವಸ್ಥೆಯನ್ನು ವ್ಯತ್ಯಸ್ಥಗೊಳಿಸಿದರೆ ಆಗ 'ವಿಶ್ವಸರ್ಗ' ಅಂದರೆ ವಿಶ್ವನಿರ್ಮಿತಿ (ಸೃಷ್ಟಿ) ಸಾಧ್ಯವಾಗಿ ಗುಣಗಳ ಪ್ರಾಬಲ್ಯಾನುಸಾರ ಪದಾರ್ಥಗಳು ಅಸ್ತಿತ್ವ ಪಡೆಯುವುವು. ಸತ್ವಗುಣವು ಸಾಮ್ಯಾವಸ್ಥೆಯಿಂದ ಹೆಚ್ಚು ಪ್ರಬಲವಾಗುವುದು. ಅದರೊಳಗಣ ಬೌದ್ಧಿಕತೆ (ಕ್ಷಣಿಕ, ಚಂಚಲ), ಅದರೊಳಗಣ ರಜೋಗುಣವಾದ 'ಅಹಂ' ಹಾಗೂ ಅದರೊಳಗಣ ತಮೋಗುಣ ವಾದ ಜಡ ವಸ್ತುಮಯಂಗಳೆಲ್ಲವೂ ವಿರಾಟವಾದ ವಿಶ್ವದಲ್ಲಿ ವ್ಯಾಪಕವಾಗಿ ಹರಡುವುವು. (ಇಲ್ಲಿ ಸಾಂಖ್ಯವು ವಿಶ್ವಸೃಷ್ಟಿಯನ್ನು ಕುರಿತ ಪಾಶ್ಚಾತ್ಯ ಚಿಂತನೆಗಿಂತಲೂ ಮುಂದೆ ಹೋಗಿರುವುದನ್ನು ಗಮನಿಸಬಹುದು. ಪಾಶ್ಚಾತ್ಯರ ಪ್ರಕಾರ ವಿಶ್ವವು ಅವಕಾಶ ಮತ್ತು ಕಾಲಗಳ

ಚೌಕಟ್ಟನಿಂದ ನಿರ್ಮಾಣವಾಗುವುದು. ಸಾಂಖ್ಯರ ಪ್ರಕಾರ 'ಅವಕಾಶ ಮತ್ತು ಕಾಲಗಳು' ಕೂಡ ಈ ಪ್ರಕೃತಿಯಿಂದಲೇ ನಿರ್ಮಿತವಾಗುವ ಅಂಶಗಳು. ಇದರಿಂದ ಅದರ ಸೂಕ್ಷ್ಮತೆ ಮತ್ತು ಅವ್ಯಕ್ತತೆಯ ಪರಿ ಎಂಥದು ಎಂಬುದನ್ನು ನಾವೇ ಮನಗಾಣಬೇಕಾಗಿದೆ.) 'ಒಂದೇ ಅಥವಾ ಏಕ' ಪ್ರಕೃತಿಯನ್ನು ವಿಶ್ವನಾಥನು ಆರಂಭಿಸುವನು. ಅದೇ ಇದರ ಆರಂಭ (ಸರ್ಗ). ಈ ನಾಟಕದ ಪ್ರೇಕ್ಷಕನೆ 'ಪುರುಷ!' ಅರಿವನ್ನುಳ್ಳವನೂ, ಜ್ಞಾನಿಯೂ ಆದ ಪ್ರೇಕ್ಷಕ್ಷನೀತ.

**'ಪುರುಷ'ನ ಸ್ವರೂಪ**

ಸಾಂಖ್ಯರ ಪ್ರಕಾರ ನಿಸರ್ಗ, ಜಗತ್ತು, ವ್ಯಕ್ತಿ - ಇದೆಲ್ಲದರ ಅನುಭವವು ಸುಖ (ಸತ್ವಗುಣ), ದುಃಖ (ರಜೋಗುಣ) ಮತ್ತು ಮೋಹಮಯ (ತಮೋಗುಣ)ವಾದುದು. ಅವುಗಳನ್ನು ಹೊಂದಿರುವವನೇ 'ಪುರುಷ'. ಇಲ್ಲಿ ಪುರುಷ ಎಂದರೆ ಸ್ತ್ರೀ ಇಲ್ಲವೆ ಪುರುಷ ಒಟ್ಟಾರೆ ಮಾನವ. ಈ ಮಾನವ ರೂಪೀ ಪುರುಷ ಎಂದರೆ ಮೂಲ 'ಪುರುಷ', ತತ್ವಗಳ ದೇಹಧಾರಿ, ಲಿಂಗದೇಹಧಾರಿ ಆಗಿರುವಂಥದು. ಈ ಎಲ್ಲವನ್ನು ಸಮಾನವಾಗಿ ಹೊಂದಿರುವ ಮನುಷ್ಯನೇ 'ಪುರುಷ' ಸೈಜಾರ್ಥದಲ್ಲಿ ಸತ್‌ಪುರುಷ. ಪುರುಷ ಸ್ವರೂಪವಿಂತಿದೆ :

೧. ಸೂಕ್ಷ್ಮ ಹಾಗೂ ಅವ್ಯಕ್ತ

೨. ನಿರ್ಗುಣ

೩. ಚೈತನ್ಯಮಯ (ಜ್ಞಾನಿ, ವಿವೇಕಿ)

೪. ಅನೇಕ (ವಿಶೇಷತೆ)

೫. ಉದಾಸೀನ/ಅಕ್ರಿಯೆ

**ಪರಸ್ಪರ ಸಂಬಂಧಗಳು**

ಪ್ರಕೃತಿ-ಪುರುಷದ ಸ್ವರೂಪ ಮತ್ತು ವೈಶಿಷ್ಟ್ಯಗಳು ಪರಸ್ಪರ ವಿರೋಧವಾದುವು. ಇಲ್ಲಿ ಕೆಲವು ಪ್ರಶ್ನೆಗಳು ಹುಟ್ಟಿಕೊಳ್ಳುವುವು. ಈ ಪರಸ್ಪರ ವಿರೋಧಿ ತತ್ವಗಳು ಒಂದರೊಡನೊಂದು ಸಂಬಂಧವನ್ನು ಪಡೆಯುವುದಾದರೂ ಹೇಗೆ? ಸಾಂಖ್ಯವು ಈ ವಿಷಯದಲ್ಲಿ ಕೊಟ್ಟಿರುವ ಸ್ಪಷ್ಟೀಕರಣಗಳು ವಿಸಂಗತವೂ, ತರ್ಕಬದ್ಧವಾದುವೂ ಆಗಿವೆ. ಅದನ್ನು ಪರಿಶೀಲಿಸುವ ಅಗತ್ಯವಿಲ್ಲ. ಸಾಂಖ್ಯವು ಈ ಬಗ್ಗೆ ಅಂತಿಮವಾಗಿ ಹೇಳುವುದಿಂತು : 'ಪ್ರಕೃತಿ-ಪುರುಷದ ಸ್ವರೂಪಗಳು' ಪರಸ್ಪರ ವಿರೋಧವಾಗಿಲ್ಲದೆ ಪೂರಕವಾಗಿವೆ. ಒಂದರೊಳಗಣ ಅಭಾವವನ್ನು ಮತ್ತೊಂದು ಲಾಭದಾಯಕವಾಗಿ ಮಾಡುವುದರ ಮೂಲಕ ಅವು ವಿಶ್ವಚಾಲನೆ (ವಿಶ್ವನಾಟ್ಯ)ಗೆ ಕಾರಣವಾಗುತ್ತಲೇ ತಮ್ಮ ಮೂಲ ಸ್ವರೂಪದಲ್ಲಿ ಪ್ರತಿಷ್ಠಿತಗೊಳ್ಳುವುವು.

ಈ ಪ್ರಾರೂಪ್ಯತೆ (Model) ಯಲ್ಲಿ ಸ್ತ್ರೀ-ಪುರುಷ ಸಂಬಂಧ ಹೇಗಿದೆ! ಸಾಂಖ್ಯವು ಇದನ್ನು ಉದಾಹರಣೆ ಸಹಿತ ವಿವರಿಸುತ್ತದೆ. ಮೂಲವು ಕಾಣುತ್ತಲೇ ಮಾತೆಯು ಪುನಃ ಅಂಕುರಿಸುವುದು. ಹಾಗೆ ಪುರುಷನು ನೋಡುವುದಕ್ಕೆಂದೋ ಏನೋ ಪ್ರಕೃತಿಯು ನಾಟ್ಯವನ್ನು ನಿರ್ಮಿಸುತ್ತದೆ. ನರ್ತಕಿಯು ಕ್ರಿಯೆಯನ್ನು ತೋರಿ ನೇಪಥ್ಯಕ್ಕೆ ಸರಿಯುವುದು. ಹೀಗೆ ಪ್ರಕೃತಿಯು ಪುರುಷನೆದುರು ನರ್ತಿಸುವ ಮೂಲಕ ತನ್ನ 'ಸ್ವರೂಪ'ವನ್ನು ತೋರಿಸಿ

ನಿವೃತ್ತವಾಗುವುದು. ಅದು ಎಷ್ಟರಮಟ್ಟಿಗೆ ಕುಲೀನವೂ, ಲಜ್ಜೆಬುರುಕಿಯೂ ಆಗಿದೆ ಎಂದರೆ ವಿವೇಕವು (ಪುರುಷ) ತನ್ನನ್ನು ನೋಡಿರುವುದೆಂದು ತಿಳಿದೊಡನೆ ಅದು ಮತ್ತೆ ಅದರೆದುರು ಬರುವುದು ಇಲ್ಲ! ಈ ನಿದರ್ಶನದಿಂದ ಪ್ರಕೃತಿ ಮಾತೆ ಹಾಗೂ ಕುಲೀನ ಸ್ತ್ರೀಯಾಗಿರುವುದೂ, ಪುರುಷನು ಚಾಲಕ ಅಥವಾ ಪ್ರೇಕ್ಷಕನಾಗಿರುವ ಸಂಬಂಧವು ವ್ಯಕ್ತವಾಗುತ್ತದೆ. ಇದರಿಂದ ಸಾಂಖ್ಯರಲ್ಲಿ ಕಾಣುವ ಸ್ತ್ರೀ ವಿಚಾರದ ಆದರ ಭಾವವು ತಿಳಿಯುತ್ತದೆ.

**ಡಾ. ಕೇಳ್ಕರ್ ಅವರ ಅಭಿಪ್ರಾಯ**

ಪ್ರಕೃತಿ-ಪುರುಷ ಪ್ರಾರೂಪ್ಯತೆಯ ಸಮಾನಾಂತರ ಚಿತ್ರಣವನ್ನು ಪ್ರತ್ಯಕ್ಷ ಬದುಕಿನಲ್ಲಿ ಹೇಗೆ ಎಡತಾಕುವುವು? ಈ ಸಂದರ್ಭದಲ್ಲಿ ಪುಣೆ ವಿಶ್ವವಿದ್ಯಾಲಯದಲ್ಲಿ ತತ್ವಜ್ಞಾನದ ಪ್ರಾಧ್ಯಾಪಕಿಯಾಗಿರುವ ಡಾ. ಮೀನಾ ಕೇಳ್ಕರರ ಅಭಿಪ್ರಾಯವನ್ನು ಗಮನಿಸಬಹುದು. ಅವರ ಪ್ರಕಾರ ಸಾಂಖ್ಯರು ಸ್ತ್ರೀಯರಿಗೆ ಕೊಂಚಮಟ್ಟಿಗಾದರೂ ಅಸ್ತಿತ್ವ ಅನುಗ್ರಹಿಸಿರುವುದು ಗಮನೀಯ. ಏಕೆಂದರೆ ವೇದಾಂತಗಳೆಲ್ಲ ಇದನ್ನು ನಿರಾಕರಿಸಿದ್ದವು. ಮತ್ತೊಂದು ಅಂಶವೆಂದರೆ, ಸ್ತ್ರೀ ಪುರುಷರು ಒಬ್ಬರೊಬ್ಬರ ಸಹಕಾರದಿಂದ ಸಂಸಾರ ನಡೆಸುವರು, ಎಂಬ ಸೂಕ್ಷ್ಮಭೂಮಿಕೆಯನ್ನು ಸಾಂಖ್ಯವು ದರ್ಶಿಸುತ್ತದೆ. ಆದರೆ ಡಾ. ಕೇಳ್ಕರ್‌ರು ಹೇಳುವಂತೆ ಈ ಸಹಕಾರ್ಯವು ಕೂಡ ಪೊಳ್ಳು ವಿಷಮತೆಯನ್ನೆ ಹೇಳುವುದಾಗಿದೆ. ಕಾರಣ ಸಾಂಖ್ಯರು ಸ್ತ್ರೀಯ ಗುಣಧರ್ಮವನ್ನು ಹೇಳಿರುವುದು ಹೀಗೆ. ಅವಳಿಗೆ ಸ್ವಂತದ್ದೆನ್ನಬಹುದಾದ ಸ್ವತಂತ್ರ ವ್ಯಕ್ತಿತ್ವವೇ ಉಳಿಯುವುದಿಲ್ಲ. ಆಕೆ ಒಬ್ಬ ಪ್ರಶಾಸಕಿ (Executive) ಯಂತೆ ಇರುವವಳು. ಇಂಥ ವ್ಯಕ್ತಿತ್ವ ಇರುವುದು 'ಪ್ರಾಕೃತಿಕ', 'ನೈಸರ್ಗಿಕ'ವಾದುದೆಂಬ ಅರಿವನ್ನು (ಜ್ಞಾನ) ಅವಳಿಗೆ ಸಾಂಖ್ಯರು ನಿರಾಕರಿಸಿ ಅವಳನ್ನು ಜಡವಸ್ತು ಎಂದಷ್ಟೆ ಮಾನ್ಯ ಮಾಡಿದ್ದಾರೆ.

**ಪುರುಷರ ಕಪಟತೆ**

ಇದಕ್ಕೆ ಸಂಬಂಧಿಸಿದಂತೆ ಮತ್ತೊಂದು ರೀತಿಯಲ್ಲಿ ಗಮನಿಸಬಹುದು. ಪುರುಷ ಉದಾಸೀನನಾಗಿದ್ದರೆ ಸ್ತ್ರೀ ಕೃತಿಶೀಲಳು. ಅಂದರೆ ಅವಳು ಪುರುಷನನ್ನು ಮೋಹದಲ್ಲಿ (ತಮೋಗುಣ) ಕೆಡವಿ ಸಂಸಾರ ಚಕ್ರದಲ್ಲಿ ಸಿಲುಕಿಸುತ್ತಾಳೆ. ಇದು ನರ್ತಕಿಯ ಭೂಮಿಕೆ! ಅಂದರೆ ಸಾಂಖ್ಯರ ಅಭಿಪ್ರಾಯದಲ್ಲಿ ಸ್ತ್ರೀ ಒಂದು ವಸ್ತು. ಮೋಹದಲ್ಲಿ ಬೀಳಿಸುವ ಅನೇಕ ವಸ್ತುಗಳ ಪೈಕಿ ಅವಳೂ ಒಂದು. ಪುರುಷರು ಸಿಲುಕುವವರು. ಆದರೆ ಅವನ ಸೋಗು, ಢೋಂಗುಗಳು ಇಂತು "ನಾನು ಅಕ್ರಿಯೆ, ಉದಾಸೀನ; ಉಳಿದೆಲ್ಲವನ್ನು ನೀನೇ ಮಾಡುವೆ!" ಇಲ್ಲವೆ ವಿಶ್ವಾಮಿತ್ರ ಪಾವಿತ್ರ್ಯದಂತೆ "ಇದಂ ತ ಮಮ್". ಹೀಗಿರುವಾಗ ಕಾಣುವ ಮುಖ್ಯ ಅಂಶವೆಂದರೆ ಸಾಂಖ್ಯವೂ ಕೂಡ ಸ್ತ್ರೀಗೆ ಜಡ, ಅಜ್ಞಾನಿ, ಮೋಹಮಯಿಯೆಂದು ತಿಳಿದಿರುವುದು.

ಈ ನಿರ್ಣಯಕ್ಕೆ ಬರುವ ಮುನ್ನ ಒಂದೊಮ್ಮೆ ಕೊಂಚ ಯೋಚಿಸಬೇಕಾಗುವುದು. ಏಕೆಂದರೆ ಈ ನಿಷ್ಕರ್ಷವು ಸಾಂಖ್ಯದ್ದೆಂದು ಹೇಳುವುದು ಅನ್ಯಾಯಕಾರಕ ಸಂಗತಿ. ಕಾರಣ ಇದು ಮೂಲತಃ ಸಾಂಖ್ಯರ ಭೂಮಿಕೆಯಲ್ಲ. ಈ ಪ್ರಸ್ತುತ ಸಂಗತಿ ಅಥವಾ ಮತವು

ಸ್ತ್ರೀಯನ್ನು ವಸ್ತುವಾಗಿ ಪರಿಗಣಿಸುವ ಪ್ರಕ್ರಿಯೆಯು ಈಶ್ವರ ಕೃಷ್ಣನದು. ಆತ ಆರ್ಯರ ಛಾಯೆಯಲ್ಲಿ ಬೆಳೆದವನು. ಸಾಂಖ್ಯದರ್ಶನವು ಮೂಲತಃ ಸ್ತ್ರೀಗೆ ಸರ್ವೋತ್ತಮ ದರ್ಜೆ ನೀಡುವ ಪ್ರಕೃತಿ ಪ್ರಧಾನ (ಸ್ತ್ರೀ ಪ್ರಧಾನ) ವಿಚಾರದ್ದಾಗಿದೆ. ಆದರೆ ಸ್ತ್ರೀಯನ್ನು ಆ ದರ್ಶನದಲ್ಲಿ ಮೂಢ, ಮೂರ್ಖ, ಜಡವಾಗಿ ಮಾಡಿದ್ದಾದರೂ ಹೇಗೆ? ಅದು ಆದ ಪರಿ ಹೀಗಿದೆ :

### ಪ್ರಾಚೀನ ಮೂಲ ಸಾಂಖ್ಯ ಮತ

ಮೂಲ ಸಾಂಖ್ಯ ಮತವೆಂದರೆ ಅದು ಕಪಿಲನದು, ಈಶ್ವರ ಕೃಷ್ಣನದ್ದಲ್ಲ. 'ಪ್ರಕೃತಿ' ಎಂಬ ಸ್ತ್ರೀವಾಚಕ ಶಬ್ದವು ಕಪಿಲನು ವಾಮಾಚಾರಿ ತಾಂತ್ರಿಕರ ಕಡೆಯಿಂದ ಸ್ವೀಕರಿಸಿದುದು. 'ಪುರುಷ' ಎಂಬ ತತ್ತ್ವವು ಮೂಲ ಪ್ರಕೃತಿಯಲ್ಲೇ ಇರುವ ಕೇವಲ ಒಂದು ಭಾಗ. ಉದಾಹರಣೆಗೆ ಚರಕ ಸಂಹಿತೆಯಲ್ಲಿ (ಕ್ರಿ.ಪೂ. ೭೮) ಚರಕನು ಪ್ರಕೃತಿಯ ಆರು ಧಾತುಗಳನ್ನು ಹೇಳಿದ್ದಾನೆ. ಆಕಾಶ, ಭೂಮಿ, ಬೆಂಕಿ, ಗಾಳಿ, ನೀರು ಇವುಗಳೊಡನೆ ಇರುವ ಆರನೆಯ ಧಾತುವೇ ಪುರುಷ. ಅದು ಸ್ವತಂತ್ರ ತತ್ತ್ವವೇನೂ ಆಗಿರಲಿಲ್ಲ. ಇದನ್ನೇ ಆಧುನಿಕ ಪರಿಭಾಷೆಯಲ್ಲಿ 'ಚೇತನ ಅಂದರೆ ಜಡ ಸ್ವರೂಪದ್ದೇ ವಿಕಸಿತ ಅವಸ್ಥೆ ಇಲ್ಲವೆ ಆವಿಷ್ಕಾರ' ಎಂದು ಕರೆಯಬಹುದಾಗಿದೆ. ಹೀಗಿರುವಾಗ ಅದು ಮುಂದೆ ಸ್ವತಂತ್ರವಾಗಿ ಪ್ರಕೃತಿಗೆ ಸಮಾನಾಂತರವಾಗಿ ಪರಿಗಣಿಸುವ ತತ್ತ್ವ ಹೇಗೆ ಬಂದಿತು? ಇದು ವೈದಿಕ ಆರ್ಯರಿಂದ ಬಂದಿತು!

### ಪ್ರಕೃತಿವಾದ

ಕಪಿಲ ಆರ್ಯ ಪೂರ್ವದ ಕಾಲದವನು. ಈ ಕಾಲದಲ್ಲಿ (ಹರಪ್ಪಾ-ಮೆಹೆಂಜೋದಾರೋ ಸಂಸ್ಕೃತಿ) ಮಾತೃಸತ್ತೆಯ ಕೃಷಿ ಪ್ರಧಾನ ಸಮಾಜ ರಚನೆಯು ಇದ್ದಿತು. ಹೊಲ ಮತ್ತು ಸ್ತ್ರೀಯ ನಡುವಣ ಸಾಧರ್ಮ್ಯತೆ ಹಾಗೂ ಸ್ತ್ರೀಯ ಮಹತ್ವ, ಸುಫಲತೆ (Fertilty) ಇತ್ಯಾದಿ ಸಮಾನವಾದ ದ್ವಿ ಅಂಶಗಳಿಂದ ನೋಡಿದಾಗ ಸ್ತ್ರೀಗೆ ಅತ್ಯಧಿಕ ಮಹತ್ವ ಇದ್ದುದು ಸ್ಪಷ್ಟವಾಗುತ್ತದೆ. ಸಿಂಧೂ ಸಂಸ್ಕೃತಿಯ ಕಾಲವು ಮಾತೃಸತ್ತಾತ್ಮಕವಾದುದು. ಈ ಸಮಾಜದಲ್ಲಿದ್ದ ಸ್ತ್ರೀ ಮಹಾತ್ಮವನ್ನು ಗಮನಿಸಿದಾಗ ಇದು ಮನದಟ್ಟಾಗುವುದು. ಈ ವಿಚಾರದಿಂದಾಗಿಯೇ ಭಾರತದಲ್ಲಿ ಯೋನಿಪೂಜೆ, ಸ್ತ್ರೀಪೂಜೆ, ಸ್ತ್ರೀ ದೇವತೆಗಳ ವಿಕಸನಗಳು ಆದುವು. ಸ್ತ್ರೀಯ ನಿರ್ಮಾಣ ಸಾಮರ್ಥ್ಯವು ಅಗಾಧವಾಗಿತ್ತು. ಮಾನವ ಮಾತೆ ಮತ್ತು ಭೂಮಾತೆಯರನ್ನು ಸಮಾನವಾಗಿ ಕಾಣುತ್ತಿದ್ದರು. ಸಹಜವಾಗಿ ಕಪಿಲನಿಗೂ ಪುರುಷನಿಗಿಂತ ಸ್ತ್ರೀಯೇ ಮಹತ್ವವಾಗಿ ಕಂಡು ಆತ ಪ್ರಕೃತಿವಾದವನ್ನು ಮಂಡಿಸಿದ್ದು. ಇದು ಸ್ತ್ರೀಗೆ ಕೊಡಲಾದ ವಿಶ್ವತತ್ತ್ವಾತ್ಮಕ (Cosmic Principle) ಮಾನ್ಯತೆಯಾಗಿತ್ತು. ಇಂಥ ಸಮಾಜದಲ್ಲಿ ಪುರುಷನು ಯಾವಾಗಲೂ ಉದಾಸೀನ, ನೆಂಟ, ಆಗಾಗ ಸಂಧಿಸುವವ, ಜನ್ಮದಾತ (Begetter)ನಾಗಿದ್ದ. ಈ ಕಾರಣದಿಂದಲೇ ಚರಕನೂ ಕೂಡ ಪುರುಷನಿಗೆ ಗೌಣ ಸ್ಥಾನವನ್ನೇ ನೀಡಿರುವುದು.

ಮುಂದೇ ಭಾರತಕ್ಕೆ ಆಗಮಿಸಿದ ವೈದಿಕ ಆರ್ಯರು ಕೃಷಿ ಪ್ರಧಾನ ವೃತ್ತಿಯವರಾಗಿರಲಿಲ್ಲ. ಅವರು ಪಶುಪಾಲನೆ ವೃತ್ತಿಯವರೂ ಪುರುಷಪ್ರಧಾನ ಸಂಸ್ಕೃತಿಯವರೂ ಆಗಿದ್ದರು. ಜಾರ್ಜ್ ಥಾಮ್ಸನ್, ಬ್ರಿಂಫಾ, ಫ್ರೇಜರ್‌ನಂತಹ ವಿಚಾರಶೀಲರು ಅಭಿಪ್ರಾಯ ಪಡುವಂತೆ ಹಿಂದೆಬಿದ್ದ ಪಶುಪಾಲನೆ ಅವಸ್ಥೆಯ ವಿಕಸಿತವೇ ಕೃಷಿ ಪ್ರಧಾನತೆ. ಆಗ್ಗೆ ವೈದಿಕ ಆರ್ಯರು ಮೂಲತಃ ಬೇಟೆಯ ವೃತ್ತಿಯವರೂ ಪುರುಷಪ್ರಧಾನ ಸಂಸ್ಕೃತಿಯವರೂ ಆಗಿದ್ದರು. ಆರ್ಯ ಪುರುಷರು ಶಿಕಾರಿಗಳು ಆಗಿರುವುದರಿಂದ 'ಶಿಕಾರಿ ದೊರಕಿಸಿಕೊಳ್ಳುವುದು' ಅವರ ಧರ್ಮ. ಈ ನ್ಯಾಯದಂತೆ ಪುರುಷನ ಮೊದಲ (ಹಾಗೂ ಕೊನೆಯ) ಶಿಕಾರಿ ಸ್ತ್ರೀಯೇ ಆಗಿದ್ದಾಳೆ. ಈ ಕಾರಣದಿಂದಾಗಿಯೋ ಏನೋ ವೈದಿಕ ಆರ್ಯರು ಇಂದ್ರನಲ್ಲಿ ಖಾಯಂ ಆಗಿ ಹಸು ಮತ್ತು ಸ್ತ್ರೀಯರನ್ನು ಭಿಕ್ಷೆ ಬೇಡುವುದು ಕಂಡು ಬರುತ್ತದೆ.

ಆಕ್ರಮಣಶೀಲ ಆರ್ಯರು ತಮ್ಮ ಸಂಸ್ಕೃತಿಯನ್ನು ಇಲ್ಲಿನ ಸಿಂಧು ತೀರದ ವಾಸಿಗಳ ಮೇಲೆ ಹೇರಿದ್ದು ಧರ್ಮ ತತ್ವಜ್ಞಾನಗಳ ಮೂಲಕ. 'ಪ್ರಕೃತಿ'ಯು ಇದ್ದ ವಿಶ್ವಸತ್ತಾತ್ಮಕ ಸ್ಥಾನವನ್ನು 'ಪುರುಷ' ಎಂಬ ವಿಶ್ವತತ್ವವು ಆಕ್ರಮಿಸಿತು. ಅದರ ರೂಪವೇ ಇದು, ಅಂದರೆ 'ಋಗ್ವೇದದಲ್ಲಿನ ಪುರುಷ ಸೂಕ್ತ'. ಇಲ್ಲಿನ ಒಂದು ಸೂಕ್ಷ್ಮತೆಯು ಗಮನಾರ್ಹ. ವೈದಿಕ ವಾಙ್ಮಯದಲ್ಲಿಯೂ 'ಪುರುಷ' ಎಂಬ ಶಬ್ದವು 'ಮಾನವ ದೇಹಧಾರೀ ಪುರುಷ'(Human Body) ಎಂಬ ಅರ್ಥದಲ್ಲಿಯೇ ಬಳಸಲ್ಪಟ್ಟಿರುವುದನ್ನು ಡಾ. ಬೆಲ್‌ವಲ್‌ಕರ್ ಮತ್ತು ರಾನಡೆಯವರು ಉದಾಹರಣೆ ಸಹಿತ ಸಿದ್ಧಪಡಿಸಿ ತೋರಿಸಿದ್ದಾರೆ. ನಿಧಾನವಾಗಿ ಉಪನಿಷತ್ತುಗಳ ಕಾಲದಲ್ಲಿ ಈ ಶಬ್ದವು ಆತ್ಮತತ್ವದ ರೂಪವಾಗಿ ಪರಿಣಮಿಸಿತು. 'ಪುರುಷ= ಪುರೀ-ಶಯ = ದೇಹವೆಂಬ ದುರ್ಗದಲ್ಲಿ ಇರುವವನು ಎಂಬರ್ಥವು ಬಂದಿತು. ಋಗ್ವೇದದ ಕೊನೆಯ ಕಾಲಖಂಡದಲ್ಲಿ ಪುರುಷ ಕಲ್ಪನೆಯು 'ವಿಶ್ವತತ್ತ್ವ' (Cosmic Principle) ವಾಗಿ ರೂಪುಗೊಂಡು ವಿರಾಟ ಸ್ವರೂಪವನ್ನು ಪಡೆಯಿತು. ಅದೇ ಪುರುಷ ಸೂಕ್ತ.

ಈಶ್ವರ ಕೃಷ್ಣನೂ ಕೂಡ 'ಪುರುಷ' ಎಂಬ ಶಬ್ದವನ್ನು ಮಾನವ ಪುರುಷ ಎಂಬರ್ಥದಲ್ಲಿಯೇ ಪ್ರಯೋಗಿಸಿದ್ದಾನೆ. ಸಾಂಖ್ಯಕಾರಿಕೆಯಲ್ಲಿ 'ಪುರುಷ'ನಂತೆಯೇ 'ಪುತ್ರರಿಗೆ, ಪುಸ್' ಎಂಬ ಶಬ್ದವೂ ಇದೆ. ಸಮಾಜದಲ್ಲಿನ ಸ್ತ್ರೀ-ಪುರುಷ ಸಂಯೋಗವನ್ನು ನೋಡಿಯೇ ಆತ ಪ್ರಕೃತಿ ಪುರುಷವಾದವನ್ನು ಮಂಡಿಸಿರುವುದು. ಇದನ್ನು ವೇದಾಂತದ ಆಚಾರ್ಯ ಪುರುಷನಾಗಿರುವ ಗೌಡಪಾದನೂ ಸಹ ಮಾನ್ಯ ಮಾಡಿದ್ದಾನೆ.

### ಸ್ತ್ರೀವಾದೀ ತತ್ತ್ವಜ್ಞಾನ

ಕಪಿಲನ ಸಾಂಖ್ಯವು ಸ್ತ್ರೀ ಪ್ರಾಧಾನ್ಯ ವಿಚಾರಗಳನ್ನುಳ್ಳದಾಗಿತ್ತು ಎಂಬುದಕ್ಕೆ ಮತ್ತೊಂದು ಪುರಾವೆ ಎಂದರೆ ಮಹಾಭಾರತ. ಇದರ ಉಲ್ಲೇಖಾನುಸಾರ ಕಪಿಲ ಮುನಿಯು ಪುರುಷನಲ್ಲ. ಬದಲಾಗಿ 'ಕಪಿಲಾ' ಎಂಬ ನಾಮಧೇಯವುಳ್ಳ ಸ್ತ್ರೀಯಾಗಿದ್ದಳು. ಅವಳು ಅಸುರನ ಪತ್ನಿ, ಪಂಚಶಿಖನೆಂಬುವನ್ನು ಶಿಕ್ಷಣಕ್ಕಾಗಿ ಅವಳಲ್ಲಿಗೆ ಬಂದನು. ಆಗ ಕಪಲಾಳು ಸ್ತನ್ಯಪಾನ ನೀಡುವುದರೊಂದಿಗೆ ಅವನನ್ನು ಪೋಷಿಸಿದಳು. ಆ ಕಾರಣ ಅವನಿಗೆ 'ಕಪಿಲಪುತ್ರ' ಎಂಬ

ಹೆಸರು ಬಂದಿತು. ಈ ಕಲ್ಪನೆ ಚಮತ್ಕಾರಿಯೆನಿಸಿದರೂ ಮಹತ್ವವಾದುದು. ಇಲ್ಲಿ ಸ್ತನ್ಯ ಎಂಬುದು 'ಸಾಂಖ್ಯತತ್ತ್ವ' ಎಂಬರ್ಥದಲ್ಲಿ ಬಳಸಲಾಗಿರಬಹುದು.

**ವಿಶ್ಲೇಷಣೆ**

ಸ್ತ್ರೀವಾದಿ ತತ್ತ್ವಜ್ಞಾನವು ಹೀಗೆ ಪುರುಷವಾಗಿ ಬದಲಾದುದು ಏಕೆ? ಇದಕ್ಕೆ ಕಾರಣ ಈಶ್ವರ ಕೃಷ್ಣನು ಮಾಡಿದ ಮಸುಕು ಸಂಧಿ. ಅವನು ಆರ್ಯ ಪ್ರಣೀತ ಪುರುಷ ತತ್ವವನ್ನು ಈ ಅರ್ಥದಲ್ಲಿ ಆತ್ಮತತ್ವವಾಗಿ ಸ್ವೀಕರಿಸಿದ್ದನು. ಈ ಕಾರಣವಾಗಿಯೇ ಸಾಂಖ್ಯದರ್ಶನವು ಅಶಕ್ತವೂ, ಭಿನ್ನವೂ ಆಗಿ ಪರಿಣಮಿಸಿ, ಅದರಲ್ಲಿ ಅನಂತ ವಿಸಂಗತಿಗಳು ನಿರ್ಮಾಣವಾದವು. ಆರ್ಯರು ಈ ದೌರ್ಬಲ್ಯದ ಲಾಭವನ್ನು ಪಡೆದು ಅವೈದಿಕ ಸಾಂಖ್ಯವನ್ನು ವೈದಿಕಗೊಳಿಸಿದರು. ಸಾಂಖ್ಯ ದರ್ಶನದಲ್ಲಿ ವೇದವೂ ನುಸುಳಿತು, ಈಶ್ವರನೂ ಸೇರಿಕೊಂಡ. ಈಶ್ವರ ಕೃಷ್ಣನು ಮಾಡಿದ ಈ ಸಂಧಿಯಿಂದಾಗಿ ಆಧ್ಯಾತ್ಮವಾದದ ವೇದಕ್ಕೆ ಭಾರತೀಯ ಸ್ತ್ರೀವಾದದ ವಿಜ್ಞಾನವಾದವು ಬಲಿಯಾಯಿತು. ಭಾರತೀಯ ವಿಚಾರ ಚಿಂತನೆಯ ದೃಷ್ಟಿಯಿಂದ ಇದೊಂದು ಶೋಕಾಂತಿಕ ಅಂಶವಾಗಿದೆ.

**ಹತಬಲ ಈಶ್ವರ ಕೃಷ್ಣ**

ಈಶ್ವರ ಕೃಷ್ಣನು ಮಾಡಿದ ಈ ಸಂಧಿ ಪ್ರಕ್ರಿಯೆಯು ಆಕ್ರಮಣಶೀಲರೂ, ಅಲೆಮಾರಿಗಳೂ ಆದ ಆರ್ಯರ ಎದುರು ಬಲಹೀನವಾದಂತಾಯಿತು. ಜಯಶಾಲಿಗಳು ಸೋತವರ ಮೇಲೆ ತಮ್ಮ ರೀತಿಯನ್ನು ಹೇರಿದಂತೆ ಆರ್ಯರು ಧರ್ಮ, ತತ್ತ್ವಜ್ಞಾನ ಮತ್ತು ಪ್ರತ್ಯಕ್ಷ ಜೀವನ ಪದ್ಧತಿಯಿಂದಲೂ ಸ್ತ್ರೀ ಸತ್ತೆಯವಾದಿಗಳನ್ನು ಬದಲಾಯಿಸಿದರು. ಮತ್ತೊಂದು ಅಂಶವೆಂದರೆ, ಈಶ್ವರ ಕೃಷ್ಣನಿಗೂ ಸುಮಾರು ಎರಡು-ಮೂರು ಶತಮಾನದಷ್ಟು ಹಿಂದೆಯೇ 'ಮನುಸ್ಮೃತಿ'ಯನ್ನು ರಚಿಸಲಾಗಿತ್ತು. ಅದೂ ಕೂಡ ಭೀಷಣವೂ, ಅಮಾನುಷವೂ ಆದ ಒತ್ತಡವೇ ಹೌದು. ಇದಲ್ಲದೆ ಕೌಟಿಲ್ಯನ ಕುಟಿಲ ನೀತಿಯಲ್ಲಿಯೂ ಸ್ತ್ರೀಯನ್ನು ಪಶುಸಮಾನವಾಗಿಯೇ ತೋರಿಸಿದೆ. ಇಂಥ ಭೌತಿಕ ಮತ್ತು ವೈಚಾರಿಕ ಒತ್ತಾಯದ ನೆಲೆಯಲ್ಲಿ ಈಶ್ವರ ಕೃಷ್ಣನು ಈ ಅಂಶವನ್ನು ಸ್ವೀಕರಿಸಿದನು.

ಈ ವಿಚಾರಗಳ ನೆಲೆಯಿಂದ ಮೂಲದಲ್ಲಿ ಸಾಂಖ್ಯವು ಸ್ತ್ರೀಪ್ರಧಾನವಾಗಿತ್ತು. ವೈದಿಕ ಆರ್ಯರ ಬಲಾತ್ಕಾರದಿಂದಾಗಿ ಅದು ಸ್ತ್ರೀವಾದೀ ಭೂಮಿಕೆಯನ್ನು ಬಿಟ್ಟುಕೊಟ್ಟು ಪುರುಷ ಪ್ರಧಾನವಾಗಬೇಕಾಯಿತು. ಆದರೂ ಅದರ ಪುರುಷ ನೆಲೆ ದುರ್ಬಲವೇ ಆಗಿದೆ. ಸಾಂಖ್ಯರ ವಿರುದ್ಧ ವೈದಿಕ ಸಂಘರ್ಷ ಕೇವಲ ತಾತ್ತ್ವಿಕವಷ್ಟೇ ಆಗಿರಲಿಲ್ಲ. ಧರ್ಮತತ್ತ್ವಜ್ಞಾನವನ್ನು ಸೋತವರ ಕೊರಳಿಗೆ ಹಾಕುವುದಕ್ಕಾಗಿ ಅವರು ಸಾಂಖ್ಯರ ಮಾತೃಪ್ರಧಾನ ಜೀವನಪದ್ಧತಿಯನ್ನು ಉಚ್ಚಾಟಿಸಲಾಯಿತು. ಬಾಲ್ಯವಿವಾಹ, ವಿಧವೆಯರನ್ನು ಕ್ರೂರವಾಗಿ ನಡೆಸಿಕೊಳ್ಳುವ ಪದ್ಧತಿ, ಬಹುಪತ್ನಿತ್ವ ಮತ್ತು ಸತಿ ಪದ್ಧತಿಯಂತಹ ಕ್ರೂರ ನಡಾವಳಿಗಳನ್ನು ವೈದಿಕರೇ ರೂಢಿಗೆ ತಂದುದು. ಸ್ತ್ರೀ ಮಹಾತ್ಮ್ಯವನ್ನು ಇಷ್ಟೊಂದು ಅಪಮೌಲ್ಯಗೊಳಿಸಿದ ಅಮಾನುಷ

ಪಾಶವೀ ಪ್ರಯತ್ನ ಜಗತ್ತಿನಲ್ಲಿ ಅನ್ಯತ್ರ ಎಲ್ಲಿಯೂ ನಡೆದಿಲ್ಲವೆಂದು ಎಹರ್‌ನೆಫೆಲ್ ಎಂಬ ಮಾನವಶಾಸ್ತ್ರಜ್ಞನ್ನು ಹೇಳಿದ್ದಾನೆ. ಆರ್ಯರ ನೀಚತನದ ಸರ್ವಶ್ರೇಷ್ಠ ಆವಿಷ್ಕಾರವು ಅವರ ಪುರುಷ ಸೂಕ್ತದಲ್ಲಿ ಕಾಣಸಿಗುತ್ತದೆ. ಅದರ ಪ್ರಕಾರ ಸ್ತ್ರೀಯನ್ನು ಶೂದ್ರನಿಗಿಂತ ನೀಚತಮ ಸ್ಥಾನದಲ್ಲಿ ಗುರುತಿಸಲಾಗಿದೆ. ಅದನ್ನು ಪ್ರತಿಭಟಿಸಿದ್ದು ಸಾಂಖ್ಯ ಮತ್ತು ಚಾರ್ವಾಕರು. ಆದರೆ ಸಾಂಖ್ಯ ಅಧೀನಗೊಂಡಿತು. ಚಾರ್ವಾಕ ಇಲ್ಲವಾಯಿತು.



## ಮೂರನೇ ಜಗತ್ತಿನ ರಾಷ್ಟ್ರಗಳಲ್ಲಿ ಮಹಿಳೆಯರ ಹೋರಾಟಗಳು

ತೆಲುಗು : ರಮಾ ಮೇಲ್ಕೋಟೆ

ಅನು : ಸುಜ್ಞಾನಮೂರ್ತಿ

ಕೃಪೆ : ಫೆಮಿನಿಸ್ಟ್ ಸ್ಟಡಿ ಸರ್ಕಲ್

ವಸಾಹತುಶಾಹಿಯು ಸಾಮ್ರಾಜ್ಯಶಾಹಿಯು ಮೂರನೇ ಜಗತ್ತಿನ ರಾಷ್ಟ್ರಗಳ ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ವ್ಯವಸ್ಥೆಯ ಮೇಲೆ ತೀವ್ರವಾದ ಪ್ರಭಾವವನ್ನು ಬೀರಿತು. ಆರ್ಥಿಕ ದರೋಡೆ ಅಷ್ಟೇ ಅಲ್ಲ ಸಾಂಸ್ಕೃತಿಕವಾಗಿಯೂ ಮೂರನೇ ಜಗತ್ತಿನ ರಾಷ್ಟ್ರಗಳ ಜನರ ಆಲೋಚನೆಗಳನ್ನು ವಸಾಹತುಶಾಹಿ ಸಾಮ್ರಾಜ್ಯವಾದ ಅಲುಗಾಡಿಸಿತು. ಮೂರನೇ ಜಗತ್ತಿನ ರಾಷ್ಟ್ರಗಳನ್ನು ವಸಾಹತುಶಾಹಿಯು ಶೋಷಣೆಗೊಳಿಸಿದ ರೀತಿ ಹಾಗೂ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಮಹಿಳೆಯರ ಶೋಷಣೆಯ ನಡುವೆ ಸಾಮ್ಯತೆ ಕಂಡುಬರುತ್ತದೆ. ವಸಾಹತುಶಾಹಿಗಳ ಕೈಯಲ್ಲಿ ವಸಾಹತು ರಾಷ್ಟ್ರಗಳ ಜನರು "ಅವಲಂಬಿತ ಜೀವಿಗಳಾಗಿ" ಬದುಕುವಂತೆ ಶಿಕ್ಷಣ ಪಡೆದರು. ಬಿಳಿ ಜನಾಂಗದವರು ತಮ್ಮ ಜನಾಂಗದ ದೊಡ್ಡಸ್ತಿಕೆಯ ಧೋರಣೆಯಿಂದ ಕಪ್ಪು ಜನಾಂಗದವರನ್ನು ದೋಚುವುದು ತಮ್ಮ ಸಹಜ ಹಕ್ಕೆಂದು ಭಾವಿಸಿದರು. (ಅದು ಅವರ ಭಾಷೆಯಲ್ಲಿ "ಸಂಸ್ಕೃತಿ" ಕೂಡಾ ಆಗಿತ್ತು). ವಸಾಹತುಶಾಹಿಗಳ ನಾರಿಯರು ಸಹ ಸಾಮ್ರಾಜ್ಯವಾದದ ಈ ಆಟಗಳಿಂದ ಸಂತೃಪ್ತಿಗೊಂಡರು. ಸಾಮ್ರಾಜ್ಯಶಾಹಿಯು ತನ್ನ ದರೋಡೆಯ ನೀತಿಗನುಸಾರವಾಗಿ ಕಾರ್ಮಿಕ ವರ್ಗದ ಜೊತೆ ವ್ಯವಹರಿಸುವಾಗ ಜನಾಂಗ, ಬಣ್ಣ ಮತ್ತಿತರ ಕಟ್ಟುಪಾಡುಗಳನ್ನು ಎತ್ತಿತೋರಿ ಭೇದಭಾದ ವನ್ನು ಹುಟ್ಟು ಹಾಕಿತು. ಸಾಮ್ರಾಜ್ಯಶಾಹಿಯು ತನ್ನ ವಸಾಹತುಗಳಲ್ಲಿ ಉದ್ಯೋಗ ಸೌಕರ್ಯಗಳನ್ನು ಒದಗಿಸಿ ಆಯಾ ದೇಶದಲ್ಲಿನ ಉನ್ನತ ವರ್ಗದ ಕೆಲಮಂದಿ ಮಹಿಳೆಯರ ಸ್ಥಾನಮಾನವನ್ನು ಉತ್ತಮಗೊಳಿಸಿತು. ಆದರೆ ಅವನ ಈ ಉದ್ಯೋಗಗಳು ಪ್ರಧಾನವಾಗಿ ಕುಟುಂಬ ಸ್ವಭಾವವನ್ನು ಹೊಂದಿದ ಶಿಕ್ಷಕಿಯರನ್ನಾಗಿ, ನರ್ಸುಗಳಾಗಿ ಮಾತ್ರವೇ ಉಳಿದು ಪುರುಷರು ನಿರ್ವಹಿಸುವ ಪಾತ್ರಗಳಿಗೆ ಭಿನ್ನವಾಗಿಯೇ ಇದ್ದವು. ಈ ಗುಂಪಿಗೆ ಸೇರಿದ ಉದ್ಯೋಗಗಳು ಸಂಖ್ಯೆಯಲ್ಲೂ ಬಹಳ ಕಡಿಮೆಯಾಗಿದ್ದವು.

ಈ ಗುಂಪಿಗೆ ಸೇರಿದ ಮಹಿಳೆಯರು ಮೂರನೇ ಜಗತ್ತಿನ ರಾಷ್ಟ್ರಗಳಲ್ಲಿನ ರಾಷ್ಟ್ರೀಯ ಚಳುವಳಿಗಳಲ್ಲಿ ಹಾಗೂ ಸುಧಾರಣಾ ಚಳುವಳಿಗಳಲ್ಲಿ ತಮ್ಮ ಪಾತ್ರವನ್ನು ನಿರ್ವಹಿಸಲು ಸಾಧ್ಯವಾಯಿತು. ಸಾಮ್ರಾಜ್ಯಶಾಹಿಯು ತನ್ನ ವಸಾಹತುಗಳ ಆರ್ಥಿಕ ವ್ಯವಸ್ಥೆಯನ್ನು ಛಿದ್ರಛಿದ್ರಗೊಳಿಸಿತು. ಇಂಥ ಪರಿಸ್ಥಿತಿಯಲ್ಲಿ ಅತೃಪ್ತಿ ಹೆಚ್ಚಾಗಿ ರಾಷ್ಟ್ರೀಯ ಚಳುವಳಿಗಳೂ ಕ್ರಮೇಣ ಹೆಚ್ಚಾದವು. ಈ ಚಳುವಳಿಗಳಲ್ಲಿ ಪಾತ್ರವಹಿಸಿದ ಮಹಿಳೆಯರು ಹಾಗೂ ಪುರುಷರು ಕ್ರಮೇಣ ಸುಧಾರಣಾ ಚಳುವಳಿಗಳಲ್ಲೂ ಭಾಗವಹಿಸಲು ಅವಕಾಶ ಪಡೆದರು. ವಿದೇಶಿ ಆಡಳಿತದ ದರೋಡೆತನದ ಆರ್ಥಿಕ ನೀತಿಯಿಂದ ಬಿಡುಗಡೆ, ವಿದೇಶಿ ಉತ್ಪನ್ನಗಳ ಬಹಿಷ್ಕಾರ, ಆರ್ಥಿಕ ಸುಭದ್ರತೆ, ಶಿಕ್ಷಣ, ಏಕಪತಿತ್ವ (Monogomy), ಮೊದಲಾದ ಬೇಡಿಕೆಗಳನ್ನು ಈ ರಾಷ್ಟ್ರೀಯ, ಸುಧಾರಣಾ ಚಳುವಳಿಗಳು ಮುಂಚೂಣಿಗೆ ತಂದವು. ಬದಲಾಗುತ್ತಿದ್ದ ಅಧಿಕಾರದ ಸಂಬಂಧಗಳಿಗೆ ಒಂದು ರೂಪವನ್ನು ಕೊಡಲು ಈ ಬೇಡಿಕೆಗಳನ್ನು ಮುಂದಿಡುವುದು ಅನಿವಾರ್ಯವಾಯಿತು. ಅಗತ್ಯವಾದ ಪ್ರತಿಯೊಂದು ರಾಷ್ಟ್ರದಲ್ಲೂ ಲಿಂಗಭೇದಕ್ಕೆ ಸಂಬಂಧಿಸಿದಂತೆ ಕ್ರಾಂತಿಕಾರಕ ಬದಲಾವಣೆಗಳು ಉಂಟಾದವು. ಈ ಚಳುವಳಿಗಳಲ್ಲಿ ಮಹಿಳೆಯರು ನಿರ್ವಹಿಸಿದ ಪಾತ್ರದಿಂದಾಗಿ ಮಹಿಳಾ ಸಮಸ್ಯೆಗಳಿಗೂ ಒಂದು ಸಿದ್ಧಾಂತ ರೂಪವನ್ನು ಕೊಡಬೇಕಾದ ಅಗತ್ಯತೆಯುಂಟಾಯಿತು. ಏಕೆಂದರೆ ೧೯೬೯-೭೦ ರಲ್ಲಿ ಮುಂದೆ ಬಂದ ಸ್ತ್ರೀವಾದಿ ಚಳುವಳಿಯು ಹೆಣ್ಣು-ಗಂಡಿನ ಸಂಬಂಧಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಬೇಕೆಂಬ ವಿಷಯವನ್ನು ನಿರ್ಧರಿಸಿ ಹೇಳಿತು.

ಮೂರನೇ ಜಗತ್ತಿನ ರಾಷ್ಟ್ರಗಳಲ್ಲಿ ನಡೆದ ವಿವಿಧ ಚಳುವಳಿಗಳಲ್ಲಿ ಮಹಿಳೆಯರು ನಿರ್ವಹಿಸಿದ ಪಾತ್ರವನ್ನು ಗಮನಿಸಿ ಈ ದೇಶದಲ್ಲಿ ಮಹಿಳಾ ಚಳುವಳಿಗಳು ಹೇಗೆ ಮುನ್ನಡೆದಿವೆಯೆಂದು ಚರ್ಚಿಸುವುದು ಈ ಲೇಖನದ ಉದ್ದೇಶ. ಆದರೆ ಎಲ್ಲ ದೇಶಗಳ ಚಳುವಳಿಗಳನ್ನು ಚರ್ಚಿಸುವುದು ಸಾಧ್ಯವಿಲ್ಲ. ಮಹಿಳಾ ಚಳುವಳಿಗೆ ಸಂಬಂಧಿಸಿದ ಕೆಲವು ಮುಖ್ಯವಾದ ಪ್ರಶ್ನೆಗಳನ್ನು ಎತ್ತಿದ ದೇಶಗಳ ಮುಖ್ಯ ಚಳುವಳಿಗಳನ್ನು ಚರ್ಚಿಸೋಣ. ಈ ಲೇಖನದಲ್ಲಿ ಭಾರತ ಹಾಗೂ ಚೀನಾದಲ್ಲಿ ನಡೆದ ಚಳುವಳಿಗಳನ್ನು ಚರ್ಚಿಸಿಲ್ಲ.

ಸ್ತ್ರೀವಾದಿ ಚಳುವಳಿಯು ೧೯೨೦-೩೦ರಲ್ಲಿ ಪಾಶ್ಚಿಮಾತ್ಯ ದೇಶಗಳಲ್ಲಿ ಪ್ರಾರಂಭವಾದ "ಸಮಾನ ಹಕ್ಕುಗಳ" ಚಳುವಳಿಯೊಂದಿಗೆ ಆರಂಭವಾಯಿತೆಂದು ಹೇಳಬಹುದು. ಈ ಕಾಲದಲ್ಲೇ ರಾಷ್ಟ್ರೀಯ ಚಳುವಳಿಗೂ ಹೆಚ್ಚಾಗತೊಡಗಿದವು. ಆದರೆ ಈ ಸಮಾನಹಕ್ಕುಗಳ ಹೋರಾಟಗಳು ಅಂದಿನ ಬೂರ್ಜ್ವಾಗಳಿಗೆ ಇದ್ದ ದೌರ್ಬಲ್ಯಗಳೆಲ್ಲವನ್ನೂ ಪ್ರದರ್ಶಿಸಿತು. ಆದ್ದರಿಂದ ಅದು ಅಷ್ಟು ಪ್ರಾಮುಖ್ಯತೆಯನ್ನು ಗಳಿಸಿಕೊಳ್ಳಲಿಲ್ಲ. ೧೯೨೦ರಲ್ಲಿ ಟರ್ಕಿಯಲ್ಲಿ ಮುಸ್ತಾಫಾಕಮಲ್ ಅತಾಯರ್ ಪ್ರಾರಂಭಿಸಿದ ರಾಷ್ಟ್ರೀಯ ಹೋರಾಟ ಇಸ್ಲಾಂ ಧರ್ಮಾಧಿಪತ್ಯವನ್ನು ತಿರಸ್ಕರಿಸಿತು; ಅದು ಬಟ್ಟಮನ್ ಕ್ಯಾಲಿಫೇಟ್‌ನನ್ನು ಧಾರ್ಮಿಕ ನಾಯಕತ್ವದಿಂದ ತೊಲಗಿಸಿತು. ಟರ್ಕಿಯಲ್ಲಿ ಆಂತರಿಕ ಬದಲಾವಣೆಗಳೆಷ್ಟೋ ಆದವು. ಮಹಿಳೆಯರು ಘೋಷಾ ಪದ್ಧತಿಯನ್ನು ತೊಲಗಿಸಿದರು. ಬಹುಪತ್ನಿತ್ವವನ್ನು ತಿರಸ್ಕರಿಸಿದರು.

೧೯೩೪ರಲ್ಲಿ ಮಹಿಳೆಯರಿಗೆ ಮತದಾನದ ಹಕ್ಕನ್ನು ಕೊಟ್ಟರು. ಈ ಬದಲಾವಣೆಯಲ್ಲಿ ಹೇತುವಾದ (ರ್ಯಾಡಿಕಲಿಜಂ)ವೊಂದು ಸೇರಿಕೊಂಡಿತು. ಇದು ಕೆಲಮಹಿಳೆಯರನ್ನು ಉನ್ನತಮಟ್ಟಕ್ಕೇರಿಸಿತು. ಈ ಬದಲಾವಣೆಯನ್ನು ಜನತೆಯ ನಡುವೆ ಪ್ರಚಾರ ಮಾಡಲು ಸಾಹಿತ್ಯ-ಮುಖ್ಯವಾಗಿ ಕಾದಂಬರಿ, ಚಲನಚಿತ್ರಗಳು-ಒಂದು ಮುಖ್ಯ ಸಾಧನವಾಗಿದೆ. ಇಂಡೋನೇಷ್ಯಾದಲ್ಲಿ ತಹಾದೀರ್ ಏಹಿನ್ ಜಭಾನ ಬರೆದ 'ಅಂಡರ್ ಪುಲ್‌ಸೇಲ್' ಎನ್ನುವ ಕಾದಂಬರಿಯು ಕಾರ್ಮಿಕ ಮಹಿಳೆಯರ ಸಮಸ್ಯೆಗಳನ್ನು ಚರ್ಚಿಸಿತು. ಈ ಕಾದಂಬರಿಯ ಕಥಾನಾಯಕಿ ಮಹಿಳಾ ಚಳುವಳಿಗಳಲ್ಲಿ ಪಾಲ್ಗೊಳ್ಳಲು ತನ್ನ ಮದುವೆಯ ನಿಶ್ಚಿತಾರ್ಥವನ್ನು ಧಿಕ್ಕರಿಸಿ ಹೊರಟು ಹೋಗುತ್ತಾಳೆ. 'ತಮ್ಮ ವಿರೋಧಿ ಬಂಧನಗಳನ್ನು' ಕಡಿದುಕೊಂಡು ಚಳುವಳಿಯಲ್ಲಿ ಸೇರಿಹೋಗುವುದು ಮಹಿಳಾ ವಿಮೋಚನೆಗೆ ಒಂದು ಮಾರ್ಗವಾಯಿತು. ಈ ರೀತಿಯಲ್ಲಿ ಬಂದ ಹೊಸ ಚೈತನ್ಯವು ಹೊಸ ಮಹಿಳೆಯನ್ನು ಸೃಷ್ಟಿಸಿತು. ಆದರೆ ಈ ಚಳುವಳಿಗಳೆಲ್ಲಾ ಬಹುಸಂಖ್ಯಾತ ಕಾರ್ಮಿಕ ಮಹಿಳೆಯರನ್ನು ಬದಲಾಯಿಸಲಿಲ್ಲ.

ಅರಬ್ ಮಹಿಳೆಯರು ತಮ್ಮ ದೇಶದ ರಾಷ್ಟ್ರೀಯ ಚಳುವಳಿಗಳಲ್ಲಿ ಕೂಡಿಕೊಂಡರು. ಇವರು ೧೯೨೯ರಲ್ಲಿ ಪ್ಯಾಲೆಸ್ಟೈನ್‌ನಲ್ಲಿ ಪ್ರಥಮ ಮಹಿಳಾ ಸಮಾವೇಶವನ್ನು ನಡೆಸಿದರು. ಮುಖ್ಯವಾಗಿ ಅವರು 'ಪರದಾ' ಪದ್ಧತಿಯನ್ನು ತಿರಸ್ಕರಿಸಿದರು. ೧೯೩೨ರ ನಂತರ ಈ ಚಳುವಳಿಗಳ ವ್ಯಾಪ್ತಿಯು ವಿಶಾಲವಾಯಿತು. ಇವರು ಮಹಿಳಾ ಮುಷ್ಕರಗಳನ್ನು ನಡೆಸಿದರು. ಆದರೆ ಅಷ್ಟರಲ್ಲಿಯೇ ಇಸ್ರೇಲ್ ದೇಶ ರಚನೆಯಾದ್ದರಿಂದ ಈ ಚಳುವಳಿಗಳು ಬಲುಬೇಗ ನಾಮಾವಶೇಷವಾದವು. ಆನಂತರದ ಅವಧಿಯಲ್ಲಿ ಪ್ಯಾಲೆಸ್ಟೈನ್ ಸ್ತ್ರೀಯರ ಜನರಲ್ ಯೂನಿಯನ್ ರಚನೆಯಾಯಿತು. ಪ್ಯಾಲೆಸ್ಟೈನಿನ ರಾಷ್ಟ್ರೀಯ ಕೌನ್ಸಿಲ್ಲಿನ ನಲವತ್ತೊಂಬತ್ತು ಮಂದಿ ಸದಸ್ಯರಲ್ಲಿ ೩೫ ಮಂದಿ ಸ್ತ್ರೀಯರಿದ್ದರು. ಕೇಂದ್ರ ಸಮಿತಿಯಲ್ಲಿ ೪ ಮಂದಿ ಸ್ತ್ರೀಯರಿದ್ದರು.

ಭಾರತದಲ್ಲಿ ೧೯೦೦ರ ವೇಳೆಗೆ ವಿದ್ಯಾವಂತ ಮಹಿಳೆಯರು ಸಿದ್ಧಾಂತ ಪರವಾದ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಾ ತಮ್ಮ ಅಸಂತೃಪ್ತಿಯ ಧ್ವನಿಗಳನ್ನು ಹೊರಹಾಕ ತೊಡಗಿದರು. ೧೮೫೭ರ ವೇಳೆಗೆ ಮಹಿಳೆಯರನ್ನು ಸಿಪಾಯಿದಂಗೆಯಲ್ಲಿ ಭಾಗವಹಿಸಲು ಕರೆಕೊಟ್ಟಂತೆ ಆಧಾರಗಳಿವೆ. ೧೯೨೦-೩೦ರ ವೇಳೆಗೆ ರಾಷ್ಟ್ರೀಯ ಚಳುವಳಿಯು ಬಲಗೊಂಡಿತು. ಈ ಚಳುವಳಿಯಲ್ಲಿ ಮಹಿಳೆಯರೂ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸ ತೊಡಗಿದರು. ಮಹಿಳೆಯರನ್ನು ಚಳುವಳಿಗಳಲ್ಲಿ ತೊಡಗಿಸಲು ಗಾಂಧೀಜಿಯವರು ಸಂದೇಹಪಡುತ್ತಿದ್ದಾಗ ಮಹಿಳೆಯರು ಅಂಗಡಿಗಳ ಮುಂದೆಯೇ ಧರಣಿಯನ್ನು ನಡೆಸಿದರು. ಲಾಠೀ ಏಟುಗಳನ್ನು ತಿಂದರು. ಜೈಲಿಗೂ ಹೋದರು. ಪಂಜಾಬಿನಲ್ಲಿ ಮಹಿಳಾ ಕಾರ್ಮಿಕರು ಬೃಹತ್ ಪ್ರಮಾಣದಲ್ಲಿ ಚಳುವಳಿಗಳಲ್ಲಿ ಪಾಲ್ಗೊಂಡರು. ಆದರೆ ರಾಷ್ಟ್ರೀಯ ಚಳುವಳಿಯು ಬೂರ್ಜ್ವಾಗಳ ನಾಯಕತ್ವದಲ್ಲಿದ್ದ ಪ್ರದೇಶಗಳಲ್ಲಿ ಮೇಲ್ವರ್ಗ ಮತ್ತು ಮಧ್ಯಮ ವರ್ಗಗಳಿಗೆ ಸೇರಿದ ವಿದ್ಯಾವಂತ ಮಹಿಳೆಯರು ಮಾತ್ರವೇ ಚಳುವಳಿಯಲ್ಲಿ ಭಾಗವಹಿಸಿದರು. ಬೂರ್ಜ್ವಾ

ರಾಷ್ಟ್ರೀಯವಾದವು ಬಡಜನರ, ಪ್ರಮುಖವಾಗಿ ಮಹಿಳೆಯರ ಅಗತ್ಯತೆಗಳನ್ನು ಗುರುತಿಸಲಿಲ್ಲ. ರಾಷ್ಟ್ರೀಯ ಚಳುವಳಿಯು ಒಂದು ಕ್ರಾಂತಿಕಾರಕ ತಿರುವನ್ನು ಪಡೆದ ಮೇಲೆಯೇ ಅದು ಮಹಿಳೆಯರ ಸಮಸ್ಯೆಗಳನ್ನು ಗಮನಿಸತೊಡಗಿತು. ಸಶಸ್ತ್ರ ಹೋರಾಟದ ಸ್ವಭಾವ-ಸ್ವರೂಪಗಳು ಭಿನ್ನವಾದುದರ ಕಾರಣ ಅಂತಹ ಕ್ರಾಂತಿಗಳಲ್ಲಿ ಮಹಿಳೆಯರ ಪಾತ್ರವೂ ಗುಣಾತ್ಮಕವಾಗಿಯೇ ಇರುತ್ತದೆ. ಹೋರಾಟಗಳಲ್ಲಿ ಮಹಿಳೆಯರು ಆಯುಧಗಳನ್ನು ಹಿಡಿದರು. ಸಂದೇಶವಾಹಕರಾಗಿಯೂ ಕೆಲಸ ಮಾಡಿದರು. ರಹಸ್ಯ ಸ್ಥಾವರಗಳಲ್ಲಿ ಕೆಲಸ ಮಾಡತೊಡಗಿದರು. ಉದಾರವಾದೀ ನಾಯಕರ ದೃಷ್ಟಿಯಲ್ಲಿ ಮಹಿಳೆಯರು ಇಂಥ ಕೆಲಸಗಳಲ್ಲಿ ಪಾಲ್ಗೊಳ್ಳಲು ಅರ್ಹರಲ್ಲ. ಆದರೆ ಸಾಮ್ರಾಜ್ಯಶಾಹಿಯ ವಿರುದ್ಧ ಕ್ರಾಂತಿಕಾರೀ ಚಳುವಳಿಗಳನ್ನು ರೂಪಿಸಿದವರು ಈ ಚಳುವಳಿಗಳಲ್ಲಿ ಮಹಿಳೆಯರ ಅಗತ್ಯತೆಯನ್ನು ಗುರುತಿಸಿದವರು ರಾಷ್ಟ್ರೀಯ ಚಳುವಳಿಗೆ ಚೌಕಟ್ಟನ್ನು ರೂಪಿಸಿದಂತೆ ಮಹಿಳಾ ವಿಮೋಚನೆಗೆ ಒಂದು ಚೌಕಟ್ಟನ್ನು ಒದಗಿಸಿರಲಿಲ್ಲ. ಅದಕ್ಕೆ ಕಾರಣ ಈ ಚಳುವಳಿಗಳು ಪುರುಷಾಧಿಪತ್ಯವನ್ನು ಹೊಂದಿರುವುದೇ ಆಗಿತ್ತು. ಪರಂಪರಾಗತ ಸಂಪ್ರದಾಯಗಳು, ಮಹಿಳೆಯರು ಮಕ್ಕಳನ್ನು ಮಾತ್ರ ಹೆರುವವರು ಎನ್ನುವ ಸಿದ್ಧಾಂತ, ಸಾಂಪ್ರದಾಯಿಕ ಸಂಸ್ಕೃತಿಯನ್ನು ಮುಂದುವರಿಸುವ ದೃಷ್ಟಿಕೋನ ಈ ಹೋರಾಟಗಳಲ್ಲಿಯೂ ಮುಂದುವರಿದಿತ್ತು. ಮಹಿಳೆಯರು ಸಾಮ್ರಾಜ್ಯಶಾಹಿಯ ವಿರೋಧದ ಹೋರಾಟಗಳನ್ನು ಗಮನಿಸಿದಾಗಲೂ ಈ ಹೋರಾಟಗಳಲ್ಲಿ ಕೂಡ ಮತ್ತೆ ತಮ್ಮನ್ನು ಹಳೆಯ ಪಾತ್ರಗಳಿಗೆ ತಳ್ಳುವರೆಂಬ ಸಂಧಿಗ್ಧ ಪರಿಸ್ಥಿತಿಯನ್ನು ಎದುರಿಸಿದರು. ಈ ವ್ಯವಸ್ಥೆಯನ್ನು ಪ್ರಶ್ನಿಸಲು ಮಾಡಿದ ಪ್ರಯತ್ನಗಳನ್ನು ಪಾಶ್ಚಾತ್ಯ ಭಾವನೆಗಳೆಂದು ತಳ್ಳಿಹಾಕಿದರು. ವಸಾಹತುಶಾಹಿಯು ಆರ್ಥಿಕ ದರೋಡೆಯನ್ನು, ರಾಜಕೀಯ ಅಧಿಪತ್ಯತೆಯನ್ನು ಮಾತ್ರವಲ್ಲದೆ ಮಾನಸಿಕ ಆಧಿಪತ್ಯವನ್ನು ಸಾಧಿಸಿತು. ವಸಾಹತುಶಾಹಿಯ ಮಾನಸಿಕ ಆಧಿಪತ್ಯವನ್ನು ಕುರಿತು ಫ್ರಾನಟ್ಜ್‌ಫಾನನ್* ಎಂಬ ಲೇಖಕ ಸವಿವರವಾಗಿ ಚರ್ಚಿಸಿದ್ದಾನೆ.

ವಸಾಹತುಶಾಹಿಗಳ ಕೈಯಲ್ಲಿ ವಸಾಹತೀಕರಣಕ್ಕೆ ಗುರಿಯಾದ ಜನ ನಲುಗಿ ನಿರ್ವೀಯರಾದರು. ಹಾಗೂ ವಸಾಹತುಶಾಹಿ ಶೋಷಣೆಯನ್ನೂ ಪುರುಷ ದೃಷ್ಟಿಕೋನದಿಂದಲೇ ನೋಡಿದರು. ಅದು ಪುರುಷರ ಪೌರುಷದ ಮೇಲೆ ಹೊಡೆತವನ್ನು ಕೊಟ್ಟಿದ್ದರಿಂದ, ಪುರುಷನ ಪತ್ನಿಯನ್ನು ಅತ್ಯಾಚಾರಕ್ಕೆ ಗುರಿಮಾಡಿದ್ದರಿಂದ ಅದನ್ನು ವಿರೋಧಿಸಬೇಕೆಂಬ ನಿಲುವು ತಳೆದಿದ್ದರು. ವಸಾಹುತುಶಾಹಿಗಳಿಗೆ ವಸಾಹತು ದೇಶಗಳ ಮಹಿಳೆಯರು ವಿನೀತರಾಗಿ,

---

* ಫ್ರಾನಟ್ಜ್‌ಫಾನನ್ (೧೯೨೫-೧೯೬೧) ಮಾರ್ಟಿಕೈನನ್‌ನಲ್ಲಿ ಹುಟ್ಟಿದ ವೈದ್ಯ. ಆತ ಫ್ರಾನ್ಸಿನಲ್ಲಿ ವೈದ್ಯಕೀಯ ವಿಜ್ಞಾನವನ್ನು ಅಧ್ಯಯನ ಮಾಡಿ ಮನಃಶಾಸ್ತ್ರದಲ್ಲಿ ನಿಪುಣತೆಯನ್ನು ಹೊಂದಿದ್ದ. ಅವನು ಆಲ್ಜೀರಿಯಾ ದೇಶದ ಫ್ರಾನ್ಸ್ ವಿರೋಧಿ ದಂಗೆಯ ಕಾಲಕ್ಕೆ ಆಸ್ಪತ್ರೆಗಳಲ್ಲಿ ಕೆಲಸ ಮಾಡಿದ. ಅವನು ಆಲ್ಜೀರಿಯಾ ಚಳುವಳಿಯನ್ನು ಸೇರಿ ಹೋದ ಜಪಾನಿನ ಪ್ರಾತಿನಿಧ್ಯವನ್ನು ಹೊಂದಿದ. "ರೆಚ್ಚ್‌ಡ್ ಆಫ್ ದಿ ಅರ್ಥ್" "ಬ್ಲಾಕ್‌ಸ್ಕೆನ್ಸ್, ವೈಟ್‌ರೂಪ್" ಎಂಬುವು ಅವನ ಪ್ರಖ್ಯಾತ ಗ್ರಂಥಗಳು.

ಕೋಮಲವಾಗಿ ಕಂಡುಬಂದಿದ್ದರಿಂದ ಅವರನ್ನು ತಮ್ಮವರನ್ನಾಗಿ ಮಾಡಿಕೊಳ್ಳಬೇಕು, ಅವರನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳಬೇಕೆಂದು ಭಾವಿಸಿದರು. ತಮ್ಮ ಮಹಿಳೆಯರನ್ನು ನಿರ್ಲಕ್ಷಿಸಿದರು. ಇದೆಲ್ಲವನ್ನು ಬಿಳಿಯ ಮಹಿಳೆಯರು ಧಿಕ್ಕರಿಸಿದರು. ಆಲ್ಜೀರಿಯಾ ದೇಶದ ಮಹಿಳೆಯರ 'ಘೋಷಾ'ಗಳನ್ನು ತೊಲಗಿಸುವುದು ಅಂದರೆ ಅವರ ಮೇಲೆ ಅತ್ಯಾಚಾರ ಎಸಗುವುದರ ಸಂಕೇತವಾಗಿ ಭಾವಿಸಿದರು. ಈ ವಿಷಯದಲ್ಲಿ ಬಿಳಿಯ ಜನಾಂಗದ ಪುರುಷರ ಹಾಗೂ ಕರಿಯ ಜನಾಂಗದ ಪುರುಷರ ಸಂವೇದನೆಗಳಲ್ಲಿ ವ್ಯತ್ಯಾಸವಿರುವುದಿಲ್ಲ. ಬಿಳಿ ಜನಾಂಗದ ಮಹಿಳೆಯರ ಪರಿಸ್ಥಿತಿಯೂ ಸ್ವಲ್ಪಮಟ್ಟಿಗೆ ಸಂಧಿಗ್ಧ ಪರಿಸ್ಥಿತಿಯಲ್ಲಿತ್ತು. ಆಕೆ "ಅಧಿಕಾರಿಯಾಗಿ"ದ್ದವರಿಗೆ ಸೇರಿದ ವ್ಯಕ್ತಿ. ಅಧಿಕಾರವುಳ್ಳ ವ್ಯಕ್ತಿಗೆ ಸೇರಿದ ವ್ಯಕ್ತಿಯಾಗಿ ಆಕೆಯನ್ನು ವಸಾಹತುಶಾಹಿಗಳ ಜನ ಗೌರವಿಸಿದರೆ, ತಮ್ಮ ಅಂತಸ್ತು ಅನುಕೂಲಗಳನ್ನು ಕಿತ್ತುಕೊಳ್ಳುವ ವ್ಯಕ್ತಿಗೆ ಸೇರಿದ ಆಕೆಯನ್ನು ವಸಾಹತು ದೇಶದ ಜನ ದ್ವೇಷಿಸುತ್ತಿದ್ದರು, ಅವಮಾನಪಡಿಸುತ್ತಿದ್ದರು.

ವಸಾಹತು ದೇಶದ ಮಹಿಳೆಯರು ಅತ್ಯಂತ ಹೆಚ್ಚು ವಸಾಹತೀಕರಣಕ್ಕೆ ಒಳಗಾದವರು. ಅವರ ವಿಮೋಚನೆ ಅವರ ಕ್ರಾಂತಿಕಾರಕ ಆಲೋಚನೆಗಳ ಮೇಲೆಯೇ ಅವಲಂಬಿಸಿದೆ. ಪುರುಷಾಧಿಪತ್ಯದಿಂದ ಕೂಡಿದ ಕ್ರಾಂತಿಕಾರಿ ಹೋರಾಟಗಳು, ಮಹಿಳಾ ಹೋರಾಟಗಳನ್ನು ಮಹಿಳೆಯರ ಮೇಲಿನ ಅಧಿಕಾರ ಹೆಚ್ಚಿಸಿಕೊಳ್ಳುವ ಸಾಧನವಾಗಿ ಪರಿಗಣಿಸತೊಡಗಿತು. ಆದರೆ ಮಹಿಳಾ ವಿಮೋಚನೆಯು ಕೂಡ ಸ್ತ್ರೀವಾದಿ ಸಿದ್ಧಾಂತದ ಮೂಲಕ ಮಹಿಳೆಯರು ಸಾಧಿಸುವ ಸಾಮರ್ಥ್ಯವನ್ನು ಈ ಕ್ರಾಂತಿಕಾರಿ ಹೋರಾಟಗಳ ತಾರತಮ್ಯದ ಭಾಗವಾಗಿ ತೋರಿಸ ತೊಡಗಿತು. ಅದು ಈವರೆಗೂ ಕಾಣದಿದ್ದ ಹೊಸ ಆಯಮಾಗಳನ್ನು ಪಡೆಯತೊಡಗಿತು. ಪ್ರದೇಶಗಳಲ್ಲಿಯೂ ಇಣುಕಿ ನೋಡಲಾರಂಭಿತು. ಲಿಂಗ ಸಂಬಂಧಗಳು, ಲೈಂಗಿಕತೆ, ಮನೆಗೆಲಸ, ಕುಟುಂಬ, ವಿವಾಹ ಮೊದಲಾದವುಗಳು ಚರ್ಚೆಗಳಲ್ಲಿ ಬರಲಾರಂಭಿಸಿದವು. ಈ ಚರ್ಚೆಗಳು ಒಂದು ಸೈದ್ಧಾಂತಿಕ ಚೌಕಟ್ಟಿನ ಸೀಮೆಗಳನ್ನು ಸಮೀಪಿಸಿ ಎಡತಾಕಲಾ ರಂಭಿಸಿದವು.

ಅಲ್ಜೀರಿಯಾ : ೧೮೩೦ ರಿಂದ ೧೯೬೨ ರವರೆಗೆ ಅಲ್ಜೀರಿಯಾ ಫ್ರೆಂಚ್ ವಸಾಹತು ದೇಶವಾಗಿತ್ತು. ೧೯೫೪ರಲ್ಲಿ ಅಲ್ಲಿಯ ಬಿಳಿಯ ಜನರ ವಿರುದ್ಧ ರಾಷ್ಟ್ರೀಯ ಚಳುವಳಿಯು ಪ್ರಾರಂಭವಾಗಿತ್ತು. ಅದು ಬೇಗನೆ ಸಶಸ್ತ್ರ ಹೋರಾಟವಾಗಿ ಬದಲಾಯಿತು. ಏಳು ವರ್ಷಗಳ ಭೀಕರ ಹೋರಾಟದ ನಂತರ ೧೯೬೨ರಲ್ಲಿ ಜನರಲ್ ಡಿಗಾಲೆ ಅಲ್ಜೀರಿಯಾ ದೇಶಕ್ಕೆ ಸ್ವಾತಂತ್ರ್ಯವನ್ನು ಕೊಡಲು ಒಪ್ಪಿಕೊಂಡರು.

ಅಲ್ಜೀರಿಯಾ ಮಹಿಳೆಯರು ಫ್ರೆಂಚ್ ವಸಾಹತುವಾದವನ್ನು ವಿರೋಧಿಸಿದ ಬಗ್ಗೆ ಬಹಳಷ್ಟು ಕೃತಿಗಳಿಂದ, ವರದಿಗಳಿಂದ ತಿಳಿದು ಬರುತ್ತದೆ. ಫ್ರಾನ್ಸಿಸ್ ಫಿಟ್ಟನ್ ಬರೆದ "ಮ್ಯಾನಿಫೆಸ್ಟೇಷನ್" ಎನ್ನುವ ಕತೆಯು 'ನೆಫಿಸ್ಸಾ' ಎಂಬ ಅಲ್ಜೀರಿಯಾ ಯುವತಿ ಫ್ರೆಂಚ್ ದಬ್ಬಾಳಿಕೆಯನ್ನು ವಿರೋಧಿಸಿದ ಬಗ್ಗೆ ತಿಳಿಸುತ್ತದೆ. ಫ್ರೆಂಚ್ ದಬ್ಬಾಳಿಕೆಯಿಂದ ಅವಮಾನಕ್ಕೆ

ಗುರಿಯಾಗಬೇಕಾಗುವುದೆಂದು ತಿಳಿದಿದ್ದರೂ ಆಕೆ ತನ್ನ ಕಾಮ್ರೇಡ್‌ನೊಡನೆ ಹೊರಟು ಹೋಗುತ್ತಾಳೆ. ಆಕೆಯ ಕಾಮ್ರೇಡ್ ಸಿಕ್ಕಿಬಿದ್ದನಂತರ ಉಳಿದ ಹೆಂಡತಿಯರಂತೆ ಆಕೆ ಮತ್ತು ಹಿಂದಕ್ಕೆ ಹೋಗಲು ನಿರಾಕರಿಸುತ್ತಾಳೆ. ಯುದ್ಧನಿರತ ಯೋಧಳಂತೆ ತನ್ನ ಕಾಮ್ರೇಡ್‌ನನ್ನು ಬಿಟ್ಟು ಹೋಗುವುದಿಲ್ಲವೆಂದು ವಾದಿಸುತ್ತಾಳೆ. ಆಕೆಯ ಕಾಮ್ರೇಡ್ಸ್ ಎದುರಿಗೆ ಒಬ್ಬ ಫ್ರೆಂಚ್ ಕಮಾಂಡರ್ ಆಕೆಯ ಬಟ್ಟೆಗಳನ್ನು ಕಿತ್ತು ಅವಮಾನಪಡಿಸುತ್ತಾನೆ. ಅಸಹಾಯಕನಾದ ಅಲ್ಜೀರಿಯಾ ವ್ಯಕ್ತಿ ಅಲ್ಜೀರಿಯಾ ಹೆಣ್ಣಿನ ಮೇಲೆ ಬಿಳಿಯರು ನಡೆಸಿದ ಅತ್ಯಾಚಾರವನ್ನು ನಿಸ್ಸಹಾಯಕವಾಗಿ ನೋಡುತ್ತಿರುತ್ತಾನೆ. ವಸಾಹತುಶಾಹಿಯ ನೀತಿಗಳು ಕೆಲವೊಮ್ಮೆ ವಿರುದ್ಧ ಪರಿಣಾಮಗಳನ್ನು ತಂದುಕೊಂಡುತ್ತದೆ. ಫ್ರೆಂಚ್ ವಸಾಹತುಶಾಹಿ ತಮ್ಮ ಪಾಶ್ಚಾತ್ಯೀಕರಣದ ಭಾಗವಾಗಿ ಬಹುಪತ್ನಿತ್ವಕ್ಕೆ, ಬಾಲ್ಯವಿವಾಹಕ್ಕೆ ವಿರುದ್ಧವಾಗಿ ಕಾನೂನುಗಳನ್ನು ತಂದರು. ಘೋಷಾ ಪದ್ಧತಿಯ ವಿರುದ್ಧವಾಗಿ ಪ್ರಚಾರ ಮಾಡಿದರು. ಹೆಣ್ಣು ಮಕ್ಕಳಿಗಾಗಿ ಶಾಲೆಗಳನ್ನು ತೆರೆದರು. ಅದರಿಂದಾಗಿ ಅಲ್ಜೀರಿಯಾ ಮಹಿಳೆಯರಿಗೆ ಈವರೆಗಿನ ಪಾಶ್ಚಾತ್ಯೀಕರಣ ಸ್ವಲ್ಪ ಮಟ್ಟಿನ ಸ್ವೇಚ್ಛೆ, ಸ್ವಾತಂತ್ರ್ಯಗಳನ್ನು ತಂದುಕೊಟ್ಟಿದೆ.

ಪ್ಯಾನನ್ ಅಲ್ಜೀರಿಯಾದ ಜನ ತಮ್ಮ ಹೆಂಗಸರನ್ನು ಬಿಳಿಯರ ಬಳಿ ಕಳುಹಿಸುವಂತೆ ಅವರು ಒತ್ತಡ ತಂದ ಸಂದರ್ಭಗಳನ್ನು ಕುರಿತು ಹೇಳುತ್ತಾನೆ. ಈ ಪದ್ಧತಿಯ ಕಾರಣದಿಂದ ಅಲ್ಜೀರಿಯಾದ ಪುರುಷರಲ್ಲಿ ತಮ್ಮ ಮಡದಿಯರನ್ನು ವೇಶ್ಯೆಯರಾಗಿ ಬಿಳಿ ಜನರಲ್ಲಿಗೆ ಕಳುಹಿಸುತ್ತಿದ್ದೇವೆಂಬ ಭಾವನೆಯುಂಟಾಯಿತು. ಆದರೆ ಅಲ್ಜೀರಿಯಾದ ಹೆಂಗಸರನ್ನು ಬಿಳಿಯ ಜನ ಈ ರೀತಿ ಬಳಸಿಕೊಳ್ಳುವುದು ಅಲ್ಜೀರಿಯಾ ಗಂಡಸರು ತಮ್ಮಮರ್ಮಕ್ಕೆ ಹೊಡೆತ ಬಿದ್ದಂತೆ ಭಾವಿಸಿದರು. ಅದೇ ಸಂದರ್ಭದಲ್ಲಿ ಅಲ್ಜೀರಿಯಾದಿಂದ ಹೋಗಿ ಫ್ರಾನ್ಸಿನಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರು ತಮ್ಮ ಕೋಪವನ್ನು ಫ್ರಾನ್ಸ್ ಮಹಿಳೆಯರ ಮೇಲೆ ತೋರಿಸುತ್ತಿದ್ದರು. ಫ್ರಾನ್ಸ್‌ನ ಪುರುಷರನ್ನು ಅವರು ಏನೂ ಮಾಡಲಾಗಲಿಲ್ಲ. ಆದ್ದರಿಂದ ಆ ಕೋಪವನ್ನು ಮಹಿಳೆಯರ ಮೇಲೆ ಕಾರುತ್ತಿದ್ದರು. ರಾಷ್ಟ್ರೀಯ ವಿಮೋಚನಾ ಚಳುವಳಿಯೂ ಅಲ್ಜೀರಿಯಾ ಜನರಿಗೆ ಗಂಡಸರ ಆತ್ಮಗೌರವವನ್ನು ಕಾಪಾಡುತ್ತಿರುವಂತೆಯೂ ತಮ್ಮ ಪೌರುಷವನ್ನು ಉಳಿಸುತ್ತಿರುವಂತೆಯೂ ಗೋಚರಿಸಿತು. ಅಂದರೆ ಈ ಚಳುವಳಿಯು ತಾವು ಕಳೆದುಕೊಂಡ ತಮ್ಮ ಮಡದಿಯರನ್ನು ಪಡೆಯುವ ಚಳುವಳಿಯಾಗಿ ಮಾತ್ರವೇ ಕಾಣಿಸತೊಡಗಿತಾದರೂ ಆ ಹೆಂಗಸರನ್ನು ವಿಮೋಚನೆಗೊಳಿಸುವಂತೆ ಕಂಡು ಬರಲಿಲ್ಲ.

ಅಲ್ಜೀರಿಯಾ ರಾಷ್ಟ್ರೀಯ ವಿಮೋಚಾ ರಂಗ (FNLA)ದಲ್ಲಿ ಮಹಿಳೆಯರನ್ನು ಸೇರಿಸಿಕೊಳ್ಳಬೇಕೆಂಬ ನಿರ್ಣಯವು ಸುಲಭವಾಗಿ ತೆಗೆದುಕೊಂಡದ್ದಲ್ಲ. ವಸಾಹತುಶಾಹಿವಾದ ವಿರೋಧಿ ಹೋರಾಟದ ಅವಶ್ಯಕತೆ, ಅತ್ಯಧಿಕ ಸಂಖ್ಯೆಯಲ್ಲಿ ಪ್ರಜೆಗಳು ಹೋರಾಟದಲ್ಲಿ ಪಾಲ್ಗೊಳ್ಳಬೇಕಾದ ಅಗತ್ಯತೆ ಮಹಿಳೆಯರನ್ನು ಅದರೆಡೆಗೆ ಸೆಳೆಯಿತು. ೧೯೫೫ FNLA ಮಹಿಳೆಯರನ್ನು ಚಳುವಳಿಯಲ್ಲಿ ಇಳಿಸಲು ನಿರ್ಣಯಿಸಿತು. ಮೊದಲು ಅವರು ಹೋರಾಟದ

ಯೋಧರ ಮಡದಿಯರನ್ನು, ವಿಧವೆಯರನ್ನು, ವಿಚ್ಛೇದಿತ ಮಹಿಳೆಯರನ್ನು ರಂಗದೊಳಕ್ಕೆ ಇಳಿಸಿದಿರು. ಘೋಷಾ, ಮಹಿಳೆಯರಿಗೆ ಅಡ್ಡವಾಗಿದ್ದ ಕಾರಣ ಮೊದಲು ಅದನ್ನು ತೊಲಗಿಸಿದರು. ಕ್ರಮವಾಗಿ ಮಹಿಳೆಯರು ಬಾಂಬುಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತಲುಪಿಸುವುದರಿಂದ ಹಿಡಿದು ಎಷ್ಟೋ ಕೆಲಸಗಳನ್ನು ಮಾಡಿದರು. ಫ್ಯಾನನ್, ಈ ಚಳುವಳಿಯು ಮಹಿಳೆಯರಿಗೆ ತಮ್ಮ ಶರೀರದೊಂದಿಗೆ ತಮಗೆ ಇದ್ದ ಎಷ್ಟೋ ಸಂಬಂಧಗಳನ್ನು ಹೇಗೆ ಬದಲಾಯಿಸಿತೆಂಬುದನ್ನು ಚರ್ಚಿಸುತ್ತಾನೆ. ಘೋಷಾ ತೊಲಗಿಸಿದ್ದರಿಂದ ತನ್ನ ಶರೀರವನ್ನು ತಾನೇ ಹೊಸದಾಗಿ ಅರ್ಥಮಾಡಿಕೊಳ್ಳುವುದು ನಡೆಯುತ್ತದೆ. ತನ್ನ ಶರೀರದಲ್ಲಿಯೇ ಒಂದು ಕ್ರಾಂತಿಕಾರಕ ಬದಲಾವಣೆಯು ಸಂಭವಿಸುತ್ತದೆ. ಆದರೆ ವಸಾಹುತುಶಾಹಿವಾದಿಗಳು ಯಾವಾಗ ತನ್ನನ್ನು ಹುಡುಕಲಾರಂಭಿಸಿದರೋ, ಆಗ ಆಕೆಯು ಪ್ರಜ್ಞಾವಂತಳಾಗಿಯೇ ಒಂದು ಹೆಜ್ಜೆ ಹೋಗಿ ಹಿಂದಕ್ಕೆ ಹೋಗಿ ಪುನಃ ಘೋಷಾದೊಳಗೆ ಸೇರುತ್ತಾಳೆ. ಆ ಘೋಷಾವನ್ನೇ ಒಂದು ಕ್ರಾಂತಿಕಾರಕ ಆಯುಧವಾಗಿ ಉಪಯೋಗಿಸುತ್ತಾಳೆ. ಕ್ರಾಂತಿಕಾರಿ ಚಳುವಳಿಯಲ್ಲಿ ಭಾಗವಹಿಸುವುದರಿಂದ ಮಹಿಳೆಗೆ ಕುಟುಂಬಕ್ಕಿರುವ ಸಂಬಂಧಗಳಲ್ಲಿ ಬಹಳ ಬದಲಾವಣೆಯುಂಟಾಗುತ್ತದೆ. ರಾಷ್ಟ್ರೀಯ ವಿಮೋಚನಾ ಹೋರಾಟದ ಹಾದಿಯಲ್ಲಿ ವಿವಾಹ ಪದ್ಧತಿಗಳು ಕೂಡಾ ಬದಲಾಗುತ್ತವೆ.

ರಾಷ್ಟ್ರೀಯ ವಿಮೋಚನೆ ನಂತರ ಮಹಿಳೆಯರು ಪಕ್ಷದಿಂದ, ವೈರುಧ್ಯದಿಂದ ಕೂಡಿದ ಕರೆಯನ್ನು ಪಡೆದರು. ಮಹಿಳೆಯರು ಚಳುವಳಿಯಲ್ಲಿ ಯಾವ ಹಂತದಲ್ಲಿ ಪಾಲ್ಗೊಂಡರೂ, ಪಕ್ಷರಚನೆಯಲ್ಲಿನ ಪುರುಷರು ಮಹಿಳಾ ವಿಮೋಚನೆಗೆ ಅನುಕೂಲಕವಾಗಿರಲಿಲ್ಲ. ಪಕ್ಷದಲ್ಲಿನ ಮುಖ್ಯವಾದ ಪದವಿಗಳು ಪುರುಷರಿಗೆ ದಕ್ಕಿದವು. ಮಹಿಳೆಯರನ್ನು ಹಿಂದಿನ ಸ್ಥಾನಗಳಿಗೆ ತಳ್ಳಿಹಾಕಿದರು. ಮಹಿಳೆಯರ ಮೇಲೆ ಅಸಭ್ಯಕರವಾದ ಜೋಕುಗಳನ್ನು ಮಾಡುತ್ತಿದ್ದರು. ಅವರನ್ನು ಜಾಗರೂಕತೆಯಿಂದ ಗಮನಿಸುತ್ತಿದ್ದರು. ಈ ಸ್ಥಿತಿಯಲ್ಲಿ ಮಹಿಳೆಯರು ಈ ವಿರೋಧವನ್ನು ಎದುರಿಸಿ ನಿಲ್ಲುವುದಕ್ಕಿಂತಲೂ ಮತ್ತೆ ಘೋಷಾದೊಳಕ್ಕೆ ಹೊರಟು ಹೋಗುವ ಸ್ಥಿತಿಗೆ ತಳ್ಳಲ್ಪಟ್ಟರು. ಮಹಿಳೆಯರು, ಪುರುಷರು ಎಂಬ ಬೇಧ ಮತ್ತೆ ಎಲ್ಲಾ ಕಡೆ ಮನೆ ಮಾಡಿಕೊಂಡಿತು. ಕುಟುಂಬ, ವಿವಾಹ ಸಮಸ್ಯೆಗಳ ಮೇಲೆ ಹೊಸ ಕಾನೂನುಗಳು ಏನೂ ಮಾಡಲಿಲ್ಲ. ವಿವಾಹ ವಿಚ್ಛೇದನ ಪುರುಷರಿಗೆ ಅನುಕೂಲವಾಗುವಂತೆ ಸಿದ್ಧವಾಯಿತು. ಬೇಡವೆಂದರೆ ಬಿಟ್ಟು ಬಿಡುವುದು. ಮಹಿಳೆಯರು "ಕೌನ್‌ಕೌನ್" ಅನ್ನು (ಒಂದು ಬಗೆಯ ಅಲ್ಜೀರಿಯಾ ಅಡಿಗೆ) ತಯಾರಿಸುವುದು, ಪುರುಷರು "ರಾಜಕೀಯವನ್ನು ಮಾಡುವುದು" ಮತ್ತೆ ಮಾಮೂಲಾಯಿತು. ಕೊನೆಗೆ ಪುರುಷರು ವಸಾಹತುಶಾಹಿಗಳು ಕೊಳ್ಳೆ ಹೊಡೆದ ತಮ್ಮ ಮಹಿಳೆಯರನ್ನು ಮತ್ತೆ ಸಂಪಾದಿಸಿಕೊಂಡರು. ಆ ಮಹಿಳೆಯರ ಮೇಲೆ ಅಧಿಕಾರವನ್ನು ಸಂಪಾದಿಸಿಕೊಂಡರು. ಆ ದೇಶದ ಆರ್ಥಿಕ ಪರಿಸ್ಥಿತಿಗಳು ಕುಸಿಯುತ್ತಿದ್ದಷ್ಟು ಮಹಿಳೆಯರ ಪರಿಸ್ಥಿತಿ ಮತ್ತಷ್ಟು ಹಿಂದಕ್ಕೆ ತಳ್ಳಲ್ಪಟ್ಟು, ಕ್ರಾಂತಿಕಾರಕ ಇಸ್ಲಾಂ ಧರ್ಮ ಹಿನ್ನಡೆಯ ಹಾದಿ ಹಿಡಿಯಿತು. ಮುಖ್ಯವಾಗಿ ಕುಟುಂಬ, ಮಹಿಳೆ, ಪುರುಷ ಸಂಬಂಧಗಳ

ವಿಷಯದಲ್ಲಿ ಬೆನ್‌ಬೆಲ್ಲಾನನ್ನು (FNLA ನಾಯಕ, ಪ್ರಧಾನಮಂತ್ರಿ) ಪದಚ್ಯುತಗೊಳಿಸಿದ ನಂತರ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತು. ಬೊಲ್ಷ್‌ವಿಕ್ ಐಡಿಯಲಿಸಂ ಬಗ್ಗೆ, ಪಾಶ್ಚಾತ್ಯ ಭೌತವಾದದ ಬಗ್ಗೆ ಅವರ ಕೋಪ ದ್ವೇಷಗಳು ಹೆಚ್ಚಾದವು. ಈಗ ಸ್ವಾತಂತ್ರ್ಯ ಬಂದಿದೆ ಯಾದ್ದರಿಂದ ಮಹಿಳೆಯರು ಹಳೆಯ ಕರ್ತವ್ಯಗಳಿಗೇ ಕಟ್ಟುಬಿದ್ದಿರಬೇಕೆಂದು ಭಾವಿಸಿದರು. ಕುಟುಂಬದಲ್ಲಿ, ಸಮಾಜದಲ್ಲಿ ನೀತಿ ನಿಯಮಗಳು ಮಹಿಳೆಯರ ನಡತೆಯ ಮೇಲೆ ಆಧಾರಪಟ್ಟಿರುತ್ತವೆಂದು 'ಎಲ್‌ಮೌಡ್ ಜಾಡಿದ್' ಎನ್ನುವ ಪ್ರಮುಖ ಅಲ್ಜೀರಿಯನ್ ದಿನಪತ್ರಿಕೆ ವ್ಯಾಖ್ಯಾನಿಸಿತು.

ಈ ಪರಿಸ್ಥಿತಿಯಲ್ಲಿ ಅಲ್ಜೀರಿಯನ್ ಮಹಿಳೆಯರಿಗೆ ಎರಡೇ ಎರಡು ಅವಕಾಶಗಳಿದ್ದವು. ವ್ಯಕ್ತಿಗತವಾಗಿ ಅಧೀನವಾಗಿರಬೇಕು ಇಲ್ಲವೇ ಇವೆಲ್ಲವನ್ನು ಧಿಕ್ಕರಿಸಿ ಪ್ರತಿಭಟನೆ ಯನ್ನಾದರೂ ಮಾಡಬೇಕು. ಆದರೆ ಬದಲಾದ ಪರಿಸ್ಥಿತಿಯಲ್ಲಿ ಪ್ರತಿಭಟನೆ ಮಾಡುವುದು ಸುಲಭವಲ್ಲ. ೭೦ನೇ ದಶಕದಲ್ಲಿ ಅಲ್ಜೀರಿಯಾ ಮಹಿಳೆಯರಿಗೆ ದಿಗ್ಬಂಧನವನ್ನು ಹಾಕುತ್ತಾ ಧಾರ್ಮಿಕ-ಇಸ್ಲಾಮಿಕ್ ರಾಜ್ಯವಾಗಿ ಬದಲಾಯಿತು.

**ವಿಯಟ್ನಾಂ :** ಏಷ್ಯಾ ದೇಶಗಳಲ್ಲೆಲ್ಲಾ ಚೈನಾ, ವಿಯಟ್ನಾಂ ದೇಶಗಳಲ್ಲಿ ಮಾತ್ರ ಮಹಿಳೆಯರು ವಿರೋಚಿತವಾಗಿ ಹೋರಾಟಗಳಲ್ಲಿ ಭಾಗವಹಿಸಿದರು. ಮುಖ್ಯವಾಗಿ ಚೀನಾದಲ್ಲಿ ಕನ್‌ಫ್ಯೂಷಿಯಸ್ ನೀತಿ - ನಿಯಮಗಳು ಸಮಾಜದ ನರಗಳಲ್ಲಿ ಇಂಗಿ ಹೋಗಿ ಪುರುಷಾಧಿಕ್ಯತೆಗೆ ಬೆಂಬಲ ದೊರೆಯಿತು. ಮಹಿಳೆಯರು ಅಡಿಗೆ ಕೋಣೆಗೆ ಪರಿಮಿತರಾಗಿ ಆಕೆಗೆ ವಿದ್ಯೆಬುದ್ಧಿಗಳು ಅಭಾವವಾದವು. ಪರಂಪರಾಗತ ಲಕ್ಷಣಗಳು ಬಲವಾಗಿದ್ದ ಆ ಸಮಾಜದಲ್ಲಿ ರೈತಾಪಿ ಮಹಿಳೆಯರು ಅತಿಹೀನ ಸ್ಥಿತಿಯಲ್ಲಿದ್ದರು. ಆದರೆ ಈ ಮಹಿಳೆಯರು ಜಮೀನುಗಳಲ್ಲಿ ಪುರುಷರೊಡನೆ ಕೆಲಸ ಮಾಡುತ್ತಿದ್ದುದರಿಂದ ಮಧ್ಯಮವರ್ಗದ ಮಹಿಳೆಯರಂತಲ್ಲದೆ, ಅವರು ಗೋಡೆಗಳ ಹೊರಗೆ ವಿಶಾಲ ಪ್ರಪಂಚವನ್ನು ನೋಡ ಬಲ್ಲವರು, ಈ ಸ್ಥಿತಿಯಲ್ಲಿ ಸಾವಿರ ವರ್ಷಗಳ ಕೆಳಗೆ ವಿಯಟ್ನಾಂನ ಟ್ರಿಯನ್‌ಥಿ ಥ್ರಿನ್‌ಹ, ವಿಯಟ್ನಾಂನ ಚೀನಾ ಫ್ಯೂಡಲ್ ದೊರೆಗಳಿಗೆ ವಿರುದ್ಧವಾಗಿ ಒಂದು ಪ್ರತಿಭಟನೆಯನ್ನು ಸಂಘಟಿಸಿದ್ದಳು. ಆದರೆ ಆ ಪ್ರತಿಭಟನೆ ವಿಫಲವಾಯಿತು. ಅನಂತರ ಆಕೆ ಮತ್ತೆ ದಾಸ್ಯದ ಬದುಕನ್ನೆ ಬದುಕುವುದಕ್ಕಿಂತಲೂ ಆತ್ಮಹತ್ಯೆ ಒಳ್ಳೆಯದೆಂದು ಆತ್ಮಹತ್ಯೆ ಮಾಡಿಕೊಂಡಳು.

ವಿಯಟ್ನಾಂ ಫ್ರೆಂಚ ವಸಾಹತಾಗಿ ಬದಲಾಗುವುದರೊಡನೆ ಒಂದು ಹೊಸ ಪದ್ಧತಿಯ ದರೋಡೆ ಆರಂಭವಾಯಿತು. ರೈತರು ತಮ್ಮ ಭೂಮಿಯನ್ನು, ಗ್ರಾಮಗಳನ್ನು ಬಿಟ್ಟು ಗಣಿ ಕಾರ್ಮಿಕರಾಗಿ, ಗಿರಣಿ ಕಾರ್ಮಿಕರಾಗಿ ಕೆಲಸ ಮಾಡಲು ಹೋಗಬೇಕಾಯಿತು. ಪಟ್ಟಣಗಳಿಗೆ ತರಲ್ಪಟ್ಟ ಮಹಿಳೆಯರು ಯಾವಾಗಲೂ ಅನಾಥರಾಗಿ ವೇಶ್ಯಾವೃತ್ತಿಯನ್ನು ಹಿಡಿದರು. ಮದುವೆಯಾಗದ ತಾಯಿಯರನ್ನು, ಅವರ ಮಕ್ಕಳನ್ನು ಯಾರೂ ಅದರಿಸದೆ ದೂಷಿಸು ತ್ತಿದ್ದರು, ಧಿಕ್ಕರಿಸುತ್ತಿದ್ದರು. ವಿಯಟ್ನಾಂ ಮಹಿಳೆಯಾದ್ದರಿಂದ ಆಕೆಯನ್ನು ಅತ್ಯಾಚಾರ ಮಾಡಿದರೂ ಅದು ಅಪರಾಧವಲ್ಲ. ಈ ರೀತಿ ಮಹಿಳೆಯರ ಸಮಸ್ಯೆಗಳು ವಸಾಹತುವಾದ

ದೊಡನೆ ತಳುಕು ಹಾಕಿಕೊಂಡಿದ್ದವು. ಕೆಲವು ಮಂದಿ 'ಮಹಿಳೆಯರು' ಸಮಾನ ಹಕ್ಕುಗಳ ಸಮಸ್ಯೆಗಳನ್ನು ಎತ್ತಿದರಾದರೂ ಅದು ಅಷ್ಟೇ ಏರುಪೇರುಗಳಿಗೆ ಗುರಿಯಾದ್ದರಿಂದ ಅಷ್ಟು ಜಯಪ್ರದವಾಗಲಿಲ್ಲ. ೧೯೩೦ರಲ್ಲಿ ಇಂಡೋಚೈನಾ ಕಮ್ಯೂನಿಸ್ಟ್ ಪಾರ್ಟಿ ರಚನೆಯಾದ್ದರಿಂದ ರಾಷ್ಟ್ರೀಯ ವಿಮೋಚನಾ ಹೋರಾಟ, ವರ್ಗ ವಿಮೋಚನಾ ಸಮಸ್ಯೆ, ಮಹಿಳಾ ವಿಮೋಚನಾ ಸಮಸ್ಯೆ ಒಟ್ಟುಗೂಡಿ ಮುಂದೆ ಬಂದವು. ಮಹಿಳೆಯರ ಸಮಸ್ಯೆಗಳು ಮೊದಲಿನಿಂದಲೂ ಮುಖ್ಯವಾಗಿಯೇ ಇದ್ದವು. ೧೯೩೧ರಲ್ಲಿ ಈ ಪಕ್ಷ ಮಹಿಳೆಯರನ್ನು ಸಮಾಜದಲ್ಲಿ ಎಲ್ಲರಿಗಿಂತಲೂ ಹೆಚ್ಚಾಗಿ ಶೋಷಿಸಲ್ಪಡುತ್ತಿದ್ದವರೆಂದು ಗುರುತಿಸಿತು. ಹೋರಾಟವು ಲಿಂಗಗಳ ನಡುವೆ ಸಮಾನತೆಯನ್ನು ಸಾಧಿಸುವುದನ್ನು ಒಂದು ಗುರಿಯಾಗಿ ಇಟ್ಟುಕೊಂಡಿತು. ಪರಿಣಾಮವಾಗಿ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಪಕ್ಷದೊಳಗಿನ ಮಹಿಳಾ ಸಂಸ್ಥೆಯಲ್ಲಿ ಸೇರಿ ಫ್ರೆಂಚ್, ಅಮೆರಿಕಾ ವಸಾಹತುವಾದಿಗಳಿಗೆ ವಿರುದ್ಧವಾಗಿ ಹೋರಾಡಿದರು. ಆದರೂ ವಸಾಹತುವಾದ ಅಲ್ಲಿ ಸುದೀರ್ಘಕಾಲ ಮುಂದುವರಿದಿದ್ದರಿಂದ ಹೋರಾಟ ಅವರ ಆಚಾರವಾಗಿ ಸಿದ್ಧಗೊಂಡಿತು. ಈ ಸುದೀರ್ಘ ವಸಾಹತುವಾದದಲ್ಲಿ ಸ್ತ್ರೀಯರು ಪುರುಷರು ದೀರ್ಘಕಾಲ ಬಾಧೆಗಳನ್ನು ಸಹಿಸಿದ್ದೇ ಅಲ್ಲದೆ ಅವರ ಮಕ್ಕಳು ಕೂಡಾ ಆ ಸಂಕಟವನ್ನನುಭವಿಸುವುದು ತಪ್ಪಲಿಲ್ಲ. ಮಹಿಳೆಯರು ರಹಸ್ಯ ಸ್ಥಾವರಗಳಿಗೆ ಹೋಗಿ ಫ್ರೆಂಚ್ ವಸಾಹತುವಾದಿಗಳ ಬಗ್ಗೆ ಪ್ರಜೆಗಳಿಗೆ ವಿವರಿಸಿದರು. ಅದರ ಬಗ್ಗೆ ದ್ವೇಷವುಂಟಾಗುವಂತೆ ಮಾಡಿದರು. ಫ್ರೆಂಚ್ ವಸಾಹತುವಾದಿಗಳಿಂದ ಹಿಂಸಿಸಲ್ಪಟ್ಟ ಓರ್ವ ಮಹಿಳೆ ಜೈಲುಗೋಡೆಗಳ ಮೇಲೆ ತನ್ನ ರಕ್ತದಿಂದ ತನ್ನ ಅನುಭವವನ್ನು ಒಂದು ಪದ್ಯದಲ್ಲಿ ಹೀಗೆ ಬರೆದಿದ್ದಾಳೆ.

ಗುಲಾಬಿಗೆನ್ನೆಯ ಹೆಣ್ಣು ನಾನಾದರೂ ಭುಜ ಭುಜ ಬೆರೆಸಿ
ಪುರುಷರೊಡನೆ ಸಮಾನವಾಗಿ ಹೋರಾಡುತ್ತಿದ್ದೇನೆ.
ನನ್ನ ಭುಜಗಳ ಮೇಲೆ ನಮ್ಮೆಲ್ಲರ ದ್ವೇಷವನ್ನು
ಹೊರುತ್ತಿದ್ದೇನೆ. ಈ ಜೈಲೇ ನನ್ನ ಪಾಠಶಾಲೆ ಅದರಲ್ಲಿನ
ಖೈದಿಗಳು ನನ್ನ ಗೆಳೆಯರು, ಕತ್ತಿ ನನ್ನ ಮಗು ಬಂದೂಕು ನನ್ನ ಗಂಡ

ಯುದ್ಧದ ವಿಧಾನ, ಯುದ್ಧದ ಸ್ವಭಾವ ಮಹಿಳೆಯರ ಬದುಕಿನ ಮೇಲೆ ಎಣೆಯಿಲ್ಲದ ಪ್ರಭಾವವನ್ನು ಬೀರಿತು. ಅದು ಅವರ ವಿಮೋಚನಾ ಕ್ರಮವನ್ನು ಪ್ರಭಾವಗೊಳಿಸಿದೆ. ಉತ್ತರ ವಿಯಟ್ನಾಂನಲ್ಲಿ ಸಾವಿರಾರು ಮಂದಿ ಮಹಿಳೆಯರು ಹೋರಾಟದಲ್ಲಿ ಪಾಲ್ಗೊಂಡರು. ಆದರೆ ಅವರು ಅದರಲ್ಲಿ ನಿರ್ವಹಿಸಿದ ಪಾತ್ರಗಳು ಸಾಂಪ್ರದಾಯಕರವಾದ ಪಾತ್ರಗಳು ಮಾತ್ರವೇ. ಅವರು ಯುದ್ಧ ಸಾಮಗ್ರಿಯನ್ನು ತಲುಪಿಸುತ್ತಿದ್ದರು; ಆಹಾರವನ್ನು ಕೊಡುತ್ತಿದ್ದರು, ಶತ್ರುಮಾರ್ಗವನ್ನು ಕಡಿದು ಹಾಕುತ್ತಿದ್ದರು, ಗಾಯಗೊಂಡವರ ಆರೈಕೆ ಮಾಡುತ್ತಿದ್ದರು. ಸಮಾಚಾರಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಮುಟ್ಟಿಸುತ್ತಿದ್ದರು. ಇವರು ನಿರ್ವಹಿಸಿದ ಪಾತ್ರಗಳೆಲ್ಲಾ ಅಗತ್ಯವೇ ಆದರೂ ಅವು ಪುರುಷರು ನಿರ್ವಹಿಸುತ್ತಿದ್ದಂತಹ

ವ್ಯೂಹವನ್ನು ನಿರ್ಣಯಿಸುವುದು, ನಾಯಕತ್ವವನ್ನು ವಹಿಸುತ್ತಿದ್ದಂತಹ ಕೆಲಸಗಳೊಂದಿಗೆ ಹೋಲಿಸತಕ್ಕವಲ್ಲ. ದಕ್ಷಿಣ ವಿಯಟ್ನಾಂನಲ್ಲಿ ಮಹಿಳೆಯರು ಮುಖ್ಯವಾದ ಕೆಲವು ಸ್ಥಾನಗಳಿಗೆ ಏರಿದರು. ಇಲ್ಲಿ ಯುದ್ಧದ ಲಕ್ಷಣವೇ ಸಂಪೂರ್ಣ ಭಿನ್ನವಾದುದು. ಸೇನಾ ಮುಂಚೂಣಿಗೆ (ಮಿಲಿಟರಿ ಫ್ರಂಟ್) ಅದರ ನಾಯಕತ್ವಕ್ಕೆ ಹೆಚ್ಚು ವ್ಯತ್ಯಾಸವಿಲ್ಲದ್ದರಿಂದ ಅವರು ಆ ರೀತಿ ಸೇರಿದರು.

ಇಲ್ಲಿ ನಾವು ವಿಯಟ್ನಾಂ ಇತಿಹಾಸವನ್ನು ಮೆಲುಕು ಹಾಕಬೇಕಾದುದು ಅನಿವಾರ್ಯ. ೧೮೮೦ರಲ್ಲಿ ಇಂಡೋ ಚೈನಾ (ಈಗಿನ ವಿಯಟ್ನಾಂ) ಫ್ರೆಂಚ್ ವಸಾಹತುವಾಗಿ ಬದಲಾಯಿತು. ನಂತರ ಅದು ಜಪಾನಿನ ಆಧಿಪತ್ಯಕ್ಕೆ ಒಳಪಟ್ಟಿತು. ಎರಡನೆಯ ಮಹಾಯುದ್ಧದ ನಂತರ ಜಪಾನ್ ದೇಶವು ಶರಣಾದಾಗ ಡಾನ್‌ಡೈ ಅನ್ನಾಮ್‌ನ ಅಧಿಪತಿ ಭಾಸ್‌ಡೈ ಓಚಿಮೆನ್ ಎನ್ನುವ ವಿಯಟ್ನಾಂ ವಿಮೋಚನಾ ಲೀಗ್‌ನ ನಾಯಕನಿಗೆ ಒಪ್ಪಿಸಿದ. ಈ ಲೀಗ್‌ನಲ್ಲಿ ಶೇಕಡಾ ೧೦ ರಷ್ಟು ಕಮ್ಯೂನಿಸ್ಟರೇ ಇದ್ದರು. ಎರಡನೆಯ ಮಹಾಯುದ್ಧವು ಕೊನೆಗೊಂಡಾಗ ಫ್ರೆಂಚ್-ಬ್ರಿಟೀಷ್ ಸೈನ್ಯವು ವಿಯಟ್ನಾಂನ ರಕ್ಷಣೆಗೆ ಬಂದು ವಿಯತ್‌ಮಿನ್ ಶಕ್ತಿಗಳೊಡನೆ ಸಾರ್ಗಾನ್ ವರ್ಗದೊಂದಿಗೆ ಹೋರಾಡಿದರು. ವಿಯತ್‌ಮಿನ್ನರು ಚೀನಾ ಜಪಾನ್ ದೇಶಗಳ ನೆರವಿನೊಂದಿಗೆ ಪಾಶ್ಚಾತ್ಯ ಶಕ್ತಿಗಳನ್ನು ಎದುರಿಸಿದರು. ೧೯೫೦ರ ವೇಳೆಗೆ ಪ್ರತಿ ದಾಳಿ ಮಾಡಿ ಗೆಲುವನ್ನು ಸಾಧಿಸಿಕೊಂಡರು. ನಂತರ ಕಮ್ಯೂನಿಸ್ಟ್ ದೇಶಗಳಿಂದ ಮಾನ್ಯತೆಯನ್ನು ಹೊಂದಿದರು. ಈ ವಿಧಾನದಲ್ಲಿ ಸ್ವಂತ ಕಮ್ಯೂನಿಸ್ಟ್ ಪಕ್ಷವನ್ನೂ ಸ್ಥಾಪಿಸಿಕೊಂಡರು. ೧೯೫೪ರ ವೇಳೆಗೆ ಗ್ರಾಮೀಣ ಪ್ರದೇಶಗಳಲ್ಲಿ ಮೂರರಷ್ಟು ಭಾಗ ವಿಯತ್‌ಮಿನ್ನರ ವಶದಲ್ಲಿದ್ದು ಉಳಿದುದು ಫ್ರೆಂಚ್‌ರ ಅಧೀನದಲ್ಲಿತ್ತು. ೧೯೫೪ರಲ್ಲಿ ನಡೆದ ಜಿನೀವಾ ಒಪ್ಪಂದದ ಪ್ರಕಾರ ವಿಯಟ್ನಾಂನ್ನು ಎರಡಾಗಿ ವಿಭಜಿಸಿದರು. ಆಗ ಉತ್ತರ ವಿಯಟ್ನಾಂ ಕಮ್ಯೂನಿಸ್ಟರ ವಶದಲ್ಲಿಯೂ ದಕ್ಷಿಣ ವಿಯಟ್ನಾಂ ಫ್ರೆಂಚರ ವಶದಲ್ಲಿಯೂ ಇತ್ತು. ಉತ್ತರ ವಿಯಟ್ನಾಮಿನಲ್ಲಿನ ಕಮ್ಯೂನಿಸ್ಟ್ ಪಕ್ಷವು ಸೋವಿಯತ್ ಯೂನಿಯನ್, ಪೂರ್ಣ ಯೂರೋಪ್ ದೇಶಗಳ ಸಹಾಯದಿಂದ ಬಲಗೊಂಡಿತು. ದಕ್ಷಿಣ ವಿಯಟ್ನಾಮಿನಲ್ಲಿ ಗೋದಿನ್‌ದಿಯೆಮ್ ಅಧಿಕಾರಕ್ಕೆ ಬರುವುದರೊಂದಿಗೆ ಅಲ್ಲಿನ ಪ್ರಜೆಗಳು ಪಾಶವಿಕ್ ನಿರ್ಬಂಧನೆಗೆ ಗುರಿಯಾದರೂ. ವಿಯತ್‌ಮಿನ್‌ನ ಬದಲಾಗಿ ಏರ್ಪಟ್ಟ ವಿಯತ್‌ಕಾಂಗ್ ಈ ನಿರಂಕುಶ ಪ್ರಭುತ್ವವನ್ನು ಎದುರಿಸಿತು. ೧೯೬೦ರಲ್ಲಿ ಹನಾಯ್‌ನಲ್ಲಿ ರಾಷ್ಟ್ರ ವಿಮೋಚನಾ ರಂಗವು ರಚಿತವಾಯಿತು. ಈ ರೀತಿ ಸಾಗುತ್ತಿದ್ದ ದಕ್ಷಿಣ ವಿಯಟ್‌ನಾಂ ವಿಮೋಚನಾ ಹೋರಾಟಕ್ಕೆ ಪ್ರತಿಯಾಗಿ ಅಮೆರಿಕದ ಶಸ್ತ್ರಾಸ್ತ್ರ ಸಹಾಯ ಹೆಚ್ಚಾಗತೊಡಗಿತು. ಈ ವಿಧವಾಗಿ ದಕ್ಷಿಣ ವಿಯಟ್ನಾಂ ಪ್ರಜೆಗಳ ಹೋರಾಟವು ಅಮೆರಿಕಾದ ವಸಾಹತುವಾದಕ್ಕೆ ವಿರುದ್ಧ ಹೋರಾಟವಾಗಿ ಬದಲಾಯಿತು. ಈ ಹೋರಾಟವು ೧೯೭೪ರವರೆಗೆ ನಡೆಯಿತು. ಕೊನೆಗೆ ನಿಕ್ಸನ್ ಅಧ್ಯಕ್ಷನಾಗಿದ್ದಾಗ ವಿಯಟ್ನಾಂ ದೇಶವು ವಿಮೋಚನೆಯನ್ನು ಪಡೆದು ಏಕೀಕರಣ ವಾಯಿತು.

ಈ ಸುದೀರ್ಘ ಹೋರಾಟದಲ್ಲಿ ವಿಯಟ್ನಾಂ ಮಹಿಳೆಯರು ಎಲ್ಲ ಹಂತಗಳಲ್ಲಿಯೂ

ಭಾಗವಹಿಸಿದರು. ೧೯೬೧ರಲ್ಲಿ ದಕ್ಷಿಣ ವಿಯಟ್ನಾಂ ಸ್ತ್ರೀ ವಿಮೋಚನಾ ಸಂಘವು ಸ್ಥಾಪಿಸಲ್ಪಟ್ಟಿತು. ಆದರೆ ಸಾಮ್ರಾಜ್ಯವಾದಕ್ಕೆ ವಿರುದ್ಧವಾಗಿ ನಡೆದ ಭೀಕರ ಹೋರಾಟವು ಸ್ತ್ರೀ ವಿಮೋಚನೆಗೆ ಮತ್ತು ರಾಷ್ಟ್ರವಿಮೋಚನೆಗೆ ಮಧ್ಯದ ವ್ಯತ್ಯಾಸವನ್ನು ಹೆಚ್ಚು ಸ್ಪಷ್ಟವಾಗಿ ತಿಳಿಯಗೊಡಲಿಲ್ಲ. ವ್ಯವಸ್ಥಿತವಾಗಿ ಬದುಕುವ ಹಕ್ಕನ್ನು ಕಾಪಾಡಿಕೊಳ್ಳಲು, ವಿಯಟ್ನಾಂ ಮಹಿಳೆಯರ ಆತ್ಮಗೌರವವನ್ನು ರಕ್ಷಿಸುವ ಸಂಘಗಳು ಏರ್ಪಟ್ಟವು. ಏಕೆಂದರೆ 'ಅತ್ಯಾಚಾರದಂತಹ' ಲೈಂಗಿಕ ದಾಳಿಗಳು ಮಹಿಳೆಯರ ಮೇಲೆ ಹೆಚ್ಚತೊಡಗಿದವು. ಈ ಸ್ಥಿತಿಯಲ್ಲಿ ಮಹಿಳೆಯರು ಹೊಸ ಹೊಸ ಹೋರಾಟ ವಿಧಾನಗಳನ್ನು ಕಂಡುಕೊಂಡರು. ಗ್ರಾಮಗಳಿಗೆ ಹೋಗುತ್ತಿರುವಂತೆ ಮಹಿಳೆಯರು ಗುಂಪುಗುಂಪಾಗಿ ಹೋಗುವುದು, ವೃದ್ಧ ಮಹಿಳೆಯರು ಊರುಗೋಲಿನ ಸಹಾಯದಿಂದ ನಡೆಯುವಂತೆ ಮಾಡುವುದು, ಇದ್ದಕ್ಕಿದ್ದಂತೆ ಕಚೇರಿಗಳ ಮುಂದೆ ಧರಣಿ ಕೂಡುತ್ತಿದ್ದರು. ಅವರ ಮೈಮೇಲಿನ ವಸ್ತ್ರಗಳನ್ನು ಬ್ಯಾನರ್ರು ಗಳಾಗಿ ಮಾಡಿಕೊಳ್ಳುತ್ತಿದ್ದರು. ಕೆಲಮಹಿಳೆಯರನ್ನು ಬಂಧಿಸಿದಾಗ ಇನ್ನೂ ಅನೇಕ ಮಹಿಳೆಯರು ಗುಂಪಾಗಿಯೇ ಬಂದು ಸೇರುತ್ತಿದ್ದರು. ಎಳೆ ಮಕ್ಕಳೊಡನೆ ಬಂದ ಮಹಿಳೆಯರು ಬಂಧಿಸಲ್ಪಟ್ಟವರನ್ನು ಬಿಡುವವರೆಗೂ ಆ ಸ್ಥಳದಿಂದ ಕದಲುತ್ತಿರಲಿಲ್ಲ. ಮಹಿಳಾ ಸಂಘಗಳು ವಿವಿಧ ವೃತ್ತಿಗಳಿಗೆ ಸೇರಿದ ಮಹಿಳೆಯರನ್ನು ಒಟ್ಟುಗೂಡಿಸುವುದೇ ಅಲ್ಲದೆ ಅವರ ಬುದ್ಧಿ ಕೌಶಲ್ಯವನ್ನು, ಧೈರ್ಯವನ್ನು ಹೆಚ್ಚಿಸಿತು. ಈ ವಿಧವಾಗಿ ಉತ್ತರ, ದಕ್ಷಿಣ ವಿಯಟ್ನಾಂಗಳಲ್ಲಿ ಉತ್ತರ ವಿಯಟ್ನಾಮಿನ ಮಹಿಳೆಯರು ಹೋರಾಡಲಿಲ್ಲವಾದರೂ ಅವರು ಗ್ರಾಮವ್ಯವಸ್ಥೆಯ ಆಡಳಿತದ ಜವಾಬ್ದಾರಿಯನ್ನು ಕೈಗೊಂಡರು. ಇವರು ಕಮ್ಯೂನಿಸ್ಟ್ ಪಕ್ಷದ ಮೇಲಿನ ವಿಶ್ವಾಸದಿಂದ ಬದ್ಧರಾಗಿ ಕೆಲಸ ಮಾಡಿದ್ದರಿಂದ ಅವರ ಪರಿಸ್ಥಿತಿಗಳಲ್ಲಿ ಬದಲಾವಣೆಗಳು ಉಂಟಾದಂತೆ ನಮಗೆ ಗೋಚರಿಸುತ್ತದೆ. ೧೯೫೦ರ ವೇಳೆಗೆ ಭೂ ಸುಧಾರಣೆ, ಮಹಿಳೆಯರಿಗೆ ಆಸ್ತಿಯ ಸಮಾನಹಕ್ಕು, ಸಮಾನವೇತನ, ಹೆರಿಗೆ ರಜೆ ಮೊದಲಾದ ಸೌಲಭ್ಯಗಳನ್ನು ಸಾಧಿಸಿಕೊಂಡರು. ಆದರೆ ಮಹಿಳೆಯರು ನಿರಕ್ಷರಸ್ಥರಾಗಿದ್ದು, ತಾವು ನಿಕೃಷ್ಟರೆಂಬ ಭಾವನೆ ಇದ್ದುದರಿಂದ ಒಂದು ಸಾಂಘಿಕಭಾವವು ಇಲ್ಲದಂತಾಯಿತು. ೧೯೫೦ರಲ್ಲಿ ಪತ್ರಗಳನ್ನು ಬರೆದುಕೊಳ್ಳಲಾದರೂ ಶಿಕ್ಷಣವು ಅಗತ್ಯವೆಂದು ಭಾವಿಸಿದರು. ೧೯೭೦ರ ವೇಳೆಗೆ ಅಧಿಕ ಸಂಖ್ಯೆಯಲ್ಲಿ ಮಹಿಳೆಯರು ಓದು ಬರಹವನ್ನು ಕಲಿತಿದ್ದರು. ೧೯೬೦ರ ದಶಕದಲ್ಲಿ ಉನ್ನತ ಶಿಕ್ಷಣಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಾಗ ಮಹಿಳಾ ಕಾರ್ಮಿಕರು ನಾಟಕ, ಕಲೆ ಮೊದಲಾದವುಗಳಲ್ಲಿ ಪ್ರವೇಶಿಸಿ ಕಾರ್ಮಿಕರಿಗಾಗಿ ನಾಟಕಗಳನ್ನು ರಚಿಸಿದರು.

ಏನೇ ಆದರೂ ೧೯೭೦ರ ವೇಳೆಗೆ ಶೇಕಡಾ ೫೦ರಷ್ಟು ಮಹಿಳೆಯರು ಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾಗಲೂ ಇವರು ಪುರುಷರಿಗಿಂತ ಬಹಳ ಹಿಂದುಳಿದಿದ್ದರು. ಕ್ರಮವಾಗಿ ಮನೆಯ ಕೆಲಸಗಳು ಹೆಚ್ಚಾಗಿ ದೃಢತೆಯನ್ನು ಕಳೆದುಕೊಂಡ ಮಹಿಳೆಯರು (ಪಕ್ಷ ರಚನೆಯಿಂದ) ರಾಜೀನಾಮೆ ಕೊಡಲು ಪ್ರಾರಂಭಿಸಿದರು. ಬಹಳ ಮಂದಿ ಪಕ್ಷದ ಸದಸ್ಯರು ಮಹಿಳೆಯರ ಕೈಯಲ್ಲಿ ಏನೂ ಆಗದೆಂದು ಭಾವಿಸುತ್ತಲೇ ಅವರು ಸಂಘಟನೆಯಲ್ಲಿ

ಇರುವುದರಿಂದ ಭಯಪಡುತ್ತಿದ್ದರು. ಆದರೆ ಯುದ್ದವು ನಿರಂತರವಾಗಿ ಸಾಗುತ್ತಿದ್ದುದರಿಂದ ಮಹಿಳೆಯರಿಗೆ ಪಕ್ಷದ ಕೆಲಸಗಳನ್ನು ಒಪ್ಪಿಸುವುದು ತಪ್ಪಲಿಲ್ಲ. ಇದಕ್ಕೆ ಪುರುಷರು ಹೋರಾಟದಲ್ಲಿ ಬಹಳ ದೂರ ಉಳಿದದ್ದೂ ಒಂದು ಕಾರಣವೇ. ೧೯೬೦ರಲ್ಲಿ ಐದು ಸಮಾನತೆಗಳ ಯೋಜನೆಯು ಸಿದ್ಧವಾಯಿತು. ಹೋರಾಟದಲ್ಲಿ ಸಮಾನತೆ, ಕೆಲಸದಲ್ಲಿ ಸಮಾನತೆ, ಪಕ್ಷದ ನಾಯಕತ್ವದಲ್ಲಿ ಸಮಾನತೆ, ಆಡಳಿತ ಯಂತ್ರಾಂಗದ ಸಮಾನತೆ, ಸಾಮಾಜಿಕ ವ್ಯವಹಾರದಲ್ಲಿ ಕುಟುಂಬದ ಸಮಾನತೆ. ಯಾವುದು ಏನಾದರೂ ಮಹಿಳೆಯರ ವಿಶೇಷ ಸಮಾವೇಶಗಳು ನಡೆಯುವುದನ್ನು ಪರುಷರು ವಿರೋಧಿಸಿದರು. ಏಕೆಂದರೆ ಪುರುಷರಿಗೆ ಈ ವಿಧವಾಗಿ ಎಲ್ಲ ವಿಷಯಗಳ ಬಗ್ಗೆಯೂ ಮಹಿಳೆಯರೂ ಕೂಡಿ ಚರ್ಚಿಸುವುದು ಇಷ್ಟವಾಗಲಿಲ್ಲ. ಮಹಿಳೆಯರು ಪುರುಷರಿಗಿಂತ ಕಮ್ಯೂನುಗಳಲ್ಲಿ ಹೆಚ್ಚು "ಕೆಲಸದ ದಿನಗಳು" ಕೆಲಸ ಮಾಡಿದರೂ, ಕೃಷಿ ಕಾರ್ಯಗಳಲ್ಲಿ ಅವರಿಗೆ ಪುರುಷರಿಗಿಂತ ಹೆಚ್ಚು ಪರಿಚಯ, ಶಕ್ತಿಯುಕ್ತಿಗಳು, ಇದ್ದುದರಿಂದ ಮಹಿಳೆಯರಿಗೆ ತಮ್ಮ ಪಾಲಿನ ಪ್ರಯೋಜನಗಳು ದೊರೆಯಲಿಲ್ಲ. ಅವರಿಗೆ ಬರಬೇಕಿದ್ದ ಅವಕಾಶಗಳೆಲ್ಲವೂ ಅವರಿಗೆ ಬರಗೊಡಲಿಲ್ಲ. ವಿಶೇಷ ಮಹಿಳಾ ಸಂಘಗಳನ್ನು ನಡೆಸಲು ಕುರುಡು ವಿರೋಧವು ವ್ಯಕ್ತವಾಯಿತು. ನಿರ್ಣಯ ಗಳಲ್ಲಿಯೂ ಅವರ ಪಾತ್ರವು ಕುಗ್ಗಿ ಹೋಯಿತು.

ಈ ಸಮಸ್ಯೆಯನ್ನು, ಕೆಲವು ನಾಯಕರನ್ನು ವಿಮರ್ಶಿಸುವುದು, ಮಹಿಳೆಯರ ಬಗೆಗಿನ ಅವರ ಅಭಿಪ್ರಾಯಗಳನ್ನು ಚರ್ಚಿಸುವುದರಿಂದ ಪರಿಹರಿಸಿಕೊಂಡರು. ಸುಸಂಘಟಿತ ಮಿಲಿಟರಿ ಹೋರಾಟವು ಕಮ್ಯೂನಿಸ್ಟ್ ಪಾರ್ಟಿಕಮಿಟ್‌ಮೆಂಟ್ ಮಹಿಳಾ ವಿಮೋಚನಾ ಚಳುವಳಿಯನ್ನು ಮುಂದಕ್ಕೆ ತಳ್ಳಿತು. ಆದರೆ ಇನ್ನೂ ಮಾಡಬೇಕಾದುದು ಬಹಳ ಇದೆ. ೧೯೬೦ರಲ್ಲಿ ಬಹುಪತ್ನಿತ್ವವನ್ನು, ಬಾಲ್ಯವಿವಾಹವನ್ನು ಕಾನೂನುಬದ್ಧವಾಗಿ ತೆಗೆದು ಹಾಕಿದರು. ಹೋ-ಚಿ-ಮಿನ್ ಮಹಿಳೆಯರನ್ನುಕುರಿತು ತರಬೇಕಾದ ಬದಲಾವಣೆಗಳನ್ನು ಸಮರ್ಥಿಸಿದನು. ಏಕೆಂದರೆ ಸಮಾಜದಲ್ಲಿ ಅರ್ಧದಷ್ಟಿದ್ದ ಮಹಿಳೆಯರ ವಿಮೋಚನೆ ಆಗದೆ ಸಮಾಜವಾದವು ಬರದೆಂದು ಆತ ಅಭಿಪ್ರಾಯಪಟ್ಟ. ಆತ ಪುರುಷರು ಬೂರ್ಜ್ವಾ ಫ್ಯೂಡಲ್ ಭಾವನೆಗಳಿಂದ ಹೊರಬರಬೇಕೆಂದು ಅಭಿಪ್ರಾಯಪಟ್ಟ.

ಈ ವಿಧವಾಗಿ ಮಹಿಳಾ ವಿಮೋಚನೆಗೆ ಒಂದು ತಳಹದಿಯನ್ನು ಹಾಕಿದಾಗಲೂ ಅದು ಸಾಮಾಜಿಕ ಬದಲಾವಣೆಗಳನ್ನು ತಡೆದವು. ಏಕೆಂದರೆ ಯುದ್ಧವು ಸಾಮಾಜಿಕ ವಿಷಯಗಳಿಗಿಂತ ಹೆಚ್ಚು ಪ್ರಾಮುಖ್ಯತೆಯನ್ನು ಗಳಿಸಿಕೊಂಡಿತು. ಇದ್ದ ಅಲ್ಪಸ್ವಲ್ಪ ಸಂಪನ್ಮೂಲಗಳನ್ನು ಸೈನಿಕ ಅಗತ್ಯಗಳಿಗೆ ಉಪಯೋಗಿಸಿಕೊಂಡರು. ಉತ್ತರ ವಿಯಟ್ನಾಂನಲ್ಲಿ ಒಂದು ಕಡೆ ಬಾಂಬ್ ದಾಳಿ ನಡೆಯುತ್ತಿದ್ದರೂ ಶೇಕಡಾ ೫೦ರಷ್ಟು ಮಕ್ಕಳಿಗೆ ಮಾತ್ರವೇ ವೈದ್ಯಕೀಯ ಸೌಲಭ್ಯ ಗಳನ್ನು ಒದಗಿಸಿಕೊಟ್ಟರು. ಸಹಕಾರೀ ಗುಂಪುಗಳು, ಅಡಿಗೆ ಮಾಡುವುದು, ಮಕ್ಕಳನ್ನು ನೋಡಿಕೊಳ್ಳುವುದು, ವ್ಯಾಪಾರ ಮಾಡುವುದನ್ನು ಮಾಡುತ್ತಿದ್ದರು. ಸೇವಾ ವರ್ಗಗಳು ಮಹಿಳಾ ಕಾರ್ಮಿಕರೊಡನೆ ಸಹಕರಿಸುತ್ತಿದ್ದರು. ಶಿಶುರಕ್ಷಣಾ ಕೇಂದ್ರಗಳು ಬಾಂಬ್

ದಾಳಿಗಳಿಂದ ತಪ್ಪಿಸಿಕೊಳ್ಳಲು ಒಂದು ಕಡೆಯಿಂದ ಮತ್ತೊಂದು ಕಡೆಗೆ ಬದಲಾಯಿಸ ಬೇಕಾಗುತ್ತಿತ್ತು. ಔಷಧಿಗಳ ಕೊರತೆಯನ್ನು ತೀವ್ರವಾಗಿ ಎದುರಿಸಬೇಕಾಗಿ ಬಂತು. ಆ ಸಮಯದಲ್ಲಿ ಕುಟುಂಬ ನಿಯಂತ್ರಣ, ಪ್ರಜೆಗಳನ್ನು ಸಮರ್ಥರನ್ನಾಗಿ ಮಾಡುವುದರ ಮೂಲಕ ಅವರಿಗೆ ನೀತಿ ಸೂತ್ರಗಳನ್ನು ಹೇಳುವುದರ ಮೂಲಕ ಪಾಲಿಸುತ್ತಿದ್ದರು.

ಇಪ್ಪತ್ತು ವರ್ಷ ಆಗುವವರೆಗೂ ಮದುವೆಯಾಗದಿರುವುದು, ಪತಿ-ಪತ್ನಿಯರು ಪೂರ್ಣ ಕಟ್ಟುಪಾಡಿನಲ್ಲಿರುವುದು ಇಂತಹವು ಮಿಲಿಟರಿ ನೀತಿನಿಯಮಗಳೆಂದು ಆಚರಿಸುತ್ತಿದ್ದರು. ಬೌದ್ಧಮತ ಮತ್ತು ಕನ್‌ಫ್ಯೂಷಿಯಸ್ ಮತಗಳಲ್ಲಿ ಭಾಗವಾಗಿ ಆತ್ಮಧಿಕ್ಕಾರದ (ಸನ್ಯಾಸಿ ಯಾಗುವುದು) ಸಂಸ್ಕೃತಿಯು ವಿಯಟ್ನಾಂ ಪ್ರಜೆಗಳಲ್ಲಿ ಹೆಚ್ಚಾಗಿದ್ದವು. ಅವು ವಿಯಟ್ನಾಂ ಕಮ್ಯೂನಿಸ್ಟರಲ್ಲಿಯೂ ನಮಗೆ ಕಂಡುಬರುತ್ತವೆ. ಈ ನಡತೆ, ಕಮಿಟ್‌ಮೆಂಟ್, ತ್ಯಾಗ ಅವರ ಕ್ರಾಂತಿಯನ್ನು ಮುಂದಕ್ಕೊಯ್ಯಿತು.

**ಆಫ್ರಿಕಾ :** ವಸಾಹತುವಾಗಿ ಬದಲಾದ ಆಫ್ರಿಕಾದ ದೇಶಗಳಲ್ಲಿನ ಮಹಿಳೆಯರ ಆರ್ಥಿಕ, ಸಾಮಾಜಿಕ ಪರಿಸ್ಥಿತಿಗಳಲ್ಲಿ ಎಷ್ಟೋ ಬದಲಾವಣೆಗಳು ಕಂಡು ಬರುತ್ತವೆಯಾದರೂ ಅವುಗಳನ್ನು ಸಾಮಾನ್ಯೀಕರಿಸುವುದು ಸಾಧ್ಯವಲ್ಲ. ಆದರೆ ವಸಾಹತುವಾದದ ಪ್ರಭಾವವು ಎಲ್ಲ ದೇಶಗಳ ಮೇಲೆ ಉಂಟಾಯಿತು. ಈ ವಿಧಾನದಲ್ಲಿ ಅಲ್ಲಿನ ಮಹಿಳೆಯರ ಹಕ್ಕುಗಳು ನಿರ್ಮೂಲವಾದವು. ಅದರ ಸ್ವೇಚ್ಛಾ ಸ್ವಾತಂತ್ರ್ಯಗಳು ನಿರ್ಮೂಲವಾದವು.

ಆಫ್ರಿಕಾದ ದೇಶಗಳು ವಸಾಹತು ದೇಶಗಳಾಗಿ ಬದಲಾಗುವ ಮುನ್ನ ಅಲ್ಲಿನ ಮಹಿಳೆಯರ ಜೀವನವಿಧಾನ, ಕುಟುಂಬ ರಚನೆಯಲ್ಲಿ ಬಹಳ ಸ್ವತಂತ್ರತೆಯನ್ನು ಅನುಭವಿಸುತ್ತಿದ್ದರು. ಅವರಿಗೆ ಧರ್ಮಪರವಾದ, ಮಾತೃಪರವಾದ ಕೆಲವು ಪ್ರತ್ಯೇಕ ಕೆಲಸಗಳಿದ್ದವು. ಅವರು ಸಾಧಾರಣವಾಗಿ ದೊಡ್ಡ ದೊಡ್ಡ ಕುಟುಂಬಗಳಲ್ಲಿ (ಬಹುಪತ್ನಿತ್ವದಿಂದ ಕೂಡಿದ) ಜೀವಿಸುತ್ತಿದ್ದರು. ಆ ಕುಟುಂಬಗಳು ಸ್ವತಂತ್ರವಾದವುಗಳಾಗಿಯೂ, ಸ್ತ್ರೀ ನಾಯಕತ್ವದಲ್ಲಿ ನಡೆಯುತ್ತಿದ್ದವಾಗಿಯೂ ಆಗಿದ್ದವು. ವಾಸ್ತವವಾಗಿ ಕೃಷಿ ರಂಗದಲ್ಲಿ ಆಫ್ರಿಕಾದ ದೇಶಗಳು "ವಿಶೇಷವಾಗಿ ಮಹಿಳೆಯರ ವ್ಯವಸಾಯ ಪ್ರದೇಶಗಳಾಗಿದ್ದವು." ಅವು ವಸಾಹತು ದೇಶಗಳಾಗಿ ಬದಲಾದಾಗ ಮಹಿಳೆಯರನ್ನು ಈ ವ್ಯಾವಸಾಯಿಕ ಕೆಲಸಗಳಿಂದ ಬಿಡಿಸಿದರು.

ಮಹಿಳೆಯರು ಕೆಲವು ಮುಖ್ಯವಾದ ಸಾಂಪ್ರದಾಯಿಕ ಪಾತ್ರಗಳನ್ನು ನಿರ್ವಹಿಸುತ್ತಿದ್ದರು. ದಕ್ಷಿಣ ಘಾನಾ ದೇಶದಲ್ಲಿ "ರಾಣಿಮಾತೆಯರು" ಎಂದು ಇದ್ದವರೇ "ರಾಜರನ್ನು" ನೇಮಿಸುತ್ತಿದ್ದರು. ಅಲ್ಲಿ ಮಹಿಳಾ ಸಂಘಗಳು ಇದ್ದವು. ಆ ಸಂಘಗಳು ಆ ಮಹಿಳೆಯರಿಗೆ ಇಷ್ಟವಾದ ಕೆಲಸಗಳನ್ನು ಮಾಡುತ್ತಿದ್ದವು. ಅವರು ಪರ್ಯಾಯ ಅಧಿಕಾರವನ್ನು, ಪ್ರಾತಿನಿಧ್ಯ ವನ್ನು, ಸಾಲಿಡಾರಿಟಿಯನ್ನು, ಅಧಿಕಾರವನ್ನು ಕೊಡುತ್ತಿದ್ದರು. ೧೯೨೦ರಲ್ಲಿ ನೈಜೀರಿಯಾದಲ್ಲಿ ಬ್ರಿಟೀಷರು ಹೊಸ ಆಡಳಿತ ಪದ್ಧತಿಯನ್ನು ತಂದಾಗ ಸ್ತ್ರೀಯರ ಅಧಿಕಾರವನ್ನು ತೆಗೆದು ಹಾಕಿದರು. ಇವುಗಳಿಗೆ ವಿರುದ್ಧವಾಗಿ ಮಹಿಳಾ ಸಂಘಗಳು ಮಹಿಳೆಯರನ್ನು ಜಿಲ್ಲಾ ಅಧಿಕಾರಿಗಳಾಗಿ, ವಾರೆಂಟ್ ಅಧಿಕಾರಿಗಳಾಗಿ ನೇಮಿಸಬೇಕೆಂದು ಒತ್ತಾಯಪಡಿಸಿತು.

ಕಾಲಬರ್, ಓವರ್ರೀ ಪ್ರಾಂತ್ಯಗಳಲ್ಲಿ ಲಕ್ಷಾಂತರ ಮಹಿಳೆಯರು ಪ್ರತಿಭಟನೆಯಲ್ಲಿ ಪಾಲ್ಗೊಂಡರು. ಅವರು ಸ್ವದೇಶೀ ಕೋರ್ಟುಗಳ ಮೇಲೆ ದಾಳಿ ಮಾಡಿದರು. ವಾರೆಂಟ್ ಅಧಿಕಾರಿಗಳನ್ನು ಅವಮಾನಪಡಿಸಿದರು. ಈ ರೀತಿಯಲ್ಲಿ ಮಹಿಳೆಯರು ತಮ್ಮ ಹಳೆಯ ಸಂಪ್ರದಾಯಗಳನ್ನು ಕೆಲವು ಜಾಲಗಳನ್ನು (Network) ತಯಾರು ಮಾಡಿಕೊಳ್ಳುವ ಮೂಲಕ ಉಳಿಸಿಕೊಳ್ಳಲು ಪ್ರಯತ್ನಿಸಿದರು. ಆ ಮೂಲಕ ವಸಾಹತು ವಿಧಾನವು ಬರುವ ಮೊದಲು ತಮಗಿದ್ದ ಹಳೆಯ ಸ್ಥಾನವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರು. ಇಲ್ಲಿ ಮಹಿಳೆಯರು ನಡೆಸಿದ "ಮಹಿಳೆಯರ ಯುದ್ಧ" ಎನ್ನುವ ಚಳುವಳಿಯನ್ನು ವಸಾಹತುವಾದಿಗಳು ಬಂದೂಕುಗಳ ಮೂಲಕ ತುಳಿದುಹಾಕಬೇಕಾಯಿತು.

ಮಹಿಳೆಯರು ಆರಂಭದಲ್ಲಿ ವ್ಯಾಪಾರಕ್ಕೋಸ್ಕರ ಬಂದ ವಸಾಹತುವಾದಿಗಳಿಗೆ ವಿರುದ್ಧ ವಾಗಿ ಪ್ರತಿಭಟನೆ ಮಾಡಿದರು. ನಿಹಂಡಾ ಎನ್ನುವ ಒಬ್ಬ ಶೋಣೀ ಪೂಜಾರಿಣಿಯು ದಕ್ಷಿಣ ರೋಡಿಶಿಯಾದಲ್ಲಿ (ಈಗಿನ ಜಾಂಬಿಯಾ) ಬ್ರಿಟೀಷರ ವಿರುದ್ಧವಾಗಿ ಒಂದು ಪ್ರತಿಭಟನೆಯನ್ನು ಸಂಘಟಿಸಿದಳು. ಆಕೆಯನ್ನು ೧೮೯೭ರಲ್ಲಿ ವಸಾಹತುವಾದಿಗಳು ನೇಣು ಹಾಕಿ ಕೊಂದರು. ಕಾಂಗೋದಲ್ಲಿ 'ಮೆರಿಂದಾಡೋನಾ ಬೀಟ್ರಿನ್' ಎನ್ನುವ ಕಾಂಗೋ ಪೂಜಾರಿಣಿಯು 'ಪ್ರತಿಭಟನಾ ಕ್ರೈಸ್ತಮತವನ್ನು' ಸ್ಥಾಪಿಸಿದಳು. ಆಕೆಯ ಪ್ರತಿಭಟನೆಯು ಎಷ್ಟು ಪ್ರಭಾವವನ್ನು ಬೀರಿತೆಂದರೆ ಅಲ್ಲಿನ ರಾಜ ಆಕೆಯನ್ನು ಆಕೆಯ ಹಸುಗೂಸನ್ನು ಜೀವಂತ ಸುಟ್ಟುಹಾಕಿದನು. ಮೊಟ್ಟಮೊದಲು ನಡೆದ ಪಶ್ಚಿಮ, ಪೂರ್ವ, ಮಧ್ಯ ಆಫ್ರಿಕಾ ಹೋರಾಟಗಳಲ್ಲಿ ಮಹಿಳೆಯರು ಪ್ರಮುಖ ಪಾತ್ರವನ್ನು ನಿರ್ವಹಿಸಿದರು.

ಜಾಂಬಿಯಾದಲ್ಲಿ ಯುನೈಟೆಡ್ ನ್ಯಾಷನಲಿಸ್ಟ್ ಇಂಡಿಪೆಂಡೆನ್ಸ್ ಪಾರ್ಟಿ (Nunip)ಯ ಕೆಲವು ಮಹಿಳೆಯರು ಗ್ರಾಮೀಣ ಪಟ್ಟಣ ಪ್ರದೇಶಗಳಲ್ಲಿ ಪ್ರತಿಭಟನೆಯನ್ನು, ಸಾಹಿತ್ಯ ಸಮಾವೇಶಗಳನ್ನು, ಮತಾದಾರರನ್ನು ನೋಂದಾಯಿಸುವುದು, ಮೆರವಣಿಗೆಗಳು, ಬಹಿಷ್ಕಾರಗಳನ್ನು ಸಂಘಟಿಸಿದರು. ನೈಜೀರಿಯಾದ ಚುನಾವಣೆಗಳಲ್ಲಿ ಗೆಲ್ಲಬೇಕೆಂದರೆ ಮಹಿಳೆಯರ ಸಹಾಯ ಅತ್ಯವಶ್ಯಕವಾಯಿತು. ದಕ್ಷಿಣ ಆಫ್ರಿಕಾದಲ್ಲಿ ೧೯೫೦ರವರೆಗೆ ಮಹಿಳೆಯರಿಗೆ ಸಂಬಂಧಿಸಿದ ಕಾನೂನುಗಳನ್ನು ರಚಿಸಲಿಲ್ಲ. ಆಫ್ರಿಕನ್ ರಾಷ್ಟ್ರೀಯ ಕಾಂಗ್ರೆಸ್ಸಿಗೆ ಸಂಬಂಧಿಸಿದ 'ಬೌಂಟ್ ಸ್ತ್ರೀ ಲೀಗ್' ವರ್ಣಭೇದಕ್ಕೆ, ಆ ವರ್ಗಕ್ಕೆ ಸೇರಿದ ಅನ್ಯಾಯಗಳಿಗೆ ಪ್ರತಿಯಾಗಿ ಹೋರಾಟಗಳನ್ನು ನಡೆಸಿತು. ಆಫ್ರಿಕನ್ ರಾಷ್ಟ್ರೀಯ ಕಾಂಗ್ರೆಸ್ಸಿನಲ್ಲಿ ಪುರುಷರು, ಹೊರಗಿನ ಪುರುಷರು ವಿರೋಧಿಸುತ್ತಿದ್ದರೂ ಮಹಿಳೆಯರು ಆ ಹೋರಾಟಗಳಿಗೆ ನಾಯಕತ್ವವನ್ನು ಒದಗಿಸಿದರು.

ಹೋರಾಟಗಳಲ್ಲಿ ಮಹಿಳೆಯರು ಇಂತಹ ಪ್ರಮುಖವಾದ ಪಾತ್ರವನ್ನು ವಹಿಸಿದರೂ ಸ್ವಾತಂತ್ರ್ಯ ಬಂದಾಗ ಮಹಿಳೆಯರ ಸ್ಥಿತಿಗತಿಗಳಲ್ಲಿ ಹೆಚ್ಚಿನ ಬದಲಾವಣೆಗಳು ಬರಲಿಲ್ಲ. ರಾಜಕೀಯ ನಾಯಕತ್ವದಲ್ಲಿ ಮಹಿಳೆಯರಿಗೆ ಕೆಳಗಿನ ಸ್ಥಾನಗಳು ಲಭಿಸಿದವು. ಜಾಂಬಿಯಾ ಮಹಿಳಾ ಬ್ರಿಗೇಡ್‌ಗಳು (Unip) ಹಿಂದಿನ ಸ್ಥಾನಗಳಿಗೆ ತಳ್ಳಲ್ಪಟ್ಟವು. ಆದರೆ ಸುಶಿಕ್ಷಿತ

ಮಹಿಳೆಯರು ಕೆಲವು ಪ್ರಯೋಜನಗಳನ್ನು ಹೊಂದಿದರು. ಯಾವುದೇನಾದರೂ ಸಾಕ್ಷರತೆಯು ಬಹಳ ಕಡಿಮೆಯೇ ಇತ್ತು. ಕೂಲಿಗಾಗಿಯೇ ವಲಸೆ ಹೋಗಬೇಕಾದ ಕಾರಣ ವಿಚ್ಛೇದನಗಳ ಸಂಖ್ಯೆ ಹೆಚ್ಚಾದವು. ಪರಿಣಾಮವಾಗಿ ಮಹಿಳೆಯರನ್ನೇ ಅವಲಂಬಿಸಿ ಬದುಕುವ ಕುಟುಂಬಗಳ ಸಂಖ್ಯೆ ಹೆಚ್ಚಾದವು. ಆಫ್ರಿಕಾದ ದೇಶಗಳಲ್ಲಿ ಬಹುಪಾಲು ಆಡಳಿತಾಂಗಗಳು ವಸಾಹತು ವಾದಿಗಳು ಕೊಟ್ಟ ನೀತಿಗಳನ್ನು ಹೆಚ್ಚು ಬದಲಾಯಿಸಲಿಲ್ಲ. ಪರಿಣಾಮವಾಗಿ ನಿರುದ್ಯೋಗ, ಬಡತನ, ಆ ಖಂಡವನ್ನೆಲ್ಲಾ ಹಿಂಬಾಲಿಸಿಯೇ ಇದೆ. ಈ ಸ್ಥಿತಿಯಲ್ಲಿ ಬಹಳ ಪೆಟ್ಟು ತಿಂದುದು ಮಹಿಳೆಯರೇ. ಮಾರ್ಕ್ಸಿಸ್ಟ್ ಕಮಿಟ್‌ಮೆಂಟ್ ಇದ್ದಾಗ ಜಿಂಬಾಬ್ವೆಯಲ್ಲಿ ೧೯೮೫ರಲ್ಲಿ ಬಂದ ಭೂ ಸುಧಾರಣೆ, ಸಾಂಪ್ರದಾಯಿಕ ಹಕ್ಕುಗಳು, ಸ್ತ್ರೀಯರ ಪರಿಸ್ಥಿತಿಗಳನ್ನು ಬದಲಾಯಿ ಸಲಿಲ್ಲ. ವಿವಾಹಪದ್ಧತಿ, ಮಹಿಳಾ ಹಕ್ಕುಗಳು ಹಾಗೆಯೇ ಉಳಿದು ಹೋದವು. ಜಿಂಬಾಬ್ವೆಯ ಮಹಿಳಾ ಸಂಘಗಳು ಈ ಪರಿಸ್ಥಿತಿಗಳ ಬಗ್ಗೆ ವಿರೋಧ ವ್ಯಕ್ತಪಡಿಸಿದವಾದರೂ ಪ್ರಯೋಜನ ವಿಲ್ಲದಂತಾಯಿತು. ಈ ಪರಿಸ್ಥಿತಿಯಲ್ಲಿ ಎಷ್ಟೋ ಆಫ್ರಿಕಾ ಮಹಿಳೆಯರು ರಾಜಕೀಯದಿಂದ ದೂರವಾದರು. ಆದರೆ ಸಶಸ್ತ್ರ ಹೋರಾಟಗಳು ನಡೆದ ಮೊಜಾಂಬಿಕ್, ಅಂಗೋಲ, ಜಿನೀವಾ ಬಿಸ್ಸನ್‌ಗಳಲ್ಲಿ ಮಹಿಳೆಯರ ಪರಿಸ್ಥಿತಿಗಳು ಸ್ವಲ್ಪ ಉತ್ತಮವಾಗಿದ್ದವು. ಅಲ್ಲಿ ಈ ಸಮಸ್ಯೆ ಗಳೆಲ್ಲದರ ಬಗ್ಗೆ ಚರ್ಚೆಗಳು ನಡೆಯುತ್ತಲೇ ಇದ್ದವು.

ಮೊಜಾಂಬಿಕ್, ಪೋರ್ಚುಗೀಸರ ವಸಾಹತುಶಾಹಿಯಲ್ಲಿ ದಾರುಣವಾದ ವಸಾಹತು ನೀತಿಯನ್ನು ಭರಿಸಬೇಕಾಯಿತು. ಅಲ್ಲಿನ ವ್ಯವಸಾಯೋತ್ಪಾದನೆಗೆ ಮಹಿಳೆಯರು ಬೆನ್ನೆಲು ಬಾಗಿದ್ದರೂ ಅವರ ಪರಿಸ್ಥಿತಿಯು ಬಹಳ ದಾರುಣವಾಗಿತ್ತು. ಬಹಳಷ್ಟು ಕೃಷಿಕರು ದಿನಗೂಲಿಗಳಾಗಿ ಬದಲಾದರು. ಇಲ್ಲಿ ಶೇಕಡಾ ೮೦ರಷ್ಟು ಪ್ರಜೆಗಳು ಹಳ್ಳಿಗಳಲ್ಲಿ ಜೀವಿಸು ತ್ತಿದ್ದರು. ಅನಕ್ಷರತೆಯು ಶೇಕಡಾ ೯೦ರಷ್ಟಿತ್ತು. ಮಹಿಳೆಯರಲ್ಲಿ ೧೦೦ಕ್ಕೆ ೧೦೦ರಷ್ಟು ಅನಕ್ಷರಸ್ಥರೇ. ಒತ್ತಾಯದ ಕೆಲಸ, ಅಧಿಕ ಪ್ರಮಾಣದ ತೆರಿಗೆಗಳ ಭಾರ, ವಾಣಿಜ್ಯ ಬೆಳೆಗಳು ಈ ಎಲ್ಲ ರಂಗಗಳಲ್ಲಿಯೂ ಮಹಿಳೆಯರಿಗೆ ಅಧಿಕಾರವಿಲ್ಲದಂತೆ ಮಾಡಿದರು.

ಮೊಜಾಂಬಿಕ್‌ನಲ್ಲಿ ೧೯೬೨ರಲ್ಲಿ FRELIMO ಅಸ್ತಿತ್ವಕ್ಕೆ ಬಂತು. ೧೯೬೭ರಲ್ಲಿ ಅದು ಒಂದು ಸಂಘವನ್ನು ಸ್ಥಾಪಿಸಿತು. ಮಹಿಳೆಯರು ಗೆರಿಲ್ಲಾ ಹೋರಾಟಗಳಲ್ಲಿ ಸಹಕರಿಸಿದರು. ಆಹಾರಗಳನ್ನು ಒದಗಿಸಿದರು. ರಹಸ್ಯ ಸ್ಥಾವರಗಳನ್ನು ಅಣಿಮಾಡಿದರು. ಅಲ್ಲಿನ ಪುರುಷರು ಮೊದಲು ಸ್ತ್ರೀಯನ್ನು ಸೈನ್ಯದಲ್ಲಿ ಸೇರಿಸಿಕೊಳ್ಳಲು ನಿರಾಕರಿಸಿದರಾದರೂ ನಂತರ ಸೇರಿಸಿಕೊಂಡರು. ೧೯೭೩ರಲ್ಲಿ OMM ಎನ್ನುವ ಸಂಸ್ಥೆಯನ್ನು ಸ್ಥಾಪಿಸಿದರು. ಆದರೆ ಅದು ಬಹಳ ಚಿಕ್ಕದು, ಅದು ಸ್ವಾತಂತ್ರ್ಯ ಬರುವವರೆಗೂ ಛಿದ್ರಛಿದ್ರವಾಗಿ ಚದುರಿಹೋಗಿತ್ತು. ಅದರ ಮುಖ್ಯವಾದ ಕರ್ತವ್ಯಗಳು ಮಹಿಳೆಯರನ್ನು ಸಂಘಟಿಸುವುದು, ಉತ್ಪಾದನಾ ಕಾರ್ಯಗಳಲ್ಲಿ ಅವರನ್ನು ತೊಡಗಿಸುವುದು, ಮೂಢ ಆಚಾರಗಳಿಗೆ ವಿರುದ್ಧವಾಗಿ ಮಹಿಳೆಯರಲ್ಲಿ ವೈಜ್ಞಾನಿಕ ದೃಷ್ಟಿಕೋನವನ್ನು ಉಂಟುಮಾಡುವುದು, ಮಹಿಳೆಯರಲ್ಲಿ ಕಾರಣಬದ್ಧವಾದ ಆಲೋಚನೆಗಳನ್ನು ಹಚ್ಚಿಕೆರಳಿಸುವುದು. ಆ ಪಕ್ಷವು ಮಾರ್ಕ್ಸಿಸ್ಟ್

ದೃಷ್ಟಿಕೋನದಲ್ಲಿ ಮಹಿಳೆಯರ ಸಮಸ್ಯೆಗಳನ್ನು ಆರ್ಥಿಕ ದರೋಡೆಯೊಡನೆ ಸೇರಿಕೊಂಡಿದ್ದ ಸಮಸ್ಯೆಯಾಗಿಯೇ ಶೋಧಿಸಿತು. ಕುಟುಂಬ, ಮನೆಗೆಲಸಗಳು ಬಹಳ ಚಿಕ್ಕ ವಿಷಯಗಳೆಂದು ತಳ್ಳಿಹಾಕಿತು.

OMM ಒಂದು ಸ್ವತಂತ್ರ ಚಳಿವಳಿಯಲ್ಲ. ಆದ್ದರಿಂದ ಅದು FRELIMO ನೀತಿಗಳಲ್ಲಿ ಒಂದು ಅಂಗವಾಗಿ ಕೆಲಸಮಾಡಿತು. ಆದರೆ ೧೯೭೪ರಲ್ಲಿ ನಡೆದ ಮಹಾಸಭೆಯು ತಾಯಂದಿರ ಆರೋಗ್ಯ ಪರಿಸ್ಥಿತಿಯನ್ನು ಉತ್ತಮ ಪಡಿಸುವುದಕ್ಕೆ ಕಾರ್ಯಕ್ರಮಗಳನ್ನು ರಚಿಸಿತು. ಮಕ್ಕಳಿಗೆ ಮೂರು ಹೊತ್ತಿನ ಊಟವನ್ನು ನೀಡಬೇಕೆಂಬ ನಿರ್ಣಯವನ್ನು ಪ್ರಚಾರಗೊಳಿಸಿತು. ಈ ವಿಧವಾದ ಪ್ರಚಾರಗಳು ಮಹಿಳೆಯರ ಮೇಲೆ ಹೆಚ್ಚಿನ ಕಾರ್ಯಭಾರವನ್ನು ಹೊರಿಸಿದವು. ಏಕೆಂದರೆ ಈ ಪ್ರಚಾರಗಳಲ್ಲಿ ಕೆಲಸ ಮಾಡುವ ಮಹಿಳೆಯರು ತಮ್ಮ ಮಕ್ಕಳ ಭಾರವನ್ನು ಹೊರಬೇಕಾದ್ದರಿಂದ ಇದರಲ್ಲಿ ಸೇರಿ ಕೆಲಸ ಮಾಡುವ ಭಾವನೆಯೇ ಬರಲಿಲ್ಲ. ಮನೆಗೆಲಸಗಳಲ್ಲಿ ತಂದೆಯರ ಪಾತ್ರವನ್ನು ಕುರಿತು ಪ್ರಚಾರ ಮಾಡಿದರೆ ಅದು ಯಶಸ್ವಿಯಾಗಲಾರದೆಂದು ನಿರ್ಧಾರವಾಯಿತು. FRELIMO ಈ ವೈರುಧ್ಯಗಳನ್ನು ಎದುರಿಸಲು ಕೂಡಾ ಸಿದ್ಧವಾಗಿರಲಿಲ್ಲ. ಯಾವುದೇನಾದರೂ OMM ಮಾಡಿದ ಈ ಪ್ರಚಾರಗಳು, ಮಹಿಳೆಯರು ತಮ್ಮ ಸಾಂಪ್ರದಾಯಿಕ ಪದ್ಧತಿಗಳನ್ನು ಬಿಟ್ಟುಕೊಳ್ಳಲು ಅವಕಾಶ ಮಾಡಿತು. ೧೯೭೩ರಲ್ಲಿ ನಡೆದ ಮಹಾಧಿವೇಶನದಲ್ಲಿ ಶೇಕಡ ೧೫ರಷ್ಟು ಮಹಿಳೆಯರು ಪಾಲ್ಗೊಂಡರು. ಆದರೆ ಮಹಿಳೆಯರು ಕೆಳಸ್ತರದಲ್ಲಿ ಮಾತ್ರವೇ ಇದ್ದರು. ಮೇಲಿನ ನಾಯಕತ್ವದ ಸ್ಥಾನಗಳಲ್ಲಿ ಅವರಿಗೆ ಸ್ಥಾನವೇ ದೊರೆಯಲಿಲ್ಲ. OMM ಮಾಸಿಕ ಸಮಾವೇಶಗಳು ಪಕ್ಷದ ನಿರ್ಣಯಗಳ ಬಗ್ಗೆ ಅಭಿಪ್ರಾಯಗಳನ್ನು ಚರ್ಚಿಸಿ ಪಕ್ಷಕ್ಕೆ ಕಳುಹಿಸಬೇಕಾಗಿತ್ತು. ಆದರೆ ಬಹಳ ಕಡಿಮೆ ಮಂದಿ ಹಾಗೆ ಮಾಡುತ್ತಿದ್ದರು. ಅಂದರೆ ಮಹಿಳಾ ಸಮಸ್ಯೆಗಳ ಬಗ್ಗೆ ನಿರ್ಣಯಗಳನ್ನು ತೆಗೆದುಕೊಳ್ಳುತ್ತಿದ್ದುದು ಪಕ್ಷ, ಆ ನಿರ್ಣಯಗಳನ್ನು ಜಾರಿಗೆ ತರುವುದೂ ಪಕ್ಷವೇ. OMMಗೆ ದಿಟ್ಟತನವಿಲ್ಲದ ಕಾರಣ ಮೇಲಿನಿಂದ ನಿರ್ಣಯಗಳನ್ನು ಹೇರಲ್ಪಡುವ ಕೇಂದ್ರೀಕೃತ ಪ್ರಜಾಪ್ರಭುತ್ವವನ್ನು ಜಾರಿಗೆ ತರುವುದೇ ಆಗಿತ್ತು. ಒಂದು ರೀತಿಯಲ್ಲಿ 'ಜಂಡರ್ ಬ್ಲೈಂಡ್' ವ್ಯಾನ್-ವ್ಯಾನ್‌ಗಾರ್ಡಿಜಂ ಜಾರಿಯಲ್ಲಿದ್ದವು. ಕೌಟುಂಬಿಕ ಕೆಲಸಗಳನ್ನು ಸಮಾಜ ಪರವಾಗಿ ಮಾಡಲು ಆ ಸ್ಥಿತಿಯಲ್ಲಿ ಸಾಧ್ಯವಿರಲಿಲ್ಲ. ಏಕೆಂದರೆ ಅದಕ್ಕೆ ಉತ್ಪಾದನಾ ಸಾಧನಗಳು ಬಹಳ ಅಭಿವೃದ್ಧಿ ಹೊಂದಬೇಕಾಗಿತ್ತು. PRELIMO ವಾಸ್ತವವಾಗಿ 'ಮನೆಗೆಲಸ'ವನ್ನು ದೃಷ್ಟಿಯಲ್ಲಿಟ್ಟುಕೊಂಡು ಚರ್ಚಿಸಲಿಲ್ಲ. PRELIMO, ಪುರುಷರು ಮಹಿಳೆಯರೊಡನೆ ಸಹಕರಿಸಬೇಕೆಂದು ಸಲಹೆಕೊಟ್ಟಿತು. ಆದರೆ ಅವರ ಕೆಲಸಗಳನ್ನು ಒಂದು ನಿಯಮವಾಗಿ ಮಾಡಬೇಕೆಂದು ಹೇಳಲಿಲ್ಲ. ಮಹಿಳೆಯರು ಹಾಗೆ ಒತ್ತಾಯಿಸಲು ಸಾಧ್ಯವಿಲ್ಲವೆಂದು ಹೇಳಿತು ಕೂಡ. ಮೊಜಾಂಬಿಕ್‌ನಲ್ಲಿ ಈಗಿದ್ದ ಸಂಕ್ಷೋಬೆಯು ಜಂಡರ್ ಸಂಬಂಧಗಳಲ್ಲಿ, ಉತ್ಪಾದನೆಯಲ್ಲಿ ಸ್ತ್ರೀಯರ ಪಾತ್ರಗಳಲ್ಲಿ ಬಂದ ಸಂಕ್ಷೋಭೆಯೇ ಎಂದು ಹೇಳಬೇಕಾಗಿದೆ.

**ದಕ್ಷಿಣ ಅಮೆರಿಕಾ :** ದಕ್ಷಿಣ ಅಮೆರಿಕಾದಲ್ಲಿನ ಪರಿಣಾಮಗಳು ಕೂಡ ಅಲ್ಲಿನ ಸ್ವಾತಂತ್ರ್ಯ

ಹೋರಾಟದೊಡನೆ, ಮುಖ್ಯವಾಗಿ ಅಲ್ಲಿನ ಕ್ರಾಂತಿಕಾರಕ ಹೋರಾಟಗಳೊಡನೆ ಬೆಸೆದು ಕೊಂಡಿದ್ದವು. ಕ್ಯೂಬಾ, ಬೊಲಿವಿಯಾ, ನಿಕರಾಗುವ ದೇಶಗಳಲ್ಲಿ ನಡೆದ ಮಹಿಳಾ ವಿಮೋಚನಾ ಹೋರಾಟಗಳು ಇಂದಿನ ಮಹಿಳಾ ವಿಮೋಚನಾ ಹೋರಾಟಗಳಿಗೆ ಪ್ರಯೋಜಕ ವಾಗುವ ಮುಖ್ಯವಾದ ಕೆಲವು ಪ್ರಶ್ನೆಗಳನ್ನು ಎತ್ತಿದವು.

**ಕ್ಯೂಬಾ :** ೧೮೯೮ ರಿಂದ ೧೯೦೨ ರವರೆಗೆ ಕ್ಯೂಬಾ ಅಮೆರಿಕಾ ಮಿಲಿಟರಿ ಆಡಳಿತದ ಕೈಕೆಳಗಿತ್ತು. ಅಮೆರಿಕಾ ಬಾರಿ ಮೊತ್ತದ ಹಣವನ್ನು ಕ್ಯೂಬಾದ ಸಕ್ಕರೆ ಕಾರ್ಖಾನೆಗಳಲ್ಲಿ ತೊಡಗಿಸಿ ತನ್ನ ಅಧಿಪತ್ಯವನ್ನು ಹೆಚ್ಚಿಸಿಕೊಂಡಿತು. ಅಮೆರಿಕಾದ ಸಹಾಯದೊಂದಿಗೆ ಅಧಿಕಾರಕ್ಕೆ ಬಂದ ಬ್ಯಾಪ್ಟಿಸ್ಟ್ ಸರಕಾರವೂ ಮಹಿಳೆಯರ ಪರಿಸ್ಥಿತಿಯನ್ನು ದುರ್ಭರ ಗೊಳಿಸಿತು. ೧೯೪೦ರ ದಶಕದಲ್ಲಿ ಫೀಡಲ್ ಕ್ಯಾಸ್ಟ್ರೋ ನಾಯಕತ್ವದಲ್ಲಿ ಹವಾನಾ ಯೂನಿವರ್ಸಿಟಿ ವಿದ್ಯಾರ್ಥಿಗಳು ಬ್ಯಾಪ್ಟಿಸ್ಟ್ ಆಡಳಿತಕ್ಕೆ ವಿರುದ್ಧವಾಗಿ ಗೆರಿಲ್ಲಾ ಹೋರಾಟ ವನ್ನು ಆರಂಭಿಸಿದರು. ಕೊನೆಗೆ ೧೯೫೮ರ ಡಿಸೆಂಬರ್ ೩೧ ರಂದು ಬ್ಯಾಪ್ಟಿಸ್ಟ್ ಆಡಳಿತವು ಕುಸಿದು ಹೋಯಿತು.

ದೇಶದಲ್ಲಿನ ನಿರ್ಬಂಧ ವಾತಾವರಣದಲ್ಲೂ ಹೋರಾಟ ವಿಧಾನದಲ್ಲಿ ಕ್ಯೂಬಾದ ಮಹಿಳೆಯರು ಒಂದು ಪ್ರಬಲ ಶಕ್ತಿಯಾಗಿ ಬೆಳೆದರು. ಕ್ಯೂಬಾ ಹೋರಾಟವು ವಿಭಿನ್ನ ಸ್ಥಿತಿ, ರೂಪಗಳಲ್ಲಿ ನಡೆಯಿತು. ೧೯೬೦ರಲ್ಲಿ ನಿರ್ಮಿಸಿದ 'ಲೂಸಿಯಾನ್' ಎನ್ನುವ ಚಲನಚಿತ್ರ ಮೂರು ತಲೆಮಾರಿನ ಮಹಿಳಾ ಹೋರಾಟವನ್ನು ನಮಗೆ ತಿಳಿಸಿಕೊಡುತ್ತದೆ. ಮೊದಲ ತಲೆಮಾರಿಗೆ ಸೇರಿದ ಲೂಸಿಯಾಳನ್ನು ಆಕೆಯ ಸ್ಪಾನಿಷ್ ಪ್ರೇಮಿಯು ಮೋಸಗೊಳಿಸುತ್ತಾನೆ. ಆಕೆ ಪ್ರೇಮಯುದ್ಧವನ್ನು ಮಾಡಿ ಸುಖಾಂತವಾಗಿ ತನ್ನ ಜೀವನವನ್ನು ಮುಗಿಸುತ್ತಾಳೆ. ೧೯೩೦ರಲ್ಲಿ ಎರಡನೇ ಲೂಸಿಯಾ ಮಚಡೊ (Machado) ನಿರಂಕುಶತ್ವಕ್ಕೆ ವಿರುದ್ಧವಾಗಿ ಚಳುವಳಿಯಲ್ಲಿ ಪಾಲ್ಗೊಂಡಳು. ಆದರೆ ಬ್ಯಾಪ್ಟಿಸ್ಟ್ ನಿಯಂತ್ರಣವು ಬಂದ ಮೇಲೆ ಆಕೆಯ ಪ್ರೇಮಿಯು ಕೊಲ್ಲಲ್ಪಡುತ್ತಾನೆ. ಆ ಸ್ಥಿತಿಯಲ್ಲಿ ಆಕೆಯ ತಲೆಮಾರಿನ ಸ್ನೇಹಿತರೆಲ್ಲಾ ಕುಟುಂಬ ಜೀವನದಲ್ಲಿ ನೆಲೆಗೊಂಡರೆ, ಆಕೆಯು ದೇಶಾಂತರ ಅಲೆಯುತ್ತಾಳೆ. ಮೂರನೇ ಲೂಸಿಯಾ ಗ್ರಾಮೀಣ ಪ್ರದೇಶದಲ್ಲಿ ಬದುಕುವ ಒಬ್ಬ ಕಪ್ಪು ಜನಾಂಗದ ಮಹಿಳೆ. ಆಕೆಯು ಲಾರೀ ಚಾಲಕನಾಗಿ ಕೆಲಸ ಮಾಡುತ್ತಿದ್ದ ಒಬ್ಬ ಬಿಳಿಯ ಜನಾಂಗದ ವ್ಯಕ್ತಿಯನ್ನು ಮದುವೆಯಾಗುತ್ತಾಳೆ. ಆದರೆ ಆಕೆಯು ಅಂದಿನ ಪರಿಸ್ಥಿತಿಗೆ ಸ್ವಲ್ಪಮಟ್ಟಿಗೆ ಬದಲಾಗುತ್ತದೆ. ಆಕೆಗೆ ಪ್ರೀತಿಸುವ ಸ್ವಾತಂತ್ರ್ಯವಿದೆ. ಆಕೆ, ಆಕೆಯ ಗಂಡ ಕಾಲಾತೀತ ಆನಂದದ ಬದುಕನ್ನು ಕಳೆಯುತ್ತಾರೆ. ಆದರೆ ಆಕೆ ತನ್ನ ಲೈಂಗಿಕ ಬದುಕಿನಲ್ಲಿ ವೈರುಧ್ಯಗಳನ್ನೆದುರಿಸುತ್ತಾಳೆ. ಆಕೆಯ ಗಂಡ ಆಕೆಯ ಬಗ್ಗೆ ಬಹಳ ಅನುಮಾನವನ್ನು ಪಡುತ್ತಾನೆ. ಆಕೆಯ ಸ್ವಾತಂತ್ರ್ಯಕ್ಕೆ ಅಡ್ಡಿಯಾಗುತ್ತಾನೆ. ಆಕೆಯನ್ನು ಮನೆಯಲ್ಲಿ ಬೀಗ ಹಾಕಿ ಬಂಧಿಸುತ್ತಾನೆ. ಆಕೆಯು ೧೪ ವರ್ಷ ವಯಸ್ಸಿನ ಒಬ್ಬ ಹುಡುಗನ ಬಳಿ ಓದು ಬರಹವನ್ನು ಕಲಿಯುವೆನೆಂದರೂ ಅವನು ಒಪ್ಪುವುದಿಲ್ಲ. ಆಕೆಯು ತಾನೊಬ್ಬ ಗುಲಾಮಳಲ್ಲವೆಂದು ಪತ್ರದಲ್ಲಿ ಬರೆದು ಹೊರಟು

ಹೋಗುತ್ತಾಳೆ. ಆದರೆ ಅವರಿಬ್ಬರಿಗಿದ್ದ ಪರಸ್ಪರ ಪ್ರೇಮದ ಕಾರಣ ಆಕೆ ಮರಳಿ ಹಿಂದೆ ಬರುತ್ತಾಳೆ. ಆಕೆ ನಾನು ನಿನ್ನನ್ನು, ಸ್ವಾತಂತ್ರ್ಯವನ್ನೂ ಎರಡನ್ನೂ ಬಯಸುತ್ತೇನೆ ಎನ್ನುತ್ತಾಳೆ. ಅವರು ಪುನಃ ನೆಮ್ಮದಿಯಿಂದ ಬದುಕಲಾರಂಭಿಸುತ್ತಾರೆ. ಅವರಿಬ್ಬರನ್ನು ಗಮನಿಸುತ್ತಿದ್ದ ಒಂದು ಚಿಕ್ಕ ಮಗು ಇದೆಲ್ಲವನ್ನು ನೋಡಿ ನಗುತ್ತದೆ. ಈ ರೀತಿಯಾಗಿ ಈ ಚಿತ್ರವು ಕ್ರಾಂತಿಯ ನಂತರದ ಮಹಿಳೆಯರ ಪರಿಸ್ಥಿತಿ, ಮಹಿಳೆಯರಿಗಿದ್ದ ಅತಿ ಕಡಿಮೆ ಅವಕಾಶಗಳನ್ನು ಕಣ್ಣಿಗೆ ಕಟ್ಟುವಂತೆ ತೋರಿಸುತ್ತದೆ. ಏನೇ ಆದರೂ ಮೂರನೇ ಲೂಸಿಯಾ ಹೋರಾಟವನ್ನು ಊಹಿಸಲಾಗದಂತಹ ಒಂದು ಸಾಮಾಜಿಕ ಸ್ಥಿತಿಯನ್ನು ನೋಡಬಲ್ಲವಳಾಗುತ್ತಾಳೆ.

ಕ್ರಾಂತಿಯ ಮೊದಲು ಕ್ಯೂಬಾದಲ್ಲಿ ಅರೆಫ್ಯೂಡಲ್ ವ್ಯವಸ್ಥೆ, ಮಿಲಿಟರಿ ಸರಕಾರ ಗಳಿದ್ದವು. ಆ ಸ್ಥಿತಿಯಲ್ಲಿ ಮಹಿಳೆಯರ ಮೇಲಿನ ಶೋಷಣೆ ಮುಖ್ಯವಾಗಿ ಕಾರ್ಮಿಕ ಮಹಿಳೆಯರ ತುಳಿತ ಅತಿದಾರುಣವಾಗಿತ್ತು. ಶ್ರೇಣೀಕರಣವಿರುವ ಆ ಸಮಾಜದಲ್ಲಿ ಜನಾಂಗೀಯ ಬಣ್ಣ ವ್ಯಕ್ತಿಗಳ ಅಂತಸ್ತನ್ನು ನಿರ್ಣಯಿಸುವುದಾಗಿತ್ತು. ಹೆಯಿಟನ್, ಜಮೈಕನ್ನರು ಸಮಾಜದಲ್ಲಿನ ಹೀನಸ್ಥಿತಿಯಲ್ಲಿದ್ದವರು. ವಸಾಹತುವಾದ, ಕ್ಯಾಥಲಿಸಂ, ಗುಲಾಮಗಿರಿ ಅಲ್ಲಿ ಪ್ರತ್ಯೇಕ ಪಿತೃಪ್ರಧಾನ ವ್ಯವಸ್ಥೆಯನ್ನು ಏರ್ಪಡಿಸಿತು. ಅಲ್ಲಿ ವೃದ್ಧ ಮಹಿಳೆಯರು ಕುಟುಂಬ ಜೀವನವನ್ನು ಕಟ್ಟುಪಾಡಿನಲ್ಲಿ ಇಡುತ್ತಿದ್ದರು. 'ನೋಬೆಲ್ ಮಾತೃತ್ವ' ಕಲ್ಟ್ ಎಂದರೆ ಒಂದು ಪ್ರತ್ಯೇಕ ಪದ್ಧತಿಯಲ್ಲಿ ಸ್ತ್ರೀ ತತ್ವವನ್ನು ಬೇಕೆಂದು ಬಯಸುವುದೇ ಆಗಿತ್ತು. ಅದು ಮಹಿಳೆಯರ ಮೇಲೆ ಪವಿತ್ರತೆ, ಕನ್ಯೆತನ ಎನ್ನುವ ಭಾರವಾದ ನೀತಿ ಸೂತ್ರಗಳನ್ನು ಹೊರಿಸುತ್ತಿತ್ತು.

೧೮೬೦ರಲ್ಲಿ ಸ್ಪೈಯಿನ್‌ನ ವಸಾಹತುವಾದಕ್ಕೆ ವಿರುದ್ಧವಾಗಿ ಹೋರಾಟವು ಪ್ರಾರಂಭವಾದಾಗ ಮಹಿಳೆಯರು ತಮ್ಮ ಗಂಡಂದಿರೊಡನೆ ಬಹಳ ಧೈರ್ಯವಾಗಿ ಅದರಲ್ಲಿ ಪಾಲ್ಗೊಂಡರು. ೧೮೬೦ರ ದಶಕದಲ್ಲಿ ರೋಜಾ ಕ್ಯಾಸ್ಟೆಲ್ಲಿನೋ, ಅನಾಬೆಟಾನ್‌ಕೋರ್ಟ್ ಎನ್ನುವ ಇಬ್ಬರು ಮಹಿಳೆಯರು ಮುಂದೆ ನಿಂತು ಚಳುವಳಿಗಳನ್ನು ನಡೆಸಿದರು. ೧೯೨೦ರ ದಶಕದಲ್ಲಿ ಮತದಾನದ ಹಕ್ಕು ಚಳುವಳಿಯು ಪ್ರಾರಂಭವಾಯಿತು. ೧೯೩೪ರಲ್ಲಿ ಮಹಿಳೆಯರಿಗೆ ಮತದಾನದ ಹಕ್ಕು ಲಭಿಸಿತು. ಇದು ಕಾನೂನುಬದ್ಧವಾದ ಸಮಾನತೆಯನ್ನು, ಆರ್ಥಿಕ, ಸಾಂಸ್ಕೃತಿಕ ಪರಾವಲಂಬನೆಯನ್ನು ಒಂದರ ಪಕ್ಕದಲ್ಲೊಂದು ಇಟ್ಟು ಹೋಲಿಸಿ ತೋರಿಸಿತು. ನಂತರ ಬ್ಯಾಪ್ಟಿಸ್ಟ್ ಪ್ರಭುತ್ವಕ್ಕೆ ವಿರುದ್ಧವಾಗಿ ನಡೆದ ಹೋರಾಟದಲ್ಲಿ ಮಹಿಳೆಯರು ಸಿಯೆರಾಮಕಾಶ್ಟೋ ಪ್ರಾಂತ್ಯದಲ್ಲಿನ ಹೋರಾಟದಲ್ಲಿ ಭಾಗವಹಿಸಿದರು. ಅಯಿಡಾಸಾಂತಾ ಮೇರಿಯಾ ಎಂಬ ಹೋರಾಟಗಾರ್ತಿಯು ೧೯೫೩ರಲ್ಲಿ ಮೊನ್‌ಕಾಡಾ ಟ್ಯಾರೆಕ್ಸ್‌ನ ಮೇಲೆ ನಡೆದ ದಾಳಿಯಲ್ಲಿ ಪಾಲ್ಗೊಂಡಳು. ಆ ಸಂದರ್ಭದಲ್ಲಿ ಆಕೆಯನ್ನು ಬಂಧಿಸಿ ವಿಪರೀತ ಚಿತ್ರಹಿಂಸೆಗೆ ಗುರಿ ಮಾಡಿದರೂ ಆಕೆಯು ಭೂಗತಸ್ಥಾನಗಳನ್ನು ಕುರಿತು ಒಂದು ಮಾತನ್ನೂ ಪೋಲಿಸರಿಗೆ ಹೇಳಲಿಲ್ಲ. ಈ ಹೋರಾಟ ವಿಧಾನದಲ್ಲಿಒಂದು ಕೆಂಪು ಬೆಟಾಲಿಯನ್ನನ್ನು ಸಿದ್ಧಗೊಳಿಸಿದರು. ಆದರೆ ಗೆರಿಲ್ಲಾ ಹೋರಾಟದಲ್ಲಿ ಮಹಿಳೆಯರಿಗೆ

ಪ್ರೋತ್ಸಾಹವು ದೊರೆಯಲಿಲ್ಲ. ಅವರಿಗೆ ಸಾಂಪ್ರದಾಯಿಕ ಕೆಲಸಗಳಾದ ಅಡಿಗೆ ಮಾಡುವುದು, ಗಾಯಗೊಂಡವರನ್ನು ನೋಡಿಕೊಳ್ಳುವಂತಹವು ಮಾತ್ರವೇ ಒಪ್ಪಿಸಿದರು. ಗೆರಿಲ್ಲಾ ಪ್ರಜಾಪ್ರಭುತ್ವದಲ್ಲಿಯೂ ಮಹಿಳೆಯರ ಮೇಲೆ ಸಂಪೂರ್ಣ ಪುರುಷ ಪ್ರಧಾನ್ಯತೆಯು ಇತ್ತು. ಚೇಗೆವಾರಾ ಹೇಳಿದಂತೆ ಪುರುಷರಿಗೆ ಮಹಿಳೆಯ ಬಗ್ಗೆ ಅಭಿಮಾನ, ಕೋಪ ಎರಡೂ ಕೂಡಿಕೊಂಡಿತ್ತು. ತಮ್ಮ ಶೌರ್ಯವನ್ನು ನಿರೂಪಿಸಲು ಮಹಿಳೆಯರು ಎರಡರಷ್ಟು ಕೆಲಸಗಳನ್ನು ಮಾಡಬೇಕಾಗಿತ್ತು. ಆದರೆ ಪುರುಷ ಪ್ರಪಂಚದಲ್ಲಿ ಲುಡಿಯಾ, ಕ್ಲಾಡ್‌ಮಿರಾ ಎನ್ನುವ ಮಹಿಳೆಯರು ಧೈರ್ಯ ಸಾಹಸಗಳನ್ನು ನಿರೂಪಿಸಿಕೊಂಡು ವಿಜಯವನ್ನು ಸಾಧಿಸಿದ ಮಹಿಳೆಯರಾಗಿ ಹೆಸರಾದರು.

೧೯೬೦ರಲ್ಲಿ ಕ್ಯೂಬಾ ಮಹಿಳಾ ಸಮಾವೇಶವು ಏರ್ಪಟ್ಟಿತು. ಅದರ ಕರ್ತವ್ಯಗಳು ಮಹಿಳೆಯರನ್ನು ಸಾಕ್ಷರರನ್ನಾಗಿ ಮಾಡುವುದು, ಉತ್ಪಾದನಾ ಕಾರ್ಯಗಳಲ್ಲಿ ಭಾಗವಹಿಸುವಂತೆ ಮಾಡುವುದು, ಸಾಮಾಜಿಕ, ರಾಜಕೀಯ ಬದುಕಿನಲ್ಲಿಯೂ ಪಾಲ್ಗೊಳ್ಳುವಂತೆ ಮಾಡುವುದು. ಈ ವಿಧಾನದಲ್ಲಿ ಅವರು ಕ್ರಾಂತಿಕಾರಿ ಸಾಮರ್ಥ್ಯವನ್ನು ಕೂಡಿಸಿಕೊಳ್ಳುವಂತೆ ಸಿದ್ಧಗೊಳಿಸುವುದು ಸಹ ಒಂದು ಕರ್ತವ್ಯವಾಗಿತ್ತು. ಮಹಿಳೆಯರಿಗೆ ಸೈನಿಕ ಶಿಕ್ಷಣ, ಸಣ್ಣಕೈಗಾರಿಕೆಗಳಲ್ಲಿ, ಆಹಾರೋತ್ಪಾದನೆಗಳಲ್ಲಿ ಕೆಲಸ ಮಾಡುವುದನ್ನು ಕಲಿಸುತ್ತಿದ್ದ ಶ್ರಮವಿಭಜನೆಯು ಪುರಾತನ ಪದ್ಧತಿಯಲ್ಲೇ ಇತ್ತು. ಉದಾಹರಣೆಗೆ ಕಬ್ಬನ್ನು ಕಡಿಯುವ ಕೆಲಸವನ್ನು ಮಹಿಳೆಯರು ಮಾತ್ರವೇ ಮಾಡುತ್ತಿದ್ದರು. ಆದರೆ ಕ್ಯೂಬಾ ಮಹಿಳೆಯರು ಈ ಕೆಲಸಗಳನ್ನು ಕುರಿತು ಅಷ್ಟಾಗಿ ಗಮನವಿಟ್ಟುಕೊಳ್ಳುತ್ತಿರಲಿಲ್ಲವೆಂಬ ಭಾವನೆ ಇತ್ತು. ಅಲ್ಲಿನ ಮಹಿಳಾ ಸಮಾವೇಶವು ಈ ಸಾಂಪ್ರದಾಯಿಕ ಕೆಲಸಗಳಿಗೆ ವಿರುದ್ಧವಾಗಿ ಸ್ವಲ್ಪ ಪ್ರಚಾರವನ್ನು ಮಾಡಿತು. ಈಗ ಬಹಳ ಮಂದಿ ಮಹಿಳೆಯರು ಮೆಕಾನಿಕ್‌ಗಳಾಗಿ, ಟ್ರ್ಯಾಕ್ಟರ್ ಡ್ರೈವರ್‌ಗಳಾಗಿ, ಇಂಜಿನಿಯರ್‌ಗಳಾಗಿ, ಸಿಟೀಪ್ಲಾನರ್‌ಗಳಾಗಿ, ಪ್ರಕಾಶಕರಾಗಿ ಕೆಲಸ ಮಾಡುತ್ತಿದ್ದಾರೆ. ಪ್ರಧಾನ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಮಹಿಳೆಯರು ತಮ್ಮ ಕುಟುಂಬ ದಿಂದ, ಗಂಡಂದಿರಿಂದ ವಿರೋಧವನ್ನು ಎದುರಿಸುತ್ತಿದ್ದಾಗ ಆ ವಿರೋಧವು ಮುಕ್ತವಾಗಿ ಬರುವುದಿಲ್ಲ. ಮಾರ್ಕ್ಸ್‌ವಾದಿಗಳು ಮಹಿಳಾ ವಿಮೋಚನಾ ಸಮಸ್ಯೆಯನ್ನು ಅರ್ಥಮಾಡಿ ಕೊಂಡ ಮೇರೆಗೆ ಅವರ ಆರ್ಥಿಕಾಭಿವೃದ್ಧಿ ನಡೆದ ಪರಿಮಿತಿಯಲ್ಲಿ ಮಹಿಳಾ ಸ್ವಾತಂತ್ರ್ಯ ವನ್ನು ಅಂಗೀಕರಿಸುತ್ತಾರೆ. ಆದರೆ ಮಹಿಳಾ ವಿಮೋಚನೆ ಬಗ್ಗೆ ಒಂದು ಸ್ಪಷ್ಟವಾದ ಬದ್ಧತೆ ನಮಗೆ ಕಂಡುಬರುತ್ತದೆ. ಫೀಡಲ್‌ಕ್ಯಾಸ್ಟ್ರೋನ ಅಭಿಪ್ರಾಯದ ಪ್ರಕಾರ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಮಹಿಳೆಯರ ಶೋಷಣೆಯನ್ನು, ಜನಾಂಗದ ಶೋಷಣೆ ಯನ್ನು ಕೊನೆಗೊಳಿಸುವುದು ಸಾಧ್ಯವಲ್ಲ. ಆದರೆ ಸಮಾಜವಾದೀ ವ್ಯವಸ್ಥೆಯೂ ಇವುಗಳನ್ನು ತನಗೆ ತಾನೇ ಸಾಧಿಸಲಾಗದು. ಅದು ಕ್ರಾಂತಿಯಿಂದ ಮಾತ್ರವೇ ಸಾಧ್ಯವಾಗುತ್ತದೆ.

ಕ್ರಾಂತಿ ಪರಿಸ್ಥಿತಿಯ ಅನುಕೂಲವಾಗಿ ಸಾಮಾನ್ಯ ಅಗತ್ಯಗಳನ್ನು ಈಡೇರಿಸಿಕೊಳ್ಳಲು ಸೌಲಭ್ಯಗಳನ್ನು ಒದಗಿಸಿಕೊಳ್ಳುವುದು ಕ್ಯೂಬಾದಲ್ಲಿ ನಡೆಯಿತು. ಮಹಿಳೆಯರು ಉತ್ಪಾದನೆ

ಯಲ್ಲಿ ಪಾಲ್ಗೊಳ್ಳಲು ಸಾಧ್ಯವಾಗಿ ಕೆಲವು ಸೌಕರ್ಯಗಳು ಏರ್ಪಟ್ಟವು. ಆದರೆ ಹೊಸ ಕುಟುಂಬವನ್ನು ಸೃಷ್ಟಿಸಲು ಪ್ರಯತ್ನಗಳು ನಡೆಯಲಿಲ್ಲ. ಮನೆಗೆಲಸವನ್ನು ಸಮಾನ ವಾಗಿ ಹಂಚಿಕೊಳ್ಳುವ ಪದ್ಧತಿಯನ್ನು ಇಲ್ಲಿಯೂ ತಳ್ಳಿಹಾಕಿದರು. ಎಷ್ಟು ಬದಲಾವಣೆ ಗಳುಂಟಾದರೂ ಕ್ಯೂಬಾದಲ್ಲಿ ಮನೆಗೆಲಸಗಳನ್ನು ಮಹಿಳೆಯರೇ ಮಾಡಿಕೊಳ್ಳುತ್ತಾರೆ. ಎಲ್ಲಕ್ಕಿಂತಲೂ ಮುಖ್ಯವಾದುದು ಮಹಿಳೆಯರ ಲೈಂಗಿಕ ಸಮಸ್ಯೆ. ಈ ವಿಷಯದಲ್ಲಿ ಇಲ್ಲಿಯೂ ಮಾರ್ಕ್ಸಿಸ್ಟ್ ಸಿದ್ಧಾಂತ ಈ ಸಮಸ್ಯೆಯನ್ನು ತನ್ನ ಸಾಮರ್ಥ್ಯದ ಅಂಚುಗಳಿಗೆ ತಾಕಿಸಿದಂತೆ ಇಲ್ಲ. ಕುಟುಂಬ ನಿಯಂತ್ರಣ ಸಾಧನಗಳು ಸುಲಭವಾಗಿ ಬಳಕೆಯಲ್ಲಿದ್ದರೂ ಪಕ್ಷವು ಅದನ್ನು ಕುರಿತು ಮಹಿಳೆಯರಿಗೆ ಅಷ್ಟು ಸುಲಭವಾಗಿ ತಿಳಿಸುವುದಿಲ್ಲ. ಏಕೆಂದರೆ ಬೆಳೆಯುತ್ತಿದ್ದ ಜನಸಂಖ್ಯೆಯನ್ನು ತಡೆಯಬೇಕೋ ಬೇಡವೋ ಎನ್ನುವುದು ಒಂದು ರಾಜಕೀಯ ಸಮಸ್ಯೆಯಾಗಿತ್ತು. ಅಷ್ಟೇ ಅಲ್ಲದೆ ಹಳೆಯ ಸಂಪ್ರದಾಯಗಳು ಕುಟುಂಬ ನಿಯಂತ್ರಣಕ್ಕೆ ವಿರುದ್ಧವಾಗಿದ್ದುದರಿಂದ ಅದನ್ನು ತಲೆಕೆಳಗು ಮಾಡುವುದು ಅವರಿಗಿಷ್ಟ ವಾಗಿರಲಿಲ್ಲ. ಕ್ಯೂಬಾದಲ್ಲಿ ಮಕ್ಕಳನ್ನು ಹೆರುವುದನ್ನು ಪುರುಷತ್ವಕ್ಕೆ ನಾಂದಿಯಾಗಿ ನೋಡು ತ್ತಿದ್ದರು. ಮಹಿಳೆಯರು ತಮ್ಮ ಲೈಂಗಿಕತೆಯನ್ನು ಕುರಿತು ತಾವೇ ನಿರ್ಣಯಿಸಿಕೊಳ್ಳಲು ಅಂಗೀಕರಿಸುತ್ತಲೂ ಇರಲಿಲ್ಲ. ಈ ವಿಷಯಗಳ ಬಗ್ಗೆ ಇದ್ದ ದೃಷ್ಟಿಕೋನಗಳು ವೃದ್ಧರಿಂದ ಯುವಕರವರೆಗೂ ಕೆಲವ್ಯತ್ಯಾಸಗಳಿದ್ದರೂ ಒಂದೇ ಬಗೆಯಾಗಿದ್ದವು. "ಕಮ್ಯೂನಿಸ್ಟ್ ಫ್ರೀಲವ್" ವಿರುದ್ಧವಾಗಿ ನಡೆದ ಪ್ರಚಾರದಿಂದ ೧೯೬೬ರಲ್ಲಿ ಬಾಲಕ ಬಾಲಕಿಯರಿಗೆ ಬೇರೆ ಬೇರೆ ಶಾಲೆಗಳನ್ನು ಆರಂಭಿಸಲಾಯಿತು. ಮುಕ್ತತೆ (Openness)ಗೆ ಸಂಪೂರ್ಣ ಬೆಂಬಲ ಕೊಡುವ ಕ್ಯಾಸ್ಟ್ರೋ ದೃಷ್ಟಿಯಲ್ಲಿ ಮುಕ್ತ ಪ್ರೀತಿಗೆ ಹಿಂದಿನ ಪುರುಷರ ಅಭ್ಯಾಸಗಳನ್ನು ಪುನರಾವರ್ತನೆಗೊಳಿಸುವುದನ್ನು ಬಿಟ್ಟು ಬೇರೇನೂ ಆಗಿರಲಿಲ್ಲ. ಅಷ್ಟು ಕ್ರಾಂತಿಕಾರಕವಾದ ಕ್ಯೂಬಾದ ಪುರುಷರು ಸ್ತ್ರೀಯರಿಗೂ ಲೈಂಗಿಕ ಬಯಕೆಗಳಿರುತ್ತವೆ ಎನ್ನುವ ವಿಷಯಕ್ಕೆ ಬರುವವರೆಗೂ ಸಂರಕ್ಷಕರಾಗಿಯೇ ಆಲೋಚಿಸಿದರು. ಮಹಿಳೆಯರೇನೋ ಪುರುಷರಿಗೊಪ್ಪದ ಕೆಲಸಗಳನ್ನು ಮಾಡಬಾರದೆನ್ನುವ ಸ್ಥಿತಿಯಲ್ಲೇ ಇದ್ದರು. ಅಂದರೆ ಮಹಿಳೆಯ ಸ್ಥಾನ, ಸ್ತ್ರೀ ಪುರುಷ ಸಂಬಂಧಗಳಲ್ಲಿ ಇಲ್ಲಿಯೂ ಎಷ್ಟೋ ಗೋಜಲುಗಳಿದ್ದವು.

**ನಿಕರಾಗುವ :** ಇಲ್ಲಿನ ಸರ್ವಾಧಿಕಾರಿ ಅನಸ್ತಾಪಿಯಾ ಸೊಮಿಜೋ ಲ್ಯಾಟಿನ್ ಅಮೆರಿಕಾ ಸರ್ವಾಧಿಕಾರಿಗಳಿಗಿಂತಲೂ ನಿರಂಕುಶತ್ವ, ನಿರ್ಬಂಧಗಳಿಂದ ಕೂಡಿದ ಆಡಳಿತ ದೇಶವನ್ನಾಗಿ ಉಳಿಸಿದ. ಅರ್ಧ ಶತಮಾನದ ಹೋರಾಟದ ನಂತರ ಸಾಂಡಿನಿಸ್ತಾ ರಾಷ್ಟ್ರೀಯ ವಿಮೋಚನಾ ದಳ (FSLN) ರಚನೆಯಾಗಿ, ೧೯೭೯ರಲ್ಲಿ ಸೊಮೋಗಾ ಸರಕಾರವನ್ನು ತಳ್ಳಿಹಾಕಿ ಪ್ರಚಂಡ ಗೆಲುವನ್ನು ಸಾಧಿಸಿತು.

ನಿಕರಾಗುವ ಹೋರಾಟ ಹೆಚ್ಚಾಗಿ ಮಹಿಳೆ, ಯುವಕರಿಂದ ನಡೆಯಿತು. ಸೊಮೋಗಾ ಕುಟುಂಬ ಅಧಿಕಾರದಲ್ಲಿದ್ದಾಗ ಪ್ರಜೆಗಳಿಗೆ ಕನಿಷ್ಟ ಅಗತ್ಯಗಳು ಕೂಡಾ ಈಡೇರದೆ, ಬದುಕುವ ಪರಿಸ್ಥಿತಿಯೂ ಸರಿಯಿರಲಿಲ್ಲ. ಸೊಮೋಗಾ ಕುಟುಂಬ ಒಟ್ಟು ಆರ್ಥಿಕ ವ್ಯವಸ್ಥೆಯಲ್ಲಿ

ಶೇಕಡಾ ೪೦ರಷ್ಟು ತನ್ನ ಅಧೀನದಲ್ಲಿಟ್ಟುಕೊಳ್ಳುತ್ತಿತ್ತು. ದೇಶದಲ್ಲಿನ ಶೇಕಡಾ ೩೦ರಷ್ಟು ವ್ಯವಸಾಯ ಭೂಮಿ ಆ ಒಂದು ಕುಟುಂಬದ ಕೈಯಲ್ಲಿಯೇ ಇತ್ತು. ಪರಿಣಾಮವಾಗಿ ದೇಶದಲ್ಲಿನ ಶೇಕಡಾವಾರು ಹೆಚ್ಚು ಪುರುಷರು ಬದುಕುವುದಕ್ಕಾಗಿ ತಮ್ಮ ಮಹಿಳೆಯರನ್ನು, ಮಕ್ಕಳನ್ನು ಬಿಟ್ಟು, ಜೀವನಾಧಾರವನ್ನು ಹುಡುಕುತ್ತಾ ಹೋಗುತ್ತಿದ್ದರು. ಈ ಪರಿಸ್ಥಿತಿ ಮಹಿಳೆಯರನ್ನು ಸಿಕ್ಕಿದ ಕೆಲಸವನ್ನು ಮಾಡಿ, ಕುಟುಂಬ ಪೋಷಣೆ ಮಾಡಿಕೊಳ್ಳುವ ಸ್ಥಿತಿಗೆ ತಳ್ಳಿತು. ಹೆಚ್ಚು ಮಂದಿ ಮಹಿಳೆಯರು ವೇಶ್ಯೆಯರಾಗಿ ಮಾರ್ಪಟ್ಟರು. ೧೯೫೦ ರಿಂದ ೧೯೭೦ ರವರೆಗೆ ಕೆಲಸ ಮಾಡುವ ಮಹಿಳೆಯರ ಶೇಕಡಾವಾರು ೧೪ ರಿಂದ ೨೧.೯ಕ್ಕೆ ಹೆಚ್ಚಿತು. ೧೯೭೭ರವರೆಗೆ ಅದು ಶೇಕಡಾ ೨೮.೭ಕ್ಕೆ ಬೆಳೆಯಿತು. ಅಲ್ಲಿ ಮಹಿಳೆಯರು ಹೋರಾಟದಲ್ಲಿ ಹೆಚ್ಚಾಗಿ ಪಾಲ್ಗೊಳ್ಳಲು ಒಂದು ಮುಖ್ಯವಾದ ಕಾರಣ ಅವರು ಅಲ್ಲಿನ ಆರ್ಥಿಕ ಸ್ಥಿತಿಗತಿಗಳಲ್ಲಿ ಒಳಗಾಗಿದ್ದುದರಿಂದಲೇ. ಅಲ್ಲಿನ ಮಹಿಳೆಯರು ಅವರ ಕುಟುಂಬಗಳ ಯಜಮಾನರಾಗಿದ್ದು ಆರ್ಥಿಕವಾಗಿ, ಸಿದ್ಧಾಂತ ಪರವಾಗಿ ಇತರೆಡೆ ನಾಯಕತ್ವವನ್ನು ವಹಿಸುತ್ತಿದ್ದರು. ಕಾರ್ಮಿಕ ಕುಟುಂಬಗಳಲ್ಲಿ ಈ ಪರಿಸ್ಥಿತಿ ಮತ್ತಷ್ಟು ಹೆಚ್ಚಾಗಿರುತ್ತಿತ್ತು. ಆದರೆ ಶೋಷಣೆ ಎಲ್ಲಾ ವರ್ಗಗಳಲ್ಲಿ ಇರುತ್ತಿತ್ತು. ಆದ್ದರಿಂದ ಹೋರಾಟದಲ್ಲಿ ಕಾರ್ಮಿಕೇತರ ಮಹಿಳೆಯರೂ ಕೂಡಿ ಬರುತ್ತಿದ್ದರು. ಆದರೆ ಸಾಂಪ್ರದಾಯಿಕ ಕಮ್ಯೂನಿಸ್ಟ್ ಪಕ್ಷಗಳು ಮಹಿಳೆಯರನ್ನು ಸಂಘಟಿಸುವುದರಲ್ಲಿ ಅಷ್ಟೇನೂ ಗೆಲುವನ್ನು ಹೊಂದಲಿಲ್ಲ. ಏಕೆಂದರೆ ಪ್ರಜಾ ಸಂಘಗಳಿಗಿಂತ ಅವು ಬಹಳ ಬಿಗಿ ಭದ್ರತೆಯ ರಚನೆಯನ್ನು ಹೊಂದಿದ್ದವು. ಆದರೂ ಮಹಿಳೆಯರು ತಮ್ಮನ್ನು ತಾವು ಸಂಘಟಿಸಿಕೊಂಡು ಪ್ರತಿಯೊಂದು ಕಾರ್ಯಕ್ರಮದಲ್ಲೂ ಚುರುಕಾಗಿ ಪಾಲ್ಗೊಳ್ಳುತ್ತಿದ್ದರು. ತಮ್ಮ ಮೇಲಿರುವ ಶೋಷಣೆಯನ್ನು ಎದುರಿಸಲು ವಿವಿಧ ರೀತಿಗಳಲ್ಲಿ ಪ್ರಯತ್ನಿಸುತ್ತಿದ್ದರು. ಅವರು ಮಹಿಳೆಯರಿಗಾಗಿ ವಿಶಾಲ ವೇದಿಕೆಗಳನ್ನು ಸ್ಥಾಪಿಸಿದರು. ಕೊನೆಯ ಸ್ಥಿತಿಯವರೆಗೆ ಸಾಂಡಿನಿಸ್ತಾ ಸೈನ್ಯ ಶೇಕಡಾ ೩೦ರಷ್ಟು ಮುಖ್ಯವಾದ ಪದವಿಗಳು ಸ್ತ್ರೀಯರ ಕೈಯಲ್ಲಿದ್ದವು. ಅವರು ಇಡೀ ಬೆಟಾಲಿಯನ್ನುಗಳನ್ನೇ ಆದೇಶಿಸುತ್ತಿದ್ದರು. ಬಹಳ ಮಹಿಳೆಯರ ರಾಜಕೀಯ ಜೀವನವು ೧೯೭೨ರ ಭೂಕಂಪದಿಂದ ಆರಂಭವಾಯಿತು. ಈ ಭೂಕಂಪದ ಪ್ರಭಾವವು ಕುಟುಂಬದ ಜವಾಬ್ದಾರಿ ಹೊತ್ತವರು, ತಾಯಂದಿರಾದ ಮಹಿಳೆಯರ ಮೇಲೆಯೇ ಹೆಚ್ಚಾಗಿ ಬಿತ್ತು. ಮಾತೃತ್ವವು ಒಂದು ಕ್ರಾಂತಿಕಾರಕ ಸ್ಪರ್ಧೆಯನ್ನು ಗಳಿಸಿಕೊಂಡಿತು.

ಇಲ್ಲಿನ ಹೋರಾಟವು ಮಹಿಳೆಯರ ಅಸ್ತಿತ್ವವನ್ನು ರದ್ದು ಮಾಡದೇ ಹೋದರೂ, ಅವರ ಪ್ರತ್ಯೇಕ ಅಗತ್ಯಗಳನ್ನು ಗಮನಿಸದೆ ಸೊಮೊಜಾ ಸರಕಾರವನ್ನು ತಳ್ಳಿಹಾಕುವ ವಿಶಾಲ ದೃಷ್ಟಿಕೋನದ ಮೇಲೆಯೇ ಕೇಂದ್ರೀಕರಿಸಿತು. ಈ ಪರಿಸ್ಥಿತಿ ಸೋಷಲಿಸ್ಟ್ ಕ್ರಾಂತಿಗೆ, ಮಹಿಳಾ ಸ್ವಾತಂತ್ರ್ಯಕ್ಕೆ ನಡುವೆ ಇರುವ ಸಂಬಂಧವನ್ನು ಕುರಿತು ಕೆಲವು ಮುಖ್ಯವಾದ ಪ್ರಶ್ನೆಗಳನ್ನು ಎತ್ತುತ್ತದೆ. ಸಾಂಡಿನಿಸ್ತಾಗಳು ತಮ್ಮ ಆಡಳಿತವನ್ನು ಮಹಿಳೆಯರ ಸಮಸ್ಯೆಗಳನ್ನು ಹೇಗೆ ಪರಿಗಣಿಸಿದ್ದಾರೋ, ಮಹಿಳೆಯರು ಅವರ ಬಗ್ಗೆ ಯಾವ ವಿಧವಾದ ದೃಷ್ಟಿಕೋನವನ್ನು

ಏರ್ಪಡಿಸಿಕೊಂಡರು? ಸಮಾಜವಾದೀ ಪುನಾರಚನೆಯು ನಿಕರಾಗುವಾದಲ್ಲಿ ಭೀಕರ ದಾರಿದ್ರ್ಯದಿಂದ, ತೀವ್ರವಾದ ಕೊರತೆಯಿಂದ ಸಾಗುತ್ತಿದೆ. ಚೈನಾ, ಕ್ಯೂಬಾ, ಮೊಜಾಂಬಿಕ್, ಮೊದಲಾದ ಸಮಾಜವಾದೀ ದೇಶಗಳಂತೆಯೇ ನಿಕರಾಗುವಾಕ್ಕೆ ಸಮಾಜವಾದಿ ರಚನೆಯು ಮಿಶ್ರ ಆರ್ಥಿಕ ವ್ಯವಸ್ಥೆ, ಆಲಿಪ್ತನೀತಿ, ರಾಜಕೀಯ ಬಹುತತ್ವದ ಮೇಲೆ ಆಧಾರಪಟ್ಟಿದೆ. ಇಲ್ಲಿ ಸ್ವಲ್ಪಮಟ್ಟಿಗೆ ವಿರೋಧ ಪಕ್ಷಗಳಿಗೂ ಅವಕಾಶ ಇರುತ್ತಿತ್ತು.

ಎಪ್ಪತ್ತನೆಯ ದಶಕದಲ್ಲಿ ಸಂಭವಿಸಿದ ಕ್ರಾಂತಿಕಾರಕ ಬದಲಾವಣೆಯು ಸ್ತ್ರೀವಾದವು ತನ್ನ ರೂಪವನ್ನು ತಿದ್ದುಕೊಳ್ಳುವುದಕ್ಕೆ ದಾರಿಯಾಯಿತು. ಮೆಕ್ಸಿಕೊ, ಪೆರು, ಬ್ರೆಜಿಲ್‌ನಂತಹ ದೇಶಗಳ ಮಹಿಳೆಯರು ಸಂಘಟಿತರಾದರು. ಈ ಪರಿಸ್ಥಿತಿ ಸಮಾಜವಾದಿ ದೇಶಗಳಿಗೆ ಒಂದು ಆಶಾಜ್ಯೋತಿಯಂತೆ, ಮುಖ್ಯವಾಗಿ ಮಹಿಳೆಯರಿಗೆ ಒಂದು ಹೊಸ ಭವಿಷ್ಯತ್ತಿನಂತೆ ಪರಿಣಮಿಸಿತು. ಸೋಮೋನ್ ಅಮನ್ಲೇ ಎನ್ನುವ ಮಹಿಳಾ ವಾರ್ತಾಪತ್ರಿಕೆ ಪಶ್ಚಿಮ ದೇಶಗಳಲ್ಲಿ ನಡೆಯುತ್ತಿರುವ ಸ್ತ್ರೀವಾದಿ ಚರ್ಚೆಯನ್ನು ಇಲ್ಲಿ ಆರಂಭಿಸಿದಾಗ ಅದನ್ನು "ಕ್ರಾಂತಿ ಪ್ರತಿಘಾತಕ ಸ್ತ್ರೀವಾದ" ಎಂದು FSLN ಖಂಡಿಸಲಿಲ್ಲ. ಬಹುಶಃ ಇದಕ್ಕೆ ಒಂದು ಕಾರಣ Ampronac ರ ಬೆಂಬಲ ಅವರಿಗೆ ಅಗತ್ಯವಿದ್ದಿರಬಹುದು. ಹೋರಾಟ ಜಯಪ್ರದ ವಾದ ನಂತರ ಮಹಿಳೆಯರಿಗೆ ಆಶಾಭಂಗವಾಗದೆ ಅವರು ಕೆಲವು ಉನ್ನತ ಪದವಿಗಳನ್ನು ಪಡೆದುಕೊಂಡರು. ೧೯೭೭ರ ಮಾರ್ಚ್‌ಯಲ್ಲಿ ಮಹಿಳೆಯರು ತಮ್ಮ ಬೇಡಿಕೆಗಳೊಡನೆ ಉತ್ಸವವನ್ನು ನಡೆಸಿ ಸಂಘಟಿತ ಜನಾಂದೋಲನದಲ್ಲಿ ಬೆರೆತು ಹೋದರು. Ampronac Lusa Amanda Espeinoza Association of Nicaragna ಆಗಿ ಮಾರ್ಪಟ್ಟಿತು. Ampronac ಮಹಿಳೆಯರು "ಮಹಿಳೆಯರಿಲ್ಲದೆ ಹೋರಾಟವಿಲ್ಲ. ಹೋರಾಟವಿಲ್ಲದೆ ಮಹಿಳಾ ವಿಮೋಚನೆ ಇಲ್ಲ" ಎಂಬ ಘೋಷಣೆಯನ್ನು ಕೊಟ್ಟರು. ೧೯೮೨ರಲ್ಲಿ ಅಮೆರಿಕಾ ಸಹಾಯದಿಂದ ಅಲ್ಲಿ ಕ್ರಾಂತಿ ಹತ್ತಿಕ್ಕುವ ಕಾರ್ಯ ನಡೆಯಿತು. ಪರಿಣಾಮವಾಗಿ ರಾಷ್ಟ್ರ ಸಂಪನ್ಮೂಲಗಳನ್ನು ಅಮೆರಿಕಾ ಕೊಳ್ಳೆ ಹೊಡೆಯಲು ಆರಂಭಿಸಿತು. ಮಹಿಳಾ ವಿಮೋಚನೆಯ ಕಡೆ ಅವರ ಒಪ್ಪಂದ ಕ್ಷೀಣಿಸಿತು. Amanlac ಸ್ತ್ರೀವಾದ ಪ್ರಾಧಾನ್ಯತೆಯನ್ನು ತಗ್ಗಿಸಿ ಹೋರಾಟವನ್ನು ಕಾಪಾಡಿಕೊಳ್ಳುವ ವ್ಯಾಪಕ ಹೋರಾಟದ ಮೇಲೆ ಕೇಂದ್ರೀಕರಿಸಿತು. ಸಾಂಡಿನಿಸ್ತಾ ಸರಕಾರ ಮಹಿಳಾ ವಿಮೋಚನೆಗೆ ಆರ್ಥಿಕ ಸಾಮಾಜಿಕ ವಿಮೋಚನೆಗೆ ಒಂದು ಶರತ್ತಾಗಿ ಭಾವಿಸಿತು. ಕಾನೂನಿನಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಬರಬೇಕಾದರೆ ಒಟ್ಟು ರಾಜ್ಯಾಂಗದಲ್ಲೇ ಬದಲಾವಣೆಗಳನ್ನು ತರಬೇಕಾಗಿದೆ. ೧೯೭೯ರ ಮೂಲಭೂತ ಕಾನೂನು ಸಮಾನತೆಯನ್ನು ಕುರಿತು ಒತ್ತಿ ಹೇಳಿದೆ. ಸಮಾನತೆಗೆ ಇರುವ ಅಡ್ಡಗೋಡೆಗಳನ್ನು ತೊಲಗಿಸಬೇಕೆಂದು ಭಾವಿಸಿದೆ. ಅವರು ಜೆಂಡರ್ ಶೋಷಣೆಯನ್ನು ವರ್ಗಶೋಷಣೆಯಲ್ಲಿನ ಭಾಗವಾಗಿಯೇ ನೋಡಿದರು. ಈ ವಿಧವಾದ ಆಲೋಚನೆ ಮಹಿಳೆಯರಿಗೆ ಇರುವ ಪ್ರತ್ಯೇಕ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ನಿರಾಕರಿಸುವ ಪ್ರಾಚೀನ ಪದ್ಧತಿಯ ಭಾಗವೇ. ವಾಸ್ತವವಾಗಿ ಲಿಂಗ ಭೇದ ವರ್ಗಭೇದದೊಡನೆ ಸಂಬಂಧವಿಲ್ಲದ್ದು. ನಿಜಕ್ಕೂ ಈ

ಸಮಸ್ಯೆಯೇ ಹೋರಾಟಗಾರರ ನಡುವೆ ಮಹಿಳಾವಾದಿಗಳ ನಡುವೆ ಸ್ವಲ್ಪ ಉದ್ರಿಕ್ತತೆಯನ್ನು ಸೃಷ್ಟಿಸಿತು. ಮಕ್ಕಳ ಪೋಷಣೆಯನ್ನು, ಮನೆಗೆಲಸವನ್ನು ಸಮಾಜಪರವಾಗಿ ಮಾಡುವುದು ಎನ್ನುವುದು ಕೆಲವು ಮಂದಿ ಮಹಿಳೆಯರಿಗೇ ಸಾಧ್ಯವಾದ ಕೆಲಸ. ೧೯೮೨ರಲ್ಲಿ ಸ್ಟೇಟ್ ಕೌನ್ಸಿಲ್ (State Council) ತಂದ ಕುಟುಂಬ ಕಾನೂನನ್ನು ಜುಂಟಾ ಅನುಮೋದಿಸಲಿಲ್ಲ. ೧೯೮೩ರಲ್ಲಿ ಅದರ ಮೇಲೆ ಚರ್ಚೆ ಕೂಡಾ ನಿಂತು ಹೋಯಿತು. ಪರಿಣಾಮವಾಗಿ ಕ್ರಾಂತಿ ಪ್ರತಿಘಾತಕ ಕ್ರಮ ದೊಡ್ಡ ಪ್ರಮಾಣದಲ್ಲಿ ಸಾಗಿತು.

ಸಾಂಡಿನಿಸ್ತಾ ಹೋರಾಟವು ಕಾರ್ಮಿಕ ವರ್ಗದ ಬದುಕಿನಲ್ಲಿ ಸ್ವಲ್ಪ ಉನ್ನತಿಯನ್ನು ಸಾಧಿಸಿತು. ೧೯೮೫ರ ಹೊತ್ತಿಗೆ ನಿರಕ್ಷರತೆ ಶೇಕಡಾ ೫೦ ರಿಂದ ೧೫ಕ್ಕೆ ಇಳಿಯಿತು. ಕಾನೂನಿನಲ್ಲಿ ಬಂದ ಬದಲಾವಣೆ ಮಹಿಳೆಯರಿಗೆ ಪೂರ್ತಿ ಹಕ್ಕುಗಳನ್ನು ಕಲ್ಪಿಸಿತು. ಮಹಿಳೆಯರನ್ನು 'ಲೈಂಗಿಕ ವಸ್ತುಗಳಾಗಿ' ಚಿತ್ರೀಕರಿಸುವುದನ್ನು ನಿಷೇಧಿಸಿತು. ರೇಡಿಯೋ, ಟಿವಿಗಳಲ್ಲಿ ಅಶ್ಲೀಲ ಪ್ರಚಾರ ನಿಂತುಹೋಯಿತು. ರೈತ ಕುಟುಂಬದಲ್ಲಿ ಪುರುಷರಿಗೆ ಮಾತ್ರ ವೇತನ ನೀಡುವ ಸಂಪ್ರದಾಯವನ್ನು ರದ್ದುಮಾಡಿದರು. ಸಹಕಾರ ಸಂಘಗಳಲ್ಲಿ ಮಹಿಳೆಯರಿಗೆ ಪೂರ್ಣ ಸದಸ್ಯತ್ವ ಲಭಿಸಿತು. ಕುಟುಂಬಗಳಲ್ಲಿ ಜವಾಬ್ದಾರಿಯನ್ನು ಪುನರ್‌ವ್ಯವಸ್ಥೆಗೊಳಿಸುವುದು ನಡೆಯಿತು. ೧೯೮೭ ಜನವರಿಯಲ್ಲಿ ಬರೆದ ಹೊಸ ಕಾನೂನು ಈ ಬದಲಾವಣೆಗಳೆಲ್ಲವನ್ನು ಮಾನ್ಯಮಾಡಿತು. ೧೯೮೭ರ ಹೊತ್ತಿಗೆ ಸರಕಾರದಲ್ಲಿ ಮುಖ್ಯವಾದ ನೌಕರಿಗಳಲ್ಲಿ ಶೇಕಡಾ ೩೧ರಷ್ಟು ಮಹಿಳೆಯರು ಆಕ್ರಮಿಸಿದರು. ಸಾಂಡಿನಿಸ್ತಾ ದಳದಲ್ಲಿ ಶೇಕಡಾ ೨೭ರಷ್ಟು ನಾಯಕತ್ವ ಸ್ಥಾನಗಳು ಮಹಿಳೆಯರ ಕೈಯಲ್ಲಿದ್ದವು. FSLN ಸಂಸ್ಥೆಯಲ್ಲಿ ಶೇಕಡಾ ೨೫ರಷ್ಟು ಸದಸ್ಯರು ಮಹಿಳೆಯರೇ. ಕಾರ್ಮಿಕ ವರ್ಗದಲ್ಲಿ ಶೇಕಡಾ ೩೭ರಷ್ಟು ಉದ್ಯೋಗಗಳು ಮಹಿಳೆಯರಿಗೆ ದಕ್ಕಿದವು. ಬಟ್ಟೆ ಗಿರಣಿಗಳು, ರಾಸಾಯನಿಕ ಉದ್ದಿಮೆಗಳು, ಪ್ಲಾಸ್ಟಿಕ್ ಉದ್ದಿಮೆಗಳು, ಪೇಪರ್ ಉದ್ದಿಮೆಗಳು, ಆಹಾರ ತಯಾರಿಕಾ ಉದ್ದಿಮೆಗಳು ಮುಂತಾದವುಗಳಲ್ಲಿ ಮಹಿಳೆಯರು ಕೆಲಸ ಮಾಡುತ್ತಿದ್ದರು.

ಮಹಿಳಾ ಕಾರ್ಮಿಕರಿಗೆ ಎಷ್ಟೇ ಸೌಕರ್ಯಗಳನ್ನು ಕಲ್ಪಿಸಿದರೂ ಅವರಿಗೆ ರಾಜಕೀಯ ಆರ್ಥಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವ ಅವಕಾಶ ಎಷ್ಟಾದರೂ ಅಗತ್ಯ. ಅದು ಆತ್ಮವಿಶ್ವಾಸವನ್ನು, ಧೈರ್ಯವನ್ನು ಬೆಳೆಸುತ್ತದೆ. ಒಂದು ವಿಧವಾದ ಅಧಿಕಾರವನ್ನು ನೀಡುತ್ತದೆ. ಎಲ್ಲ ವರ್ಗದ ಮಹಿಳೆಯರು ತಮಗೆ ಕುಟುಂಬ ಜವಾಬ್ದಾರಿ ಒಂದು ದೊಡ್ಡ ಸಮಸ್ಯೆಯಾಗಿದೆಯೆಂದು ಹೇಳುತ್ತಿದ್ದರು. ರೈತಾಪಿ ಮಹಿಳೆಯರು ಸರಾಸರಿ ದಿನಕ್ಕೆ ೧೭ ಗಂಟೆ ಮಕ್ಕಳ ಪೋಷಣೆ ಹಾಗೂ ಕುಟಂಬದ ಕೆಲಸಕ್ಕೆ ಕಳೆಯುತ್ತಿದ್ದರು. ಇದರಲ್ಲಿ ಗಂಡು ಮಕ್ಕಳು, ತಂದೆ ಸೇರಿ ಕೇವಲ ೫೦ ನಿಮಿಷ ಕಳೆಯುತ್ತಿರುವಂತೆ ನಮಗೆ ತಿಳಿದಿದೆ. ತಾಯಿ ೯ ಗಂಟೆ ೩೯ ನಿಮಿಷಗಳು, ಮಗಳು ೬ ಗಂಟೆ ೩೯ ನಿಮಿಷಗಳು ಕುಟುಂಬ ಕೆಲಸಗಳಿಗೆ ಕಳೆದ ಆಧಾರಗಳು ನಮ್ಮಲ್ಲಿವೆ. ಈ ರೀತಿ ಕುಟುಂಬ ಕೆಲಸದ ಹೊರೆ ಮಹಿಳಾ ವಿಮೋಚನೆಗೆ ದೊಡ್ಡ ತೊಡಕಾಗಿದೆ. ಈ ಒಟ್ಟು ಸಮಸ್ಯೆಗೆ ಕುಟುಂಬವನ್ನು ಸಮಾಜ ಪರವಾಗಿ ಮಾಡುವು

ದಕ್ಕಿಂತಲೂ, ಕುಟುಂಬದಲ್ಲಿ ಪುರುಷರು ಕೆಲಸದ ಹೊರೆಯನ್ನು ಹಂಚಿಕೊಳ್ಳುವುದೇ ಒಂದು ಪರಿಹಾರವಾಗಿ ಕಾಣಿಸುತ್ತದೆ.

ಮಹಿಳೆಗೆ ಇರುವ ಹಕ್ಕುಗಳಲ್ಲಿ ಮಕ್ಕಳನ್ನು ಹೆರುವ ವಿಷಯದಲ್ಲಿ, ಬೆಳೆಸುವ ವಿಷಯದಲ್ಲಿ ತನ್ನ ನಿರ್ಧಾರ ಪ್ರಧಾನವಾದದ್ದೆಂಬ ವಿಷಯವನ್ನು ಯಾರೂ ಗಮನಿಸುವುದಿಲ್ಲ. ಸಮಾಜದ ಮೇಲೆ ಕ್ಯಾಥಲಿಕ್ ಚರ್ಚಿನ ಹಿಡಿತ, ಕಾಮುಕ ದೃಷ್ಟಿಕೋನ ಈ ಪರಿಸ್ಥಿತಿಗೆ ಕಾರಣಗಳು.

೧೯೮೭ರ ಮಾರ್ಚಿಯಲ್ಲಿ AMNLAE ತನ್ನ ಕಾರ್ಯ ವಿಧಾನವನ್ನು ಬದಲಾಯಿಸಿಕೊಳ್ಳುವ ಒಂದು ಮುಖ್ಯವಾದ ನಿರ್ಧಾರವನ್ನು ತೆಗೆದುಕೊಂಡಿತು. ಅದೇನೆಂದರೆ ಇನ್ನು ಮುಂದೆ ಅದೊಂದು ಜನತಾ ಸಂಸ್ಥೆಯಾಗಲ್ಲದೆ ಒಂದು ಚಳುವಳಿಗೆ ನಾಯಕತ್ವವನ್ನು ವಹಿಸುವ ಶಕ್ತಿಯಾಗಿ ಕೆಲಸ ನಿರ್ವಹಿಸುತ್ತದೆ. ಅದು ವಿವಿಧ ಸಂಘಗಳಲ್ಲಿ ಸೇರಿ ಕೆಲಸ ಮಾಡುತ್ತದೆ. ಮಹಿಳೆಯರನ್ನು ಪ್ರತ್ಯೇಕವಾಗಿ ಸಂಘಟಿಸುವುದಿಲ್ಲ. ಇದು AMNLAE ಕುದುರಿಸಿಕೊಂಡ ಒಂದು ಒಪ್ಪಂದ. ೧೯೮೭ರಲ್ಲಿ FSLN ಸಿದ್ಧಾಂತವನ್ನು ಬದಲಾಯಿಸುವ ಅಗತ್ಯವನ್ನು ಗುರುತಿಸಿಕೊಂಡಿತು. ಪುರುಷ ದುರಂಹಕಾರಕ್ಕೆ ಸಾಧನಗಳಾಗಿದ್ದಂತಹ ಕುಟುಂಬ, ಶಾಲೆ, ಚರ್ಚ್ ಮೊದಲಾದವುಗಳ ಮೇಲೆ ಕೂಡಾ ದಾಳಿಯನ್ನು ಮುಂದುವರಿಸಿತು. ವ್ಯಕ್ತಿಗತ ಸಂಬಂಧಗಳಲ್ಲಿರುವ ಸಿದ್ಧಾಂತವು ಆ ಕ್ರಮದಲ್ಲಿ ಮುಂದುವರಿಯುವ ಪುರುಷ ದುರಹಂಕಾರದೊಡನೆ ಘರ್ಷಿಸಲು ಅದು ಆರಂಭಿಸಿತು. ಈ ರೀತಿ ನಿಕರಾಗುವ ಚಳುವಳಿಯು ಆಹಾರ ಗಳಿಕೆಯ ಸಮಸ್ಯೆಗಳ ಜೊತೆಗೆ ಸ್ತ್ರೀವಾದದ ಮೇಲೂ ಒಂದು ಚರ್ಚೆಯನ್ನು ಮುಂದುವರಿಸುತ್ತದೆ.



ಅಂಕಿ-ಅಂಶಾಧಾರಿತ

# ಕರ್ನಾಟಕದಲ್ಲಿ ಕಾಣೆಯಾದ ಮಹಿಳೆಯರು

ಟಿ.ಆರ್. ಚಂದ್ರಶೇಖರ

## ಪ್ರಸ್ತಾವನೆ

ಭಾರತದ ಅದರಂತೆ ಕರ್ನಾಟಕದ ಜನಸಂಖ್ಯೆಯಲ್ಲಿ ಮಹಿಳೆಯರ ಪ್ರಮಾಣವು ಕಡಿಮೆಯಾಗುತ್ತಿರುವ ಸಂಗತಿಯನ್ನು ಅಮರ್ತ್ಯಸೇನ್ 'ಕಾಣೆಯಾದ ಮಹಿಳೆಯರು' ಎಂದು (Missing Women) ಕರೆದಿದ್ದಾರೆ (೧೯೯೦). ಅದೊಂದು ಪರಿಭಾವನೆಯಾಗಿ ಇಂದು ಲಿಂಗ ಸಂಬಂಧಗಳನ್ನು ಕುರಿತ ಅಧ್ಯಯನಗಳಲ್ಲಿ ಬಳಕೆಯಾಗುತ್ತಿದೆ. ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ಅವರು (೨೦೦೨) ಕಾಣೆಯಾದ ಮಹಿಳೆಯರ ಸಮಸ್ಯೆಯ ಬೇರೆ ಬೇರೆ ನೆಲೆಗಳನ್ನು ಕುರಿತಂತೆ ಚರ್ಚೆ ಮಾಡುತ್ತಾ ಬಂದಿದ್ದಾರೆ. (೧೯೯೫, ೨೦೦೨) ಸಮಾಜದಲ್ಲಿ ಮಹಿಳೆಯರು ಎದುರಿಸುತ್ತಿರುವ ತಾರತಮ್ಯದ ಸೂಚಿಯಾಗಿ ಅಮರ್ತ್ಸಸೇನ್ ಅವರು 'ಕಾಣೆಯಾದ ಮಹಿಳೆಯರು' ಎಂಬ ಪರಿಮಾಣಾತ್ಮಕ ಪರಿಭಾವನೆಯನ್ನು ಉಪಯೋಗಿಸುತ್ತಿದ್ದಾರೆ (೧೯೯೦).

ಒಂದು ದೇಶ/ಪ್ರದೇಶದ ಜನಸಂಖ್ಯೆಯಲ್ಲಿನ ಮಹಿಳೆಯರ ಮತ್ತು ಪುರಷರ ಸಂಖ್ಯೆಗಳ ನಡುವಣ ಪರಿಮಾಣವನ್ನು 'ಲಿಂಗ ಅನುಪಾತ' (ಸೆಕ್ಸ್ ರೇಶಿಯೋ) ಎಂದು ಕರೆಯಲಾಗುತ್ತದೆ. ಇದನ್ನು ಪ್ರತಿ ಸಾವಿರ ಪುರುಷರಿಗೆ ಎದುರಾಗಿರುವ ಮಹಿಳೆಯರ ಸಂಖ್ಯೆಯ ರೂಪದಲ್ಲಿ ವ್ಯಕ್ತಪಡಿಸಲಾಗುತ್ತದೆ. ಉದಾಹರಣೆಗೆ ೨೦೦೧ ರಲ್ಲಿ ಕರ್ನಾಟಕದ ಜನಸಂಖ್ಯೆ ೫೨೭.೩೪ ಲಕ್ಷ. ಇದರಲ್ಲಿ ಮಹಿಳೆಯರ ಸಂಖ್ಯೆ ೨೫೮.೩೪ ಲಕ್ಷವಾದರೆ ಪುರುಷರ ಸಂಖ್ಯೆ ೨೬೮.೫೬ ಲಕ್ಷ. ಈ ಸಂಖ್ಯೆಗಳಿಗೆ ಲಿಂಗ ಅನುಪಾತವನ್ನು ಲೆಕ್ಕ ಹಾಕಿದರೆ, ಕರ್ನಾಟಕದಲ್ಲಿ ೨೦೦೧ ರಲ್ಲಿ ಪ್ರತಿ ಸಾವಿರ ಪುರುಷರಿಗೆ ಎದುರಾಗಿರುವ ಮಹಿಳೆಯರ ಸಂಖ್ಯೆ ೯೬೪. ಇದು ೧೯೯೧ ರಲ್ಲಿ ೯೬೦ ಇತ್ತು. ಅಂದರೆ ಕಳೆದ ದಶಕದಲ್ಲಿ ಲಿಂಗ ಅನುಪಾತವು ೪ ಅಂಶಗಳನ್ನು ಅಧಿಕಗೊಂಡಿದೆ.

ಲಿಂಗ ಅನುಪಾತದಲ್ಲಿ ಏರಿಕೆಯಾಗಿದೆಯೆಂದು ಸಮಾಧಾನ ಪಟ್ಟುಕೊಳ್ಳುವ ಪರಿಸ್ಥಿತಿ ಇಲ್ಲಿ ಇಲ್ಲ. ಏಕೆಂದರೆ ಕಳೆದ ದಶಕದಲ್ಲಿ (೧೯೯೧ ರಿಂದ ೨೦೦೧) ೦-೬ ವರ್ಷಗಳ ವಯೋಮಾನದ ಮಕ್ಕಳ ಲಿಂಗ ಅನುಪಾತವು ೧೯೯೧ರ ೯೬೦ ರಿಂದ ೨೦೦೧ರಲ್ಲಿ ೯೪೬ಕ್ಕೆ

ಕುಸಿದಿದೆ. ಇದೊಂದು ಆತಂಕಕಾರಿ ಬೆಳವಣಿಗೆಯಾಗಿದೆ. ಭಾರತದ ಜನಸಂಖ್ಯೆಯು ಪುರುಷಾಧಿಕ್ಯವಾಗುತ್ತಿರುವುದರ ಸೂಚಿ ಇದಾಗಿದೆ ಎಂದು ಅನೇಕ ಅಧ್ಯಯನಗಳು ಇದನ್ನು ಗುರುತಿಸುತ್ತಿವೆ (ಸುಧಾ ಎಸ್. ಇರುದಯ ರಾಜನ್.ಎಸ್. ೨೦೦೩, ಅಗ್ನಿ ಹೋತ್ರಿ ಬಿ. ಸತೀಶ್ ೨೦೦೩). ಶಿಶುಹತ್ಯೆಯಂತಹ ಅಮಾನುಷ ಆಚರಣೆಯು ಭ್ರೂಣ ಹತ್ಯೆಯಾಗಿ ಪರಿವರ್ತನೆಗೊಳ್ಳುತ್ತಿರುವ ಸೂಚಿ ಇದಾಗಿದೆ ಎಂದು ಅದೇ ಅಧ್ಯಯನಗಳು ವಿವರಿಸುತ್ತಿವೆ. ಒಟ್ಟಾರೆ ಕಡಿಮೆಯಾಗುತ್ತಿರುವ ಲಿಂಗ ಅನುಪಾತವು ಸಮಾಜದಲ್ಲಿ ಅನೂಚಾನವಾಗಿ ಹರಿದು ಕೊಂಡು ಬರುತ್ತಿರುವ ಲಿಂಗತಾರತಮ್ಯ-ಮಹಿಳೆಯರ ಶೋಷಣೆಯನ್ನು ಸೂಚಿಸುತ್ತಿ ರುವುದರಲ್ಲಿ ಯಾವ ಅನುಮಾನವು ಇಲ್ಲ.

ಒಂದು ಸಮಾಜದಲ್ಲಿ ಲಿಂಗ ಅನುಪಾತವು ಅಂದರೆ ಮಹಿಳೆಯರ ಮತ್ತು ಪುರುಷರ ಸಂಖ್ಯೆ ಸರಿಸುಮಾರು ಸಮನಾಗಿರಬೇಕಾಗುತ್ತದೆ. ಇದು ಜೈವಿಕವಾದ ಒಂದು ಸಂಗತಿಯಾಗಿದೆ. ಅಂದರೆ ಲಿಂಗ ಅನುಪಾತವು ೧೦೦೦ ಇರಬೇಕು. ಪ್ರತಿ ಸಾವಿರ ಪುರುಷರಿಗೆ ಎದುರಾಗಿ ಸಾವಿರ ಮಹಿಳೆಯರಿರಬೇಕು. ಇದು ಜೈವಿಕವಾದ ಒಂದು ಅಗತ್ಯ. ಜೈವಿಕವಾಗಿ ಪ್ರತಿಕೂಲ ಸಂದರ್ಭದಲ್ಲೂ ಬದುಕುಳಿಯುವ ಸಾಮರ್ಥ್ಯವು ಪುರುಷರಿಗಿಂತ ಮಹಿಳೆಯರಿಗೆ ಅಧಿಕವಾಗಿ ರುತ್ತದೆ. ಇದನ್ನು ವೈದ್ಯಕೀಯಶಾಸ್ತ್ರವು ದೃಢಪಡಿಸಿದೆ (ವಾಸ್ತವವಾಗಿ ಲಿಂಗ ಅನುಪಾತವು ೧೦೦೦ ಕ್ಕಿಂತ ಅಧಿಕವಿರಬೇಕೆಂದು ಕೆಲವು ವಿದ್ವಾಂಸರು ವಾದಿಸುತ್ತಿದ್ದಾರೆ. ಯುರೋಪಿನ್ ಹಾಗೂ ಉತ್ತರ ಅಮೆರಿಕನ್ ದೇಶಗಳಲ್ಲಿ ಲಿಂಗ ಅನುಪಾತವು ೧೦೦೦ಕ್ಕಿಂತ ಅಧಿಕವಾಗಿದೆ).

ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ಲಿಂಗ ಅನುಪಾತದ ಸ್ಥಿತಿಗತಿಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ಅಮರ್ತ್ಯಸೇನ್ ರೂಪಿಸಿರುವ 'ಕಾಣೆಯಾದ ಮಹಿಳೆಯರು' ಎಂಬ ಪರಿಭಾವನೆಯನ್ನು ಬಳಸಿಕೊಂಡು ಕರ್ನಾಟಕದಲ್ಲಿ ಒಟ್ಟು ಜನಸಂಖ್ಯೆಗೆ ಸಂಬಂಧಿಸಿದಂತೆ ಕಾಣೆಯಾದ ಮಹಿಳೆಯರ ಪ್ರಮಾಣವನ್ನು ಜಿಲ್ಲಾವಾರು ಗಣನೆ ಮಾಡಲಾಗಿದೆ. ಇದರ ಜೊತೆಗೆ ೦-೬ ವರ್ಷಗಳ ವಯೋಮಾನದ ಮಕ್ಕಳ ಲಿಂಗ ಅನುಪಾತದಲ್ಲಿ ಉಂಟಾಗಿರುವ (೨೦೦೧) ತೀವ್ರ ಕುಸಿತವನ್ನು ಕುರಿತಂತೆ ಕೂಡ ಇಲ್ಲಿ ಚರ್ಚೆ ಮಾಡಲಾಗಿದೆ.

ಲಿಂಗ ಅನುಪಾತವು ೧೦೦೦ಕ್ಕಿಂತ ಕಡಿಮೆಯಿರುವುದಕ್ಕೆ ಕಾರಣವೇನು? ಇದು ಲಿಂಗ ಸಂಬಂಧಿ ಅಸಮಾನತೆಯ ಸೂಚಿಯೆ? ಜನಸಂಖ್ಯೆಯು ಪುರುಷಾಧಿಕ್ಯವಾಗುತ್ತಿರುವುದರಿಂದ ಉಂಟಾಗಬಹುದಾದ ಪರಿಣಾಮಗಳೇನು? ಮಕ್ಕಳ ಲಿಂಗ ಅನುಪಾತವು ತೀವ್ರ ಕಡಿಮೆಯಾಗು ತ್ತಿರುವುದು ಏನನ್ನು ಸೂಚಿಸುತ್ತದೆ? ಮಕ್ಕಳ ಲಿಂಗ ಅನುಪಾತದ ಕುಸಿತದಲ್ಲಿ ಶಿಶುಹತ್ಯೆ ಮತ್ತು ಭ್ರೂಣಹತ್ಯೆಗಳ ಪಾತ್ರವೇನು? ಇಂತಹ ಪ್ರಶ್ನೆಗಳನ್ನು ಎತ್ತುವುದರ ಮೂಲಕ ಕರ್ನಾಟಕದ ಸಂದರ್ಭದಲ್ಲಿ ಲಿಂಗ ಅನುಪಾತದ ವಿವಿಧ ಮುಖಗಳನ್ನು ಇಲ್ಲಿ ಅರ್ಥಮಾಡಿ ಕೊಳ್ಳಲು ಪ್ರಯತ್ನಿಸಲಾಗಿದೆ. ಪ್ರಸ್ತಾವನೆಯ ಭಾಗವನ್ನು ಬಿಟ್ಟು ಪ್ರಸ್ತುತ ಪ್ರಬಂಧದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಒಟ್ಟು ಜನಸಂಖ್ಯೆಗೆ ಸಂಬಂಧಿಸಿದಂತೆ

೧೯೯೧ ಮತ್ತು ೨೦೦೧ರ ಜನಗಣತಿಯಲ್ಲಿ ಆಗಿರುವ ಲಿಂಗ ಅನುಪಾತದಲ್ಲಿನ ಬದಲಾವಣೆಯನ್ನು ಗುರುತಿಸುವುದರ ಜೊತೆಗೆ ಜಿಲ್ಲಾವಾರು ಕಾಣೆಯಾದ ಮಹಿಳೆಯರ ಸಂಖ್ಯೆಯನ್ನು ಗಣನೆ ಮಾಡಲಾಗಿದೆ. ಎರಡನೆಯ ಭಾಗದಲ್ಲಿ ಕರ್ನಾಟಕದಲ್ಲಿ ೦-೬ ವರ್ಷಗಳ ವಯೋಮಾನದ ಮಕ್ಕಳ ಲಿಂಗ ಅನುಪಾತದಲ್ಲಿನ ಬದಲಾವಣೆಯನ್ನು ಗುರುತಿಸಲಾಗಿದೆ. ಮಕ್ಕಳ ಲಿಂಗ ಅನುಪಾತದ ತೀವ್ರ ಕುಸಿತದ ಹಿಂದಿನ ಸಂಗತಿಗಳನ್ನು ಹಿಡಿದಿಡಲು ಇಲ್ಲಿ ಪ್ರಯತ್ನಿಸಲಾಗಿದೆ. ಕೊನೆಯ ಸಮಾರೋಪ ಭಾಗದಲ್ಲಿ ಅಧ್ಯಯನದ ಮುಖ್ಯತಥ್ಯಗಳನ್ನು ಸಾರಾಂಶ ರೂಪದಲ್ಲಿ ಮಂಡಿಸಲಾಗಿದೆ.

ಲಿಂಗ ಅನುಪಾತಗಳಿಗೆ ಸಂಬಂಧಿಸಿದ ಅಂಕಿ-ಸಂಖ್ಯೆಗಳನ್ನು ಕೋಷ್ಟಕಗಳ ರೂಪದಲ್ಲಿ ಪ್ರಬಂಧದ ಕೊನೆಯಲ್ಲಿ ಅನುಬಂಧದಲ್ಲಿ ನೀಡಲಾಗಿದೆ.

## ಭಾಗ-೧

### ಕರ್ನಾಟಕದಲ್ಲಿ ಲಿಂಗ ಅನುಪಾತ

ಕೋಷ್ಟಕ-೧ರಲ್ಲಿ ಕರ್ನಾಟಕದ ೧೯೯೧ ಮತ್ತು ೨೦೦೧ರ ಜನಗಣತಿಗೆ ಸಂಬಂಧಿಸಿದಂತೆ ಕರ್ನಾಟಕದ ಲಿಂಗ ಅನುಪಾತವನ್ನು ಜಿಲ್ಲಾವಾರು ನೀಡಲಾಗಿದೆ. ನಾಲ್ಕು ಜಿಲ್ಲೆಗಳನ್ನು ಬಿಟ್ಟರೆ (ಬಾಗಲಕೋಟೆ, ಗದಗ, ಬೀದರ್ ಮತ್ತು ಬಿಜಾಪುರ) ಉಳಿದ ೨೩ ಜಿಲ್ಲೆಗಳಲ್ಲಿ ಲಿಂಗ ಅನುಪಾತವು ೧೯೯೧ ರಿಂದ ೨೦೦೧ರ ಅವಧಿಯಲ್ಲಿ ಏರಿಕೆಯಾಗಿದೆ. ಅತ್ಯಂತ ಅಧಿಕ ಲಿಂಗ ಅನುಪಾತ ೧೧೩೭ ಉಡುಪಿ ಜಿಲ್ಲೆಯಲ್ಲಿದ್ದರೆ ಅತ್ಯಂತ ಕಡಿಮೆ ಲಿಂಗ ಅನುಪಾತ ೯೦೬ ಬೆಂಗಳೂರು ನಗರ ಜಿಲ್ಲೆಯಲ್ಲಿದೆ. ಲಿಂಗ ಅನುಪಾತವು ೯೫೦ಕ್ಕಿಂತ ಕಡಿಮೆಯಿರುವ ಜಿಲ್ಲೆಗಳ ಸಂಖ್ಯೆ ೧೯೯೧ ರಲ್ಲಿ ೬ ಇದ್ದುದು ೨೦೦೧ರಲ್ಲಿ ಅದು ಐದಕ್ಕೆ ಇಳಿದಿದೆ. ಒಟ್ಟಾರೆಯಾಗಿ ೨೦೦೧ರಲ್ಲಿ ಲಿಂಗ ಅನುಪಾತವು ಒಟ್ಟು ಜನಸಂಖ್ಯೆಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಉತ್ತಮಗೊಂಡಿದೆ.

ಲಿಂಗ ಅನುಪಾತವು ಉತ್ತಮಗೊಂಡಿರುವುದು ಸಮಾಧಾನ ಪಟ್ಟುಕೊಳ್ಳಲು ಕಾರಣವಾಗಬಹುದಾದ ಸಂಗತಿಯೇನಲ್ಲ. ಏಕೆಂದರೆ ಕೋಷ್ಟಕ-೨ ರಲ್ಲಿ ತೋರಿಸಿರುವಂತೆ ಲಕ್ಷಾಂತರ ಮಹಿಳೆಯರು ಕರ್ನಾಟಕದಲ್ಲಿ ಕಾಣೆಯಾಗಿದ್ದಾರೆ. ಕೋಷ್ಟಕ-೨ ಅನೇಕ ಕುತೂಹಲಕಾರಿ ಸಂಗತಿಗಳನ್ನು ಒಳಗೊಂಡಿದೆ. ಈ ಕೋಷ್ಟಕದ ೩ನೆಯ ಅಂಕಣದಲ್ಲಿ ಕಾಣೆಯಾದ ಮಹಿಳೆಯರ ಸಂಖ್ಯೆಯನ್ನು ಜಿಲ್ಲಾವಾರು ನೀಡಲಾಗಿದೆ. ಅಂಕಣ-೪ರಲ್ಲಿ ಹೆಚ್ಚುವರಿ ಮಹಿಳೆಯರ ಸಂಖ್ಯೆಯನ್ನು ನೀಡಲಾಗಿದೆ. ಅಂಕಣ-೩ರಲ್ಲಿ ಹೆಚ್ಚುವರಿ ಮಹಿಳೆಯರ ಸಂಖ್ಯೆಯನ್ನು ನೀಡಲಾಗಿದೆ. ಅಂಕಣ-೩ ಮತ್ತು ಅಂಕಣ-೪ರ ನಡುವಿನ ವ್ಯತ್ಯಾಸದ ಪ್ರಮಾಣವನ್ನು 'ನಿವ್ವಳ ಕಾಣೆಯಾದ ಮಹಿಳೆಯರು' ಎಂಬ ೫ನೆಯ ಅಂಕಣದಲ್ಲಿ ನೀಡಲಾಗಿದೆ.

ಕಾಣೆಯಾದ ಮಹಿಳೆಯರನ್ನು ಗಣನೆ ಮಾಡಲು ಇಲ್ಲಿ ಲಿಂಗ ಅನುಪಾತವನ್ನು '೧:೧' ಎಂದು ಪರಿಗಣಿಸಲಾಗಿದೆ. ಈ ಮಾನದಂಡದ ಆಧಾರದ ಮೇಲೆ ಕಾಣೆಯಾದ ಮಹಿಳೆ

ಯರನ್ನು ಲೆಕ್ಕ ಹಾಕಲಾಗಿದೆ. ಉದಾಹರಣೆಗೆ ೨೦೦೧ರಲ್ಲಿ ಕರ್ನಾಟಕದ ಮಹಿಳೆಯರ ಸಂಖ್ಯೆ ೨೫೮.೭೮ ಲಕ್ಷ ಮತ್ತು ಪುರುಷರ ಸಂಖ್ಯೆ ೨೬೮.೫೬ ಲಕ್ಷ. ಲಿಂಗ ಅನುಪಾತ ೧:೧ ಎಂದಾದರೆ ಅಥವಾ ಪ್ರತಿ ಸಾವಿರ ಪುರುಷರಿಗೆ ಎದುರಾಗಿ ಸಾವಿರ ಮಹಿಳೆಯರಿದ್ದರೆ, ಕರ್ನಾಟಕದಲ್ಲಿ ಮಹಿಳೆಯರ ಸಂಖ್ಯೆ ೨೬೮.೫೬ ಲಕ್ಷವಾಗಬೇಕಾಗಿತ್ತು. ಇಲ್ಲಿ ೯.೭೮ ಲಕ್ಷ ಮಹಿಳೆಯರ ಸಂಖ್ಯೆ ಕಡಿಮೆಯಾಗಿದೆ. ಇವರೆ ಕಾಣೆಯಾದ ಮಹಿಳೆಯರು. ವಾಸ್ತವವಾಗಿ ಕರ್ನಾಟಕದಲ್ಲಿ ಕಾಣೆಯಾದ ಒಟ್ಟು ಮಹಿಳೆಯರ ಸಂಖ್ಯೆ ೧೦.೮೪ ಲಕ್ಷ. ರಾಜ್ಯದ ಕೆಲವೊಂದು ಜಿಲ್ಲೆಯ ತಾಲ್ಲೂಕುಗಳಲ್ಲಿ ಲಿಂಗ ಅನುಪಾತವು ೧೦೦೦ಕ್ಕಿಂತ ಅಧಿಕವಾಗಿದೆ. ಅಲ್ಲಿ ನಮಗೆ ಹೆಚ್ಚುವರಿ ಮಹಿಳೆಯರು ದೊರೆಯುತ್ತಾರೆ. ಉದಾಹರಣೆಗೆ ಉಡುಪಿ ಜಿಲ್ಲೆಯ ಎಲ್ಲ ತಾಲ್ಲೂಕುಗಳಲ್ಲೂ ಲಿಂಗ ಅನುಪಾತವು ೧೦೦೦ಕ್ಕಿಂತ ಅಧಿಕವಿರುವುದರಿಂದ ಅಲ್ಲಿ ಕಾಣೆಯಾದ ಮಹಿಳೆಯರು ಇಲ್ಲವೆ ಇಲ್ಲ. ಅಲ್ಲಿ ಅಧಿಕ ಮಹಿಳೆಯರ ಸಂಖ್ಯೆ ೬೬೪೧೨. ಇದೇ ರೀತಿ ಇಡೀ ರಾಜ್ಯದಲ್ಲಿ ಹೆಚ್ಚುವರಿ ಮಹಿಳೆಯರ ಸಂಖ್ಯೆ ೧.೦೫ ಲಕ್ಷ. ಈ ಹೆಚ್ಚುವರಿ ಮಹಿಳೆಯರ ಸಂಖ್ಯೆಯನ್ನು ಒಟ್ಟು ಕಾಣೆಯಾದ ಮಹಿಳೆಯರ ಸಂಖ್ಯೆಯಿಂದ ಕಳೆದರೆ ದೊರೆಯುವ ಮೊತ್ತವೇ 'ನಿವ್ವಳ ಕಾಣೆಯಾದ ಮಹಿಳೆಯರು'.

ಕೋಷ್ಟಕ -೨ರಲ್ಲಿ ಕಾಣೆಯಾದ ಮಹಿಳೆಯರ ವಿಭಾಗವಾರು ವಿವರಗಳನ್ನು ನೀಡಲಾಗಿದೆ. ನಿವ್ವಳ ಕಾಣೆಯಾದ ಮಹಿಳೆಯರಲ್ಲಿ ಉತ್ತರ ಕರ್ನಾಟಕದ ಪಾಲು ಶೇ. ೪೪.೩೯ ಮತ್ತು ದಕ್ಷಿಣ ಕರ್ನಾಟಕದ ಪಾಲು ಶೇ. ೫೫.೬೧ ರಾಜ್ಯದಲ್ಲಿನ ನಿವ್ವಳ ಕಾಣೆಯಾದ ಮಹಿಳೆಯರಲ್ಲಿ ಬೆಂಗಳೂರು ವಿಭಾಗದ ಪಾಲು ಶೇ. ೫೬.೨೧. ಮೈಸೂರು ವಿಭಾಗದಲ್ಲಿ ಕಾಣೆಯಾದ ಮಹಿಳೆಯರೆ ಇಲ್ಲ. ಅಲ್ಲಿ ಹೆಚ್ಚುವರಿ ಮಹಿಳೆಯರ ಸಂಖ್ಯೆಯು ಒಟ್ಟು ಕಾಣೆಯಾದ ಮಹಿಳೆಯರ ಸಂಖ್ಯೆಗಿಂತ ಅಧಿಕವಿದೆ. ಇದೊಂದು ಆರೋಗ್ಯಕಾರಿ ಸಂಗತಿಯಾಗಿದೆ. ರಾಜ್ಯದ ನಿವ್ವಳ ಕಾಣೆಯಾದ ಮಹಿಳೆಯರಲ್ಲಿ ಬೆಂಗಳೂರು ನಗರ ಜಿಲ್ಲೆಯೊಂದರ ಪಾಲು ಶೇ. ೩೨.೯೫.

ಲಿಂಗ ಅನುಪಾತವನ್ನು ೧:೧. ಎಂಬ ಮಾನದಂಡದ ಆಧಾರದ ಮೇಲೆ ಗಣನೆ ಮಾಡಿದರೆ ದೊರೆಯುವ ಕಾಣೆಯಾದ ಮಹಿಳೆಯರ ಸಂಖ್ಯೆ ೯.೭೮ ಲಕ್ಷ. ಒಂದು ವೇಳೆ ಯುರೋಪಿನ ದೇಶಗಳಲ್ಲಿನ ಲಿಂಗ ಅನುಪಾತ ೧:೧.೨ ಎಂಬ ಮಾನದಂಡದಲ್ಲಿ ಗಣನೆ ಮಾಡಿದರೆ ದೊರೆಯುವ ನಿವ್ವಳ ಕಾಣೆಯಾದ ಮಹಿಳೆಯರ ಸಂಖ್ಯೆ ೧೦.೩೨ ಲಕ್ಷ.

ಹೀಗೆ ೧೯೯೧ ರಿಂದ ೨೦೦೧ ದಶಕದಲ್ಲಿ ಲಿಂಗ ಅನುಪಾತ ೯೬೦ ರಿಂದ ೯೬೪ಕ್ಕೆ ಏರಿಕೆಯಾಗಿದ್ದರೂ ಕರ್ನಾಟಕದಲ್ಲಿ ನಿವ್ವಳ ೯.೭೮ ಲಕ್ಷ ಮಹಿಳೆಯರ ಕೊರತೆಯಿದೆ. ಇದು ಆರೋಗ್ಯಕಾರಿ ಸಂಗತಿಯಲ್ಲ.

### ಭಾಗ-೨

### ಮಕ್ಕಳ ಲಿಂಗ ಅನುಪಾತ

ಒಟ್ಟು ಜನಸಂಖ್ಯೆಗೆ ಸಂಬಂಧಿಸಿದಂತೆ ಮಹಿಳೆಯರ ಪ್ರಮಾಣವು ಕೊರತೆಯಿಂದ

ಕೂಡಿದೆ ಎಂಬುದು ಈಗ ಸ್ಪಷ್ಟಸಲಾಗಿದೆ. ಇದು ಒಟ್ಟು ಜನಸಂಖ್ಯೆಗೆ ಸಂಬಂಧಿಸಿದ ಒಂದು ಸಂಗತಿಯಾಯಿತು. ಆದರೆ ೨೦೦೧ ರ ಜನಗಣತಿಯು ಒಂದು ಆತಂಕಕಾರಿ ಸಂಗತಿಯನ್ನು ತೋರಿಸಿಕೊಟ್ಟಿದೆ. ಅದೇನೆಂದರೆ ೦-೬ ವಯೋಮಾನದ ಮಕ್ಕಳ ಲಿಂಗ ಅನುಪಾತವು ಕಳೆದ ದಶಕದಲ್ಲಿ ತೀವ್ರ ಕುಸಿತವನ್ನು ಅನುಭವಿಸಿದೆ. ಅದು ೧೯೯೧ರ ೯೬೦ ರಿಂದ ೨೦೦೧ರಲ್ಲಿ ೯೪೬ಕ್ಕೆ ಇಳಿದಿದೆ. ಕೋಷ್ಟಕ-೩ರಲ್ಲಿ ತೋರಿಸಿರುವಂತೆ ಮಕ್ಕಳ ಲಿಂಗ ಅನುಪಾತವು ೧೯೯೧ ರಲ್ಲಿ ಒಟ್ಟು ಜನಸಂಖ್ಯೆಯ ಲಿಂಗ ಅನುಪಾತಕ್ಕೆ ಸಮನಾಗಿತ್ತು. ಆದರೆ ೨೦೦೧ರಲ್ಲಿ ಮಕ್ಕಳ ಲಿಂಗ ಅನುಪಾತವು ಒಟ್ಟು ಜನಸಂಖ್ಯೆಯ ಲಿಂಗ ಅನುಪಾತಕ್ಕಿಂತ ತುಂಬಾ ಕೆಳಮಟ್ಟದಲ್ಲಿದೆ. ಇವೆರಡರ ನಡುವಿನ ವ್ಯತ್ಯಾಸ ೧೫ ಅಂಶಗಳಷ್ಟಿದೆ.

ಕರ್ನಾಟಕದಲ್ಲಿ ೨೦೦೧ರಲ್ಲಿ ಒಟ್ಟು ೨೦ ಜಿಲ್ಲೆಗಳ ಪೈಕಿ ೧೪ ಜಿಲ್ಲೆಗಳಲ್ಲಿ ಮಕ್ಕಳ ಲಿಂಗ ಅನುಪಾತವು ಕಡಿಮೆಯಾಗಿದೆ. ಉಳಿದ ೬ ಜಿಲ್ಲೆಗಳಲ್ಲಿ ಅದು ಅಧಿಕಗೊಂಡಿದೆ. ಕುತೂಹಲಕಾರಿ ಸಂಗತಿಯೆಂದರೆ ಒಟ್ಟು ಜನಸಂಖ್ಯೆಗೆ ಸಂಬಂಧಿಸಿದಂತೆ ಲಿಂಗ ಅನುಪಾತವು ೧೦೦೦ಕ್ಕಿಂತ ಅಧಿಕವಿರುವ ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಮಕ್ಕಳ ಲಿಂಗ ಅನುಪಾತವು ೧೦೦೦ಕ್ಕಿಂತ ಕಡಿಮೆಯಿದೆ ಮತ್ತು ಅದು ಕಳೆದ ದಶಕದಲ್ಲಿ ೯೬೬ ರಿಂದ ೯೫೨ಕ್ಕೆ ಕುಸಿದಿದೆ. ಈ ರೀತಿಯಲ್ಲಿ ಮಕ್ಕಳ ಲಿಂಗ ಅನುಪಾತವು ಕಡಿಮೆಯಾಗುತ್ತಿರುವುದಕ್ಕೆ ಕಾರಣಗಳನ್ನು ಗುರುತಿಸುವ ಅಗತ್ಯವಿದೆ. ಈ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಇದರಿಂದ ಉಂಟಾಗಿರುವ ಪರಿಣಾಮಗಳನ್ನು ಗುರುತಿಸಬೇಕಾಗಿದೆ.

ಅನೇಕ ಅಧ್ಯಯನಗಳು ತೋರಿಸಿರುವಂತೆ ಹಾಗೂ ದೃಢಪಡಿಸಿರುವಂತೆ ಮಕ್ಕಳ ಲಿಂಗ ಅನುಪಾತವು ತೀವ್ರವಾಗಿ ಕುಸಿಯುತ್ತಿರುವುದು ಸಮಾಜದಲ್ಲಿ ಹೆಣ್ಣು ಮಕ್ಕಳ ಬಗ್ಗೆ ಇರುವ ತಾರತಮ್ಯವಾದಿ ಮನೋಭಾವದ ಸೂಚಿಯಾಗಿದೆ. ಸಮಾಜದಲ್ಲಿ ಗಂಡು ಮಕ್ಕಳ ಬಗ್ಗೆ ಅತಿಯಾದ ವ್ಯಾಮೋಹವಿದೆ. ಹೆಣ್ಣು ಮಗುವಿನ ಜನನವನ್ನು 'ಹೊರೆ', 'ಭಾರ'ವೆಂದು ಭಾವಿಸುವ ಪ್ರವೃತ್ತಿಯು ಸಮಾಜದಲ್ಲಿದೆ. ಹೆಣ್ಣುಮಕ್ಕಳ ಲಾಲನೆ-ಪೋಷಣೆಯನ್ನು ನಿರ್ಲಕ್ಷಿಸಲಾಗುತ್ತಿದೆ. ಎಳೆಯ ವಯಸ್ಸಿನಲ್ಲಿ ಅವರು ತೀವ್ರ ಶೋಷಣೆಗೆ ಹಾಗೂ ತಾರತಮ್ಯಕ್ಕೆ ತುತ್ತಾಗುತ್ತಿದ್ದಾರೆ. ಈ ಕಾರಣದಿಂದಾಗಿಯೇ ಭಾರತದಲ್ಲಿ ೩೫ನೆಯ ವಯಸ್ಸಿನವರೆಗೆ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಿದೆ. ಇದನ್ನು ಕೋಷ್ಟಕ-೪ರಲ್ಲಿ ತೋರಿಸಿದೆ. ಮಹಿಳೆಯರು ೩೫ನೆಯ ವಯಸ್ಸನ್ನು ದಾಟಿದರೆ ಅವರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಕಡಿಮೆಯಾಗುತ್ತದೆ. ಸಾಮಾನ್ಯವಾಗಿ ಅವರ ಆಯುರ್ಮಾನವು ಪುರುಷರ ಆಯುರ್ಮಾನಕ್ಕಿಂತ ಅಧಿಕವಾಗಿರುತ್ತದೆ.

ಮಕ್ಕಳ ಲಿಂಗ ಅನುಪಾತವು ಕುಸಿಯುತ್ತಿರುವುದಕ್ಕೆ ಅನೇಕ ಕಾರಣಗಳನ್ನು ಗುರುತಿಸಲಾಗಿದೆ. ಅದರ ಪರಿಣಾಮಗಳ ಸ್ವರೂಪವು ಭಿನ್ನವಾಗಿದೆ. ಅನೇಕ ಅಧ್ಯಯನಗಳು ಗುರುತಿಸಿರುವಂತೆ ಮಕ್ಕಳ ಲಿಂಗ ಅನುಪಾತವು ಕಡಿಮೆಯಾಗುತ್ತಿರುವುದಕ್ಕೆ ನಮ್ಮ ಸಮಾಜದಲ್ಲಿರುವ ಲಿಂಗ ಸಂಬಂಧಿ ತಾರತಮ್ಯ ಧೋರಣೆಯು ಪ್ರಮುಖ ಕಾರಣವಾಗಿದೆ.

ಸಮಾಜದಲ್ಲಿ ಗಂಡು ಮಗುವಿನ ವ್ಯಾಮೋಹ ತೀವ್ರವಾಗಿದೆ. ಹೆಣ್ಣು ಮಗುವನ್ನು ಇಂದಿಗೂ 'ಹೊರೆ', 'ಭಾರ'ವೆಂದು ತಿಳಿಯುವ ಮನೋಭಾವವು ವ್ಯಾಪಕವಾಗಿದೆ. ಈ ಬಗೆಯ ಭಾವನೆ-ಧೋರಣೆಯಿಂದಾಗಿ ಲಾಲನೆ-ಪಾಲನೆಯಲ್ಲಿ ಹೆಣ್ಣು ಮಕ್ಕಳು ಅಲಕ್ಷ್ಯಕ್ಕೆ ಗುರಿಯಾಗುತ್ತಿದ್ದಾರೆ. ಇಂತಹ ತಾರತಮ್ಯವಾದಿ ಧೋರಣೆ, 'ಭಾರ'ವೆಂದು ಭಾವಿಸುವ ಮನೋಭಾವ ಹಾಗೂ ಹೆಣ್ಣು ಮಕ್ಕಳ ಅಲಕ್ಷ್ಯದ ಪರಿಣಾಮದಿಂದಾಗಿ ಹರೆಯದ ವಯೋ ರಚನೆಯಲ್ಲಿ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಾಗಿ ಬಿಟ್ಟಿದೆ. ಭಾರತದಲ್ಲಿ ೩೦-೩೫ನೆಯ ವಯೋಮಾನದವರೆಗೆ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಾಗಿರುವುದನ್ನು ಕೋಷ್ಟಕ-೪ರಲ್ಲಿ ತೋರಿಸಿದೆ. ಇದರಲ್ಲಿ ವಿವಿಧ ವಯೋಮಾನದಲ್ಲಿ ಮಹಿಳೆಯರ ಮತ್ತು ಪುರುಷರ ಮರಣದ ಪ್ರಮಾಣವನ್ನು ೧೯೭೦ ರಿಂದ ೧೯೯೮ರವರೆಗೆ ನೀಡಲಾಗಿದೆ. ಅಂಕಣ-೫ರಲ್ಲಿ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಶೇಕಡಾ ಎಷ್ಟು ಅಧಿಕವಿದೆ ಎಂಬುದನ್ನು ತೋರಿಸಿದೆ.

ಅಪೌಷ್ಟಿಕತೆ, ಅನಕ್ಷರತೆ, ಅನಾರೋಗ್ಯ ಹಾಗೂ ಅಲಕ್ಷ್ಯತೆಗಳಿಂದಾಗಿ ಮಹಿಳೆಯರು ತಮ್ಮ ಹರೆಯದ ವಯಸ್ಸಿನಲ್ಲಿ ಹೆಚ್ಚಿನ ಮಟ್ಟದ ಮರಣ ಪ್ರಮಾಮದಿಂದ ನರಳುತ್ತಿದ್ದಾರೆ. ಅಮರ್ತ್ಯಸೆನ್ ಹೇಳುವಂತೆ (೧೯೯೦, ೨೦೦೧) ಸಮಾಜದಲ್ಲಿ ಒಂದು ಪಕ್ಷ ಲಿಂಗ ಸಮಾನತೆ ಇದ್ದುದಾದರೆ, ಲಿಂಗ ಸಂಬಂಧಿ ತಾರತಮ್ಯಗಳಿಲ್ಲದಿದ್ದರೆ ಲಿಂಗ ಅನುಪಾತವು ೧೦೦೦ಕ್ಕಿಂತ ಅಧಿಕವಿರಬೇಕು ಮತ್ತು ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಕಡಿಮೆಯಿರಬೇಕು. ಇದು ಜೈವಿಕವಾಗಿ ಇರಬೇಕಾದ ಸಂಗತಿ. ಆದರೆ ಪರಿಸ್ಥಿತಿ ಈ ರೀತಿಯಲ್ಲಿಲ್ಲ.

**ಶಿಶುಹತ್ಯೆ ಮತ್ತು ಭ್ರೂಣಹತ್ಯೆ**

ಸತೀಶ್ ಬಿ. ಅಗ್ನಿಹೋತ್ರಿ (೨೦೦೩), ಎಸ್. ಸುಧಾ.ಎಸ್. ಇರುದಯರಾಜನ್ (೨೦೦೩), ಸಿದ್ಧಾಂತ.ಎಸ್‌ಮತ್ತು ಇತರರು (೨೦೦೩) ಮಹೇಂದ್ರ, ಕೆ. ಪ್ರೇಮಿ (೨೦೦೧), ಅಮರ್ತ್ಯಸೆನ್ (೨೦೦೧) ಮುಂತಾದವರ ಅಧ್ಯಯನಗಳು ಇತ್ತೀಚೆಗೆ ಬೆಳಕಿಗೆ ತಂದಿರುವ ಸಂಗತಿಯೆಂದರೆ ಇದುವರೆವಿಗೂ ಹುಟ್ಟಿದ ನಂತರ (Post-natal) ಅಲಕ್ಷ್ಯ, ತಾರತಮ್ಯ ಮುಂತಾದ ಕ್ರಮಗಳ ಮೂಲಕ ಸಮಾಜದವು ಮಹಿಳೆಯರ ಸಾವಿಗೆ ಕಾರಣವಾಗುತ್ತಿತ್ತು. ಇಂತಹ ಕ್ರಮದಿಂದ ಮಹಿಳೆಯರ ಸಂಖ್ಯೆಯನ್ನು ಕಡಿಮೆ ಮಾಡಲಾಗುತ್ತಿತ್ತು. ಇದನ್ನು ಶಿಶುಹತ್ಯೆಯೆಂದು ನೇರವಾಗಿ ಕರೆಯಲಾಗದಿದ್ದರೂ, ಪರಿಣಾಮದಲ್ಲಿ ಶಿಶುಹತ್ಯೆಗೆ (infanticide) ಸಮನಾಗಿತ್ತು. ಇಂದು ಇಂತಹ ಕಣ್ಣೆದುರಿಗೆ ನಡೆಯುವ ಶಿಶುಹತ್ಯೆಯಂತಹ ಪದ್ಧತಿಗೆ ಪ್ರತಿಯಾಗಿ ಭ್ರೂಣಾವಸ್ಥೆಯಲ್ಲಿ (Pre-natal) ಮಗುವಿನ ಲಿಂಗವನ್ನು ಪತ್ತೆ ಮಾಡಿ, ಅದು ಹೆಣ್ಣಾಗಿದ್ದರೆ, ಅದನ್ನು ನಾಶ ಮಾಡುವಂತಹ ಪದ್ಧತಿ ರೂಢಿಗೆ ಬಂದಿದೆ.

ಇದು ಭ್ರೂಣಹತ್ಯೆ (Foeticide). ಶಿಶುಹತ್ಯೆಯು ಭ್ರೂಣಹತ್ಯೆಗೆ ದಾರಿ ಮಾಡಿಕೊಟ್ಟಿರುವ ಸಾಧ್ಯತೆಯನ್ನು ಅನೇಕ ಅಧ್ಯಯನಗಳು ಗುರುತಿಸಿವೆ. ಹುಟ್ಟಿದ ನಂತರ ಹೆಣ್ಣು ಶಿಶುವನ್ನು ಸಾಯಿಸುವುದಕ್ಕಿಂತ ಹುಟ್ಟುವ ಮೊದಲೆ ಅದನ್ನು ನಾಶಮಾಡುವುದು ಹೆಚ್ಚು ಅನುಕೂಲಕರವಾಗಿ ಕಂಡು ಬಂದಿದೆ. ಈ ರೀತಿಯ ಪಲ್ಲಟವು ಉಂಟಾಗಿರುವುದನ್ನು ೧೯೮೧ ಮತ್ತು ೧೯೯೧ರ ಜನಗಣತಿ ವಿವರದಿಂದ ದೃಢಪಡಿಸಲಾಗಿದೆ. ಅದರ ವಿವರಗಳನ್ನು ಕೋಷ್ಟಕ-೫ರಲ್ಲಿ ತೋರಿಸಲಾಗಿದೆ. ಈ ಕೋಷ್ಠಕದಲ್ಲಿ ಎರಡು ವಿವರಗಳನ್ನು ನೀಡಲಾಗಿದೆ. ಮೊದಲನೆಯದು ಹುಟ್ಟುವ ಸಂದರ್ಭದಲ್ಲಿ ಗಂಡು-ಹೆಣ್ಣು ಶಿಶುಗಳ ಲಿಂಗ ಅನುಪಾತ (ಪ್ರತಿ ನೂರು ಹೆಣ್ಣು ಶಿಶುಗಳ ಜನನಕ್ಕೆ ಪ್ರತಿಯಾಗಿ ಜನಿಸುವ ಗಂಡು ಶಿಶುಗಳ ಸಂಖ್ಯೆ) ಮತ್ತು ಐದು ವರ್ಷದೊಳಗಿನ ವಯೋಮಾನದಲ್ಲಿ ಹೆಣ್ಣು ಶಿಶುಗಳ ಮತ್ತು ಗಂಡು ಶಿಶುಗಳ ಮರಣದ ಅನುಪಾತ (ಪ್ರತಿ ನೂರು ಗಂಡು ಮಕ್ಕಳ ಸಾವಿಗೆ ಪ್ರತಿಯಾಗಿ ಸಾಯುವ ಹೆಣ್ಣು ಮಕ್ಕಳ ಸಂಖ್ಯೆ). ಕೋಷ್ಠಕ-೫ರಲ್ಲಿ ತೋರಿಸಿರುವಂತೆ ೧೯೮೧ ರಲ್ಲಿ ಪ್ರತಿ ನೂರು ಹೆಣ್ಣು ಶಿಶುಗಳ ಜನನಕ್ಕೆ ಪ್ರತಿಯಾಗಿ ಹುಟ್ಟಿದ ಗಂಡು ಶಿಶುಗಳ ಸಂಖ್ಯೆ ೧೦೧.೫. ಇದು ೧೯೯೧ ರಲ್ಲಿ ೧೦೪.೦ ರಷ್ಟಾಗಿದೆ. ಈ ಬಗೆಯ ಅನುಪಾತವು ೧೦೨ ಕ್ಕಿಂತ ಕಡಿಮೆಯಿದ್ದ ಜಿಲ್ಲೆಗಳ ಸಂಖ್ಯೆ ೧೯೮೧ರಲ್ಲಿ ೩೩೩ ಇದ್ದುದು ೧೯೯೧ರಲ್ಲಿ ೧೩೬ಕ್ಕೆ ಇಳಿದಿದೆ. ಪ್ರತಿ ನೂರು ಹೆಣ್ಣು ಶಿಶುಗಳ ಜನನಕ್ಕೆ ಪ್ರತಿಯಾಗಿ ಹುಟ್ಟಿದ ಗಂಡು ಶಿಶುಗಳ ಅನುಪಾತ ೧೦೧.೦೫ ರಿಂದ ೧೦೪ಕ್ಕೆ ಏರಿಕೆಯಾಗಿರುವುದನ್ನು 'ಪುರುಷಾಧಿಕ್ಯ' ಸ್ವರೂಪರವಾಗಿ ಪರಿಗಣಿಸಬಹುದಾಗಿದೆ. ಈ ಪುರುಷಾಧಿಕ್ಯವನ್ನು ಪಡೆದ ಜಿಲ್ಲೆಗಳ ಸಂಖ್ಯೆಯು ೧೯೮೧ ರಿಂದ ೧೯೯೧ರಲ್ಲಿ ಏರಿಕೆಯಾಗಿರುವುದು ಕಂಡು ಬಂದಿದೆ. ಪ್ರತಿ ನೂರು ಹೆಣ್ಣು ಶಿಶುಗಳ ಜನನಕ್ಕೆ ಪ್ರತಿಯಾಗಿ ಜನಿಸಿದ ಗಂಡು ಶಿಶುಗಳ ಸಂಖ್ಯೆ ೧೦೨ ರಿಂದ ೧೦೬ ರಷ್ಟಿದ್ದ ಜಿಲ್ಲೆಗಳ ಸಂಖ್ಯೆ ದೇಶದಲ್ಲಿ ೧೯೮೧ರಲ್ಲಿ ೧೪೭ ಇದ್ದುದು ೧೯೯೧ರಲ್ಲಿ ೨೩೧ಕ್ಕೆ ಏರಿಕೆಯಾಗಿದೆ. ಅದೇ ರೀತಿ ಈ ಅನುಪಾತ ೧೦೭ಕ್ಕಿಂತ ಅಧಿಕವಿರುವ ಜಿಲ್ಲೆಗಳ ಸಂಖ್ಯೆ ೧೯೮೧ ರಿಂದ ೧೯೯೧ರಲ್ಲಿ ೨೬ ರಿಂದ ೮೫ಕ್ಕೆ ಹೆಚ್ಚಿವೆ. ಜನಸಂಖ್ಯೆಯು ಪುರುಷಾಧಿಕ್ಯ ಸ್ವರೂಪ ಪಡೆದುಕೊಳ್ಳುತ್ತಿರುವುದನ್ನು ಇದು ಸೂಚಿಸುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ವ್ಯಾಪಕವಾಗಿ ಹೆಚ್ಚುತ್ತಿರುವ ಹೆಣ್ಣು ಭ್ರೂಣಹತ್ಯೆ.

ಐದು ವರ್ಷದ ವಯೋಮಾನದಲ್ಲಿ ಪ್ರತಿ ನೂರು ಗಂಡು ಮಕ್ಕಳ ಮರಣಕ್ಕೆ ಪ್ರತಿಯಾಗಿ ಸತ್ತ ಹೆಣ್ಣು ಮಕ್ಕಳ ಸಂಖ್ಯೆಯು ೧೯೮೧ ರಿಂದ ೧೯೯೧ರ ಅವಧಿಯಲ್ಲಿ ಬಹಳ ಬದಲಾವಣೆಯಾಗಿಲ್ಲ. ಈ ಅನುಪಾತ ೧೦೫.೧ ರಿಂದ ೧೦೪.೩ಕ್ಕೆ ಇಳಿದಿದೆ. ಈ ಅನುಪಾತವು ೧೦೦ಕ್ಕಿಂತ ಕಡಿಮೆಯಿರುವ ಜಿಲ್ಲೆಗಳ ಸಂಖ್ಯೆ ಅಧಿಕಗೊಂಡಿದೆ. ಹುಟ್ಟಿನ ನಂತರ ಹೆಣ್ಣುಮಕ್ಕಳನ್ನು ಅಪ್ರತ್ಯಕ್ಷ ವಿಧಾನದಿಂದ ಸಾಯಲು ಬಿಡುತ್ತಿದ್ದ ಪದ್ಧತಿ ಕಡಿಮೆಯಾಗಿದೆ. ಒಟ್ಟಾರೆ ನಮ್ಮ ಸಮಾಜದ ಸಂದರ್ಭದಲ್ಲಿ ಶಿಶುಹತ್ಯೆಯು ಭ್ರೂಣ

ಹತ್ಯೆಗೆ ದಾರಿ ಮಾಡಿಕೊಟ್ಟಿರುವುದು ಇದರಿಂದ ಸ್ಪಷ್ಟವಾಗುತ್ತದೆ. ನಮ್ಮ ರಾಜ್ಯದಲ್ಲಿ ೦-೬ ವಯೋಮಾನದ ಮಕ್ಕಳ ಲಿಂಗ ಅನುಪಾತವು ಕಡಿಮೆಯಾಗುತ್ತಿರುವುದಕ್ಕೆ ಕಾರಣ ಹೆಣ್ಣು ಮಕ್ಕಳ ಮರಣ ಪ್ರಮಾಣವು ಅಧಿಕವಾಗಿರುವುದಲ್ಲ. ಅದಕ್ಕೆ ಪ್ರತಿಯಾಗಿ ಹೆಣ್ಣು ಶಿಶುಗಳ ಜನನವೇ ಕಡಿಮೆಯಾಗಿರುವುದು ಇದಕ್ಕೆ ಕಾರಣವಾಗಿದೆ. ಮಗುವಿನ ಲಿಂಗವನ್ನು ಭ್ರೂಣಾವಸ್ಥೆಯಲ್ಲೇ ಪತ್ತೆ ಮಾಡುವ ತಂತ್ರಜ್ಞಾನ ಅಭಿವೃದ್ಧಿ ಹೊಂದಿರುವುದರ ಪರಿಣಾಮ ವಾಗಿ ಇಂದು ಹೆಣ್ಣುಮಕ್ಕಳು ಹುಟ್ಟುವುದೇ ದುರ್ಲಭವಾಗಿದೆ (ಅಮರ್ತ್ಯಸೇನ್-೨೦೦೧).

## ಇಬ್ಬಗೆಯ ಅಪಾಯಗಳು

ಭಾರತದ-ಕರ್ನಾಟಕದ ಜನಸಂಖ್ಯೆಯು ಪುರುಷಾಧಿಕ್ಯ ಸ್ವರೂಪ ಪಡೆಯುತ್ತಿರುವುದು ಮೇಲಿನ ಮಾಹಿತಿ - ಚರ್ಚೆಯಿಂದ ಸ್ಪಷ್ಟವಾಗುತ್ತದೆ. ಕೆಲವು ಅಧ್ಯಯನಗಳು (ಎನ್. ಸುಧಾ, ಎಸ್. ಇರುದಯರಾಜನ್ ೨೦೦೩). ನಮ್ಮ ಸಮಾಜದ ಸಂದರ್ಭದಲ್ಲಿ ಮಹಿಳೆ ಯರು ಎರಡೂ ಬಗೆಯ ಅಪಾಯಗಳನ್ನು, ಅಂದರೆ ಹುಟ್ಟುವ ಪೂರ್ವದ (Pre-natal) ಮತ್ತು ಹುಟ್ಟಿದ ನಂತರ (Post-natal)ದ ಅಪಾಯಗಳನ್ನು ಎದುರಿಸುತ್ತಿರುವ ಸಂಗತಿಯನ್ನು ಗುರುತಿಸಿವೆ. ಮೊದಲನೆಯದಾಗಿ ಭ್ರೂಣಹತ್ಯೆಯಿಂದಾಗಿ ಹೆಣ್ಣು ಮಕ್ಕಳ ಜನನ ಪ್ರಮಾಣವೇ ಕಡಿಮೆಯಾಗಿದೆ. ಎರಡನೆಯದಾಗಿ ಹುಟ್ಟಿದ ಹೆಣ್ಣು ಮಕ್ಕಳಲ್ಲಿ ಬಹಳಷ್ಟು ಮಂದಿ ತಾರತಮ್ಯ, ಅಲಕ್ಷ್ಯದಿಂದಾಗಿ ೩೫ ವರ್ಷದೊಳಗೆ ಸಾವನಪ್ಪುತ್ತಿದ್ದಾರೆ. ಹೀಗೆ ನಮ್ಮ ಸಮಾಜದ ಸಂದರ್ಭದಲ್ಲಿ ಮಹಿಳೆಯರು ಇಬ್ಬಗೆಯ ಅಪಾಯಗಳನ್ನು ಎದುರಿಸುತ್ತಿದ್ದಾರೆ. ಭ್ರೂಣಹತ್ಯೆ ಮತ್ತು ಶಿಶುಹತ್ಯೆ ಎರಡೂ ಅಪಾಯಗಳಿಂದ ಮಹಿಳೆಯರ ಸಂಖ್ಯೆ ಸಮಾಜದಲ್ಲಿ ಕಡಿಮೆಯಾಗುತ್ತದೆ. ಒಟ್ಟಾರೆಯಾಗಿ ಇಷ್ಟು ಹೇಳಬಹುದು.

* ಸಮಾಜದಲ್ಲಿ ಶಿಶುಹತ್ಯೆಯು ಸಂಪೂರ್ಣವಾಗಿ ನಿಂತಿಲ್ಲ. ಆದರೆ ಅದರ ಪ್ರಮಾಣ ಕಡಿಮೆಯಾಗಿದೆ.
* ಸಮಾಜದಲ್ಲಿ ಭ್ರೂಣಹತ್ಯೆಯ ಪ್ರಮಾಣ ಅಧಿಕಗೊಂಡಿದೆ.

## ಮಕ್ಕಳ ಲಿಂಗ ಅನುಪಾತದಲ್ಲಿ ನಗರ-ಗ್ರಾಮೀಣ ವ್ಯತ್ಯಾಸ

ಮಕ್ಕಳ ಲಿಂಗ ಅನುಪಾತದ ಕಡಿತಕ್ಕೆ ಸಂಬಂಧಿಸಿದ ಒಂದು ವಿಶೇಷವೆಂದರೆ ಈ ಕಡಿತದ ಪ್ರಮಾಣವು ಗ್ರಾಮೀಣ ಪ್ರದೇಶಕ್ಕಿಂತ ನಗರ ಪ್ರದೇಶದಲ್ಲಿ ತೀವ್ರವಾಗಿದೆ. ಲಿಂಗಪತ್ತೆ ಮಾಡುವ ಯಂತ್ರಗಳು ಮತ್ತು ಆ ತಂತ್ರಜ್ಞಾನ ಹಾಗೂ ಅದರ ಸೌಲಭ್ಯವು ನಗರ ಪ್ರದೇಶದಲ್ಲಿ ಅಧಿಕವಾಗಿರುವುದರಿಂದಾಗಿ ಹೆಣ್ಣು ಭ್ರೂಣಗಳ ಹತ್ಯೆಯ ಪ್ರಮಾಣವು ನಗರ ಪ್ರದೇಶದಲ್ಲಿ ವ್ಯಾಪಕವಾಗಿದೆ. ಅಧಿಕ ಪ್ರಮಾಣದ ಅಕ್ಷರಜ್ಞಾನ ಹಾಗೂ ಸಾಕ್ಷರತೆಯೂ ಇದಕ್ಕೆ ಕಾರಣವಾಗಿರಬಹುದು. ಕರ್ನಾಟಕಕ್ಕೆ ಸಂಬಂಧಿಸಿದಂತೆ ೧೯೯೧ ಮತ್ತು ೨೦೦೧ ರಲ್ಲಿ ಮಕ್ಕಳಲಿಂಗ ಅನುಪಾತದ ಕಡಿತದ ಪ್ರಮಾಣವು ನಗರ ಪ್ರದೇಶ ಹಾಗೂ ಗ್ರಾಮೀಣ

ಪ್ರದೇಶಗಳ ನಡುವೆ ಎಷ್ಟಿದೆ ಎಂಬುದನ್ನು ಕೋಷ್ಠಕ-೬ರಲ್ಲಿ ತೋರಿಸಿದೆ. ಈ ಕೋಷ್ಠಕವು ಸ್ಪಷ್ಟವಾಗಿ ತೋರಿಸುವಂತೆ ೧೯೯೧ರಲ್ಲಿ ಮಕ್ಕಳ ಲಿಂಗ ಅನುಪಾತದ ಪ್ರಮಾಣವು ಗ್ರಾಮೀಣ ಪ್ರದೇಶಕ್ಕಿಂತ ನಗರ ಪ್ರದೇಶದಲ್ಲಿ ಕಡಿಮೆಯಿದೆ. ಎಷ್ಟು ಕಡಿಮೆಯಿದೆ ಎಂಬುದನ್ನು ಅಲ್ಲಿ ತೋರಿಸಿದೆ. ಈ ಪ್ರಮಾಣವು ಅತ್ಯಂತ ಅಧಿಕವೆಂದರೆ-೨೫ ಮಂಡ್ಯ ಜಿಲ್ಲೆಯಲ್ಲಿದ್ದರೆ ಅದರ ಕನಿಷ್ಠ ಪ್ರಮಾಣ-೧ ಶಿವಮೊಗ್ಗ ಜಿಲ್ಲೆಯಲ್ಲಿದೆ.

ಮಕ್ಕಳ ಲಿಂಗ ಅನುಪಾತದಲ್ಲಿನ ನಗರ ಹಾಗೂ ಗ್ರಾಮೀಣ ಪ್ರದೇಶಗಳ ನಡುವಣ ವ್ಯತ್ಯಾಸದ ಪ್ರಮಾಣವು ೨೦೦೧ರಲ್ಲಿ ಅಧಿಕಗೊಂಡಿರುವುದನ್ನು ಕೋಷ್ಠಕದಲ್ಲಿ ತೋರಿಸಿದೆ. ಇಲ್ಲಿ ಈ ವ್ಯತ್ಯಾಸವು ಗರಿಷ್ಠ-೬೨ ಬಿಜಾಪುರ ಜಿಲ್ಲೆಯಲ್ಲಿದ್ದರೆ ಕನಿಷ್ಠ-೨ ಧಾರವಾಡ ಜಿಲ್ಲೆಯಲ್ಲಿದೆ. ರಾಜ್ಯಮಟ್ಟದಲ್ಲಿ ನಗರ ಪ್ರದೇಶದಲ್ಲಿನ ಮಕ್ಕಳ ಲಿಂಗ ಅನುಪಾತವು ಗ್ರಾಮೀಣ ಪ್ರದೇಶದಲ್ಲಿನ ಮಕ್ಕಳ ಲಿಂಗ ಅನುಪಾತಕ್ಕಿಂತ ೧೨ ರಷ್ಟು ಕಡಿಮೆಯಿದ್ದರೆ ಅದು ೨೦೦೧ರಲ್ಲಿ ೧೫ ರಷ್ಟಾಗಿದೆ. ರಾಜ್ಯದ ೨೦ ಜಿಲ್ಲೆಗಳ ಪೈಕಿ ಶೇ. ೩೦ರಷ್ಟು ಜಿಲ್ಲೆಗಳಲ್ಲಿ ಮಾತ್ರ ನಗರ-ಗ್ರಾಮೀಣ ನಡುವಣ ವ್ಯತ್ಯಾಸವು ೧೫ ಅಂಶಗಳಿಗಿಂತ ಅಧಿಕವಿತ್ತು. ಇದು ೨೦೦೧ ರಲ್ಲಿ ಶೇ. ೪೪ಕ್ಕೆ ಏರಿಕೆಯಾಗಿದೆ. ಇದರಿಂದ ಎರಡು ಸಂಗತಿಗಳು ಸ್ಪಷ್ಟವಾಗುತ್ತವೆ.

* ಮಕ್ಕಳ ಲಿಂಗ ಅನುಪಾತದ ಕಡಿತದ ಪ್ರಮಾಣವು ಗ್ರಾಮೀಣ ಪ್ರದೇಶದಲ್ಲಿರುವುದಕ್ಕಿಂತ ನಗರ ಪ್ರದೇಶದಲ್ಲಿ ಅಧಿಕವಾಗಿದೆ.
* ಮಕ್ಕಳ ಲಿಂಗ ಅನುಪಾತದ ಕಡಿತ ಗ್ರಾಮೀಣ ಪ್ರದೇಶಕ್ಕಿಂತ ನಗರ ಪ್ರದೇಶದಲ್ಲಿ ತೀವ್ರಗತಿಯಲ್ಲಿ ನಡೆದಿದೆ. (ವಿವರಗಳಿಗೆ ನೋಡಿ : ಇಂಡಿಯಾ ಟು ಡೇ : ನವಂಬರ್ ೪-೧೦.೨೦೦೩ ಪು. ೧೬-೨೨)

## ಕುಟುಂಬಗಳ ವರಮಾನ ಮತ್ತು ಮಕ್ಕಳ ಲಿಂಗ ಅನುಪಾತ

ನ್ಯಾಷನಲ್ ಸ್ಯಾಂಪಲ್ ಸರ್ವೆ ಸಂಸ್ಥೆ (ಎನ್ ಎಸ್ ಎಸ್ ಒ)ಯು ದೇಶದ್ಯಾಂತ ಅನೇಕ ಬಗೆಯ ವಿಷಯವನ್ನು ಕುರಿತಂತೆ ಸಮೀಕ್ಷೆ ನಡೆಸುತ್ತದೆ. ಇದು ವಿವಿಧ ವರಮಾನ ವರ್ಗಗಳ ಅನುಭೋಗ ವೆಚ್ಚದ ಮಾಹಿತಿಯನ್ನು ಸಂಗ್ರಹಿಸುತ್ತದೆ. ಈ ಸಮೀಕ್ಷೆಯನ್ನು ಆಧರಿಸಿ ವಿವಿಧ ವರಮಾನ ವರ್ಗಗಳಿಗೆ ಸಂಬಂಧಿಸಿದ ಲಿಂಗ ಅನುಪಾತವನ್ನು ಕೋಷ್ಠಕ-೭ರಲ್ಲಿ ತೋರಿಸಿದೆ. ಕೋಷ್ಟಕ-೭ರಲ್ಲಿ ಸ್ಪಷ್ಟವಾಗಿ ಕಂಡು ಬರುವ ಸಂಗತಿಯೆಂದರೆ ಕುಟುಂಬಗಳ ವರಮಾನದ ಮಟ್ಟವು ಏರಿಕೆಯಾದಂತೆ ಲಿಂಗ ಅನುಪಾತವು ಕಡಿಮೆಯಾಗುತ್ತಿದೆ. ವರಮಾನದ ಮಟ್ಟವು ಕಡಿಮೆಯಿದ್ದಾಗ ಲಿಂಗ ಅನುಪಾತವು ಅಧಿಕವಾಗಿರುತ್ತದೆ ಮತ್ತು ವರಮಾನದ ಮಟ್ಟವು ಅಧಿಕವಿದ್ದಾಗ ಲಿಂಗ ಅನುಪಾತವು ಕಡಿಮೆಯಾಗುತ್ತದೆ. ಇದನ್ನು 'ಉನ್ನತ ವರಮಾನದ ಪರಿಣಾಮ'ವೆಂದು ಕರೆಯಬಹುದು. ವರಮಾನವು ಉತ್ತಮಗೊಂಡಂತೆ ಗಂಡು ಮಕ್ಕಳ ವ್ಯಾಮೋಹ ಅಧಿಕಗೊಳ್ಳುವ ಪ್ರವೃತ್ತಿ ಕಂಡು ಬರುತ್ತದೆ.

ವರಮಾನವು ಉತ್ತಮಗೊಳ್ಳುವುದು ಹೆಣ್ಣು ಮಕ್ಕಳಿಗೆ ಅಪಾಯಕಾರಿಯಾಗಿ ಪರಿಣಮಿಸಿದೆ. ಕುಟುಂಬಗಳ ವರಮಾನವು ಅಧಿಕಗೊಂಡಂತೆ ಲಿಂಗ ತಾರತಮ್ಯವು ತೀವ್ರಗೊಳ್ಳುತ್ತಿರುವ ಸಂಗತಿಯು ಇಲ್ಲಿ ಸ್ಪಷ್ಟವಾಗಿದೆ.

## ಸಮಾರೋಪ

ಈ ಅಧ್ಯಯನ ಪ್ರಬಂಧದಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ಕಾಣೆಯಾದ ಮಹಿಳೆಯರ ಪ್ರಮಾಣ, ಕಡಿಮೆಯಾಗುತ್ತಿರುವ ೦-೬ ವರ್ಷದ ಮಕ್ಕಳ ಲಿಂಗ ಅನುಪಾತ, ಮರಣ ಪ್ರಮಾಣದಲ್ಲಿನ ಲಿಂಗ ತಾರತಮ್ಯ, ಲಿಂಗ ಅನುಪಾತದಲ್ಲಿನ ಇಳಿಕೆಗೆ ಸಂಬಂಧಿಸಿದ ನಗರ-ಗ್ರಾಮೀಣ ವ್ಯತ್ಯಾಸ ಹಾಗೂ ಕುಟುಂಬಗಳ ವರಮಾನದ ಮಟ್ಟ ಮತ್ತು ಲಿಂಗ ಅನುಪಾತದ ಕಡಿತ ಮುಂತಾದ ಸಂಗತಿಗಳನ್ನು ಚರ್ಚಿಸಲಾಗಿದೆ. ಈ ಎಲ್ಲ ಸಂಗತಿಗಳಿಗೆ ಸಂಬಂಧಿಸಿದ ಮಾಹಿತಿಯನ್ನು ವಿವರವಾಗಿ ಕೋಷ್ಟಕಗಳಲ್ಲಿ ನೀಡಲಾಗಿದೆ. ಅನೂಚಾನವಾಗಿ ಹರಿದು ಕೊಂಡು ಬರುತ್ತಿರುವ ಲಿಂಗ ಸಂಬಂಧಿ ತಾರತಮ್ಯ ಹಾಗೂ ಅಸಮಾನತೆಗಳು ಅಭಿವೃದ್ಧಿಯ ಮಟ್ಟ ಉತ್ತಮಗೊಂಡಂತೆ ಕಡಿಮೆಯಾಗುವುದಕ್ಕೆ ಪ್ರತಿಯಾಗಿ ಉಲ್ಬಣಗೊಳ್ಳುತ್ತಾ ನಡೆದಿವೆ. ಹೆಣ್ಣು ಶಿಶುಹತ್ಯೆ ಮತ್ತು ಹೆಣ್ಣು ಭ್ರೂಣಹತ್ಯೆಗಳು ಅನಿರ್ಬಂಧಿತವಾಗಿ ಸಮಾಜದಲ್ಲಿ ನಡೆಯುತ್ತಿವೆ. ಅತ್ಯಂತ ಕುತೂಹಲಕಾರಿ ಸಂಗತಿಯೆಂದರೆ ಸಮಾಜದಲ್ಲಿ ಅಕ್ಷರ ಜ್ಞಾನದ ಮಟ್ಟ ಹಾಗೂ ವರಮಾನದ ಮಟ್ಟಗಳು ಉತ್ತಮಗೊಂಡಂತೆ ಲಿಂಗ ತಾರತಮ್ಯವು ತೀವ್ರವಾಗುತ್ತಾ ನಡೆದಿದೆ. ಹೆಣ್ಣು ಶಿಶುಹತ್ಯೆ ಹಾಗೂ ಹೆಣ್ಣು ಭ್ರೂಣಹತ್ಯೆಗಳ ಪ್ರಮಾಣವು ಗ್ರಾಮೀಣ ಪ್ರದೇಶಕ್ಕಿಂತ ನಗರ ಪ್ರದೇಶದಲ್ಲಿ ಅಧಿಕವಾಗಿರುವುದನ್ನು ಪ್ರಸ್ತುತ ಅಧ್ಯಯನ ದಲ್ಲಿ ತೋರಿಸಲಾಗಿದೆ.

ಲಿಂಗ ತಾರತಮ್ಯ, ಲಿಂಗ ಸಂಬಂಧಿ ಅಸಮಾನತೆ, ಮಹಿಳೆಯರ ಶೋಷಣೆ ಸ್ವರೂಪ ಮುಂತಾದವು ಉತ್ತರ ಭಾರತದಲ್ಲಿ ಮಾತ್ರ ತೀವ್ರವಾಗಿದೆಯೆಂದೂ, ಅವು ದಕ್ಷಿಣ ಭಾರತದಲ್ಲಿ ತೀವ್ರವಾಗಿಲ್ಲವೆಂದೂ ಹೇಳಲಾಗುತ್ತಿತ್ತು. ಆದರೆ ೨೦೦೧ರ ಜನಗಣತಿಯಲ್ಲಿನ ೦-೬ ವರ್ಷಗಳ ಮಕ್ಕಳ ಲಿಂಗ ಅನುಪಾತಕ್ಕೆ ಸಂಬಂಧಿಸಿದ ಮಾಹಿತಿಯು ಲಿಂಗ ತಾರತಮ್ಯಕ್ಕೆ ಸಂಬಂಧಿಸಿದ ಉತ್ತರ-ದಕ್ಷಿಣ ವಿಭಜನೆಯನ್ನು ಹುಸಿಗೊಳಿಸಿದೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ, ಇಂತಹ ಸಮಸ್ಯೆಗಳು ಅಭಿವೃದ್ಧಿಯ ಗತಿ ತೀವ್ರಗೊಂಡಂತೆ, ಸಾಕ್ಷರತೆ ಪ್ರಮಾಣ ಉತ್ತಮಗೊಂಡಂತೆ, ನಗರೀಕರಣ ವ್ಯಾಪಕವಾದಂತೆ ಇಲ್ಲವಾಗುತ್ತವೆ, ಸಹಜವಾಗಿ ಮಾಯವಾಗುತ್ತವೆ ಎಂಬ ನಂಬಿಕೆ ಇಂದು ಹುಸಿಯಾಗಿದೆ. ಈ ಸಮಸ್ಯೆಗಳನ್ನು ನೇರವಾಗಿ ಎದುರಿಸಬೇಕಾಗಿದೆ. ಈ ಬಗ್ಗೆ ಇಂದು ನಾವು ತೀವ್ರವಾಗಿ ಯೋಚಿಸಬೇಕಾಗಿದೆ. ಅದಕ್ಕೆ ಪೂರಕವಾದ ಅಂಕಿ-ಅಂಶಗಳ ಮಾಹಿತಿ ಯನ್ನು ಇಲ್ಲಿ ನೀಡಲಾಗಿದೆ.

## ಕರ್ನಾಟಕದಲ್ಲಿ ಲಿಂಗ ಅನುಪಾತ : ೧೯೯೧ ಮತ್ತು ೨೦೦೧

ಕೋಷ್ಟಕ-೧

| ಕ್ರಮ ಸಂಖ್ಯೆ | ಜಿಲ್ಲೆಗಳು | ಲಿಂಗ ಅನುಪಾತ (ಪ್ರತಿಸಾವಿರ ಪುರುಷರಿಗೆ ಎದುರಾಗಿ ಮಹಿಳೆಯರ ಸಂಖ್ಯೆ) | |
|---|---|---|---|
| | | 1991 | 2001 |
| 1 | 2 | 3 | 4 |
| 1 | ಉಡುಪಿ | 1134 | 1127 |
| 2 | ದಕ್ಷಿಣ ಕನ್ನಡ | 1020 | 1020 |
| 3 | ಹಾಸನ | 999 | 1005 |
| 4 | ಕೊಡಗು | 979 | 996 |
| 5 | ಮಂಡ್ಯ | 963 | 985 |
| 6 | ಚಿಕ್ಕಮಗಳೂರು | 977 | 984 |
| 7 | ಕೊಪ್ಪಳ | 981 | 982 |
| 8 | ರಾಯಚೂರು | 978 | 980 |
| 9 | ಬಾಗಲಕೋಟೆ | 982 | 977 |
| 10 | ಶಿವಮೊಗ್ಗ | 964 | 977 |
| 11 | ಉತ್ತರ ಕನ್ನಡ | 966 | 970 |
| 12 | ಕೋಲಾರ | 965 | 970 |
| 13 | ಬಳ್ಳಾರಿ | 966 | 969 |
| 14 | ಗದಗ | 969 | 968 |
| 15 | ಚಾಮರಾಜ ನಗರ | 953 | 968 |
| 16 | ತುಮಕೂರು | 959 | 966 |
| 17 | ಮೈಸೂರು | 953 | 965 |
| 18 | ಗುಲಬರ್ಗಾ | 962 | 964 |
| 19 | ಬೆಳಗಾವಿ | 954 | 959 |
| 20 | ಚಿತ್ರದುರ್ಗ | 951 | 955 |
| 21 | ಬೆಂಗಳೂರು (ಗ್ರಾ) | 945 | 953 |

| | | | |
|---|---|---|---|
| 22 | ದಾವಣಗೆರೆ | 942 | 951 |
| 23 | ಬೀದರ್ | 952 | 948 |
| 24 | ಬಿಜಾಪುರ | 948 | 948 |
| 25 | ಧಾರವಾಡ | 935 | 948 |
| 26 | ಹಾವೇರಿ | 936 | 942 |
| 27 | ಬೆಂಗಳೂರು (ನ) | 903 | 906 |
| | ಕರ್ನಾಟಕ ರಾಜ್ಯ | 960 | 964 |

ಆಕರ : ಸೆನ್ಸಸ್ ಆಫ್ ಇಂಡಿಯಾ ೨೦೦೧. ಸಿರೀಸ್-೩೦. ಕರ್ನಾಟಕ : ಪ್ರಾವಿಶನಲ್ ಪಾಪುಲೇಶನ್ ಟೋಟಲ್ಸ್. ಪೇಪರ್-೧ ಆಫ್ ೨೦೦೧. ಪು. ೪೫.

ಟಿಪ್ಪಣಿ : ಜಿಲ್ಲೆಗಳನ್ನು ೨೦೦೧ರ ಅವರೋಹಣ ಕ್ರಮದಲ್ಲಿ ಜೋಡಿಸಿದೆ.

## ಕರ್ನಾಟಕದಲ್ಲಿ ಕಾಣೆಯಾದ ಮಹಿಳೆಯರ ಪ್ರಮಾಣ ೨೦೦೧

**ಕೋಷ್ಟಕ-೨**

| ಕ್ರಮ ಸಂಖ್ಯೆ | ಜಿಲ್ಲೆಗಳು | ಕಾಣೆಯಾದ ಮಹಿಳೆಯರು | ಹೆಚ್ಚುವರಿ ಮಹಿಳೆಯರು | ನಿವ್ವಳ ಕಾಣೆಯಾದ ಮಹಿಳೆಯರು (೩-೪) |
|---|---|---|---|---|
| 1 | 2 | 3 | 4 | 5 |
| 1 | ಉಡುಪಿ | - | 66412 | - |
| 2 | ದಕ್ಷಿಣ ಕನ್ನಡ | 1320 | 22421 | 21101 |
| 3 | ಹಾಸನ | 1390 | 5463 | 4073 |
| 4 | ಕೊಡಗು | 1491 | 393 | 1098 |
| 5 | ಚಿಕ್ಕಮಗಳೂರು | 9886 | 440 | 9446 |
| 6 | ಕೊಪ್ಪಳ | 10556 | - | 10556 |
| 7 | ಚಾಮರಾಜ ನಗರ | 15515 | - | 15515 |
| 8 | ಗದಗ | 15635 | - | 15635 |
| 9 | ಮಂಡ್ಯ | 16361 | 3465 | 12896 |
| 10 | ರಾಯಚೂರು | 16492 | - | 16492 |
| 11 | ಬಾಗಲಕೋಟೆ | 19136 | - | 19136 |
| 12 | ಶಿವಮೊಗ್ಗ | 20951 | 1816 | 19135 |
| 13 | ಉತ್ತರ ಕನ್ನಡ | 22711 | 1958 | 20753 |
| 14 | ಬಳ್ಳಾರಿ | 31720 | - | 31720 |
| 15 | ಚಿತ್ರದುರ್ಗ | 35071 | - | 35071 |
| 16 | ಕೋಲಾರ | 39900 | - | 38900 |
| 17 | ಬೀದರ | 39984 | - | 39984 |
| 18 | ಹಾವೇರಿ | 42754 | - | 42754 |
| 19 | ಧಾರವಾಡ | 43036 | - | 43036 |
| 20 | ದಾವಣಗೆರೆ | 44947 | - | 44947 |
| 21 | ಬೆಂಗಳೂರು (ಗ್ರಾ) | 45254 | - | 45254 |
| 22 | ಮೈಸೂರು | 46771 | - | 46771 |

| | | | | |
|---|---|---|---|---|
| 23 | ತುಮಕೂರು | 47065 | 2699 | 44366 |
| 24 | ಬಿಜಾಪುರ | 48237 | - | 48237 |
| 25 | ಗುಲಬರ್ಗಾ | 58399 | 499 | 57900 |
| 26 | ಬೆಳಗಾವಿ | 88228 | - | 88228 |
| 27 | ಬೆಂಗಳೂರು (ನ) | 322484 | - | 322484 |
| ಕರ್ನಾಟಕ ರಾಜ್ಯ | | 10,84,294 | 1,05,566 | 978728 |
| ದಕ್ಷಿಣ ಕರ್ನಾಟಕ | | 6,47, 406 | 1,03,109 | 544293 (55.61) |
| ಉತ್ತರ ಕರ್ನಾಟಕ | | 4,36,888 | 2457 | 434431 (44.39) |
| ಬೆಳಗಾವಿ ವಿಭಾಗ | | 2,79,737 | 1958 | 277779 (28.38) |
| ಗುಲಬರ್ಗಾ ವಿಭಾಗ | | 1,57,151 | 499 | 156652 (16.01) |
| ಬೆಂಗಳೂರು ವಿಭಾಗ | | 5,54,672 | 4515 | 550157 (56.21) |
| ಮೈಸೂರು ವಿಭಾಗ | | 92,734 | 98594 | 5860 (0.60) |

ಆಕರ : ಕೋಷ್ಟಕ - ೧ರಲ್ಲಿದ್ದಂತೆ.

ಕರ್ನಾಟಕದಲ್ಲಿ ೦-೬ ವರ್ಷಗಳ ವಯೋಮಾನದ ಮಕ್ಕಳ ಲಿಂಗ ಅನುಪಾತ : ೧೯೯೧ ಮತ್ತು ೨೦೦೧

ಕೋಷ್ಟಕ-೩

| ಜಿಲ್ಲೆಗಳು | ಲಿಂಗ ಅನುಪಾತ | | | | | |
|---|---|---|---|---|---|---|
| | 1991 | | | 2001 | | |
| | ಒಟ್ಟು | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ |
| 1 | 2 | 3 | 4 | 5 | 6 | 7 |
| ೧. ಬೆಳಗಾವಿ | 955 | 955 | 952 | 924 | 924 | 921 |
| ೨. ಬಿಜಾಪುರ | 955 | 957 | 950 | 971 | 986 | 914 |
| ೩. ಬಾಗಲಕೋಟೆ | - | - | - | 939 | 949 | 910 |
| ೪. ಗುಲಬರ್ಗಾ | 959 | 964 | 944 | 937 | 948 | 920 |
| ೫. ಬೀದರ್ | 962 | 964 | 953 | 967 | 980 | 923 |
| ೬. ರಾಯಚೂರು | 965 | 967 | 955 | 962 | 967 | 946 |
| ೭. ಕೊಪ್ಪಳ | - | - | - | 938 | 934 | 963 |
| ೮. ಧಾರವಾಡ | 952 | 954 | 947 | 944 | 945 | 943 |
| ೯. ಗದಗ | - | - | - | 951 | 948 | 957 |
| ೧೦. ಹಾವೇರಿ | - | - | - | 961 | 966 | 942 |
| ೧೧. ಬಳ್ಳಾರಿ | 957 | 959 | 952 | 949 | 954 | 937 |

| | | | | | | |
|---|---|---|---|---|---|---|
| ೧೨. ಚಿತ್ರದುರ್ಗ | 959 | 963 | 948 | 946 | 945 | 949 |
| ೧೩. ದಾವಣಗೆರೆ | - | - | - | 949 | 953 | 940 |
| ೧೪. ಶಿವಮೊಗ್ಗ | 961 | 961 | 960 | 959 | 958 | 961 |
| ೧೫. ಚಿಕ್ಕಮಗಳೂರು | 977 | 981 | 959 | 964 | 966 | 956 |
| ೧೬. ತುಮಕೂರು | 970 | 973 | 952 | 952 | 953 | 949 |
| ೧೭. ಕೋಲಾರ | 971 | 974 | 962 | 976 | 983 | 953 |
| ೧೮. ಬೆಂಗಳೂರು (ನ) | 950 | 960 | 948 | 940 | 957 | 937 |
| ೧೯. ಬೆಂಗಳೂರು (ಗ್ರಾ) | 957 | 958 | 951 | 941 | 945 | 928 |
| ೨೦. ಮಂಡ್ಯ | 959 | 963 | 938 | 937 | 931 | 968 |
| ೨೧. ಉತ್ತರ ಕನ್ನಡ | 949 | 952 | 940 | 946 | 947 | 943 |
| ೨೨. ಹಾಸನ | 967 | 970 | 955 | 964 | 969 | 937 |
| ೨೩. ದಕ್ಷಿಣ ಕನ್ನಡ | 966 | 968 | 959 | 952 | 949 | 958 |
| ೨೪. ಉಡುಪಿ | - | - | - | 955 | 953 | 964 |
| ೨೫. ಕೊಡಗು | 957 | 959 | 945 | 977 | 976 | 986 |
| ೨೬. ಮೈಸೂರು | 966 | 967 | 961 | 970 | 976 | 958 |
| ೨೭. ಚಾಮರಾಜನಗರ | - | - | - | 957 | 958 | 952 |
| ೨೮. ಕರ್ನಾಟಕ | 960 | 963 | 951 | 949 | 954 | 939 |

ಟಿಪ್ಪಣಿ : ಕರ್ನಾಟಕದಲ್ಲಿ ೧೯೯೧ ರಲ್ಲಿ ೨೦ ಜಿಲ್ಲೆಗಳಿದ್ದವು. ಈಗ ೨೦೦೧ ರಲ್ಲಿ ೨೭ ಜಿಲ್ಲೆಗಳಾಗಿವೆ. ಏಳು ಹೊಸ ಜಿಲ್ಲೆಗಳ ೧೯೯೧ ರ ಲಿಂಗ

ಅನುಪಾತವನ್ನು ಖಾಲಿ ಬಿಟ್ಟಿದೆ. ಮೂಲ ಜಿಲ್ಲೆಯ ಲಿಂಗ ಅನುಪಾತವನ್ನೇ ಹೊಸ ಜಿಲ್ಲೆಗೆ ಅನ್ವಯಿಸಿಕೊಳ್ಳಬಹುದು.

ಆಕರ : ಸೆನ್ಸಸ್ ಆಫ್ ಇಂಡಿಯಾ-೧೯೯೧. ಸಿರೀಸ್-೧೧, ಕರ್ನಾಟಕ ಪಾರ್ಟ್-ಬಿ (i) ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್. ಜನರಲ್ ಪಾಪುಲೇಶನ್, ಡೈರೆಕ್ಟರೇಟ್ ಆಫ್ ಸೆನ್ಸಸ್ ಆಪರೇಶನ್, ಬೆಂಗಳೂರು.

ಸೆನ್ಸಸ್ ಆಫ್ ಇಂಡಿಯಾ ೨೦೦೧. ಸಿರೀಸ್-೩೦. ಕರ್ನಾಟಕ ಪ್ರಾವಿಶನಲ್ ಪಾಪುಲೇಶನ್ ಟೋಟಲ್ಸ್. ಅರ್ಬನ್-ರೂರಲ್ ಡಿಸ್ಟ್ರಿಬ್ಯೂಶನ್, ಪು. ೨೧೩.

ವಯೋಮಾನ ಆಧರಿತ ಮರಣ ಪ್ರಮಾಣ : ಭಾರತ

ಕೋಷ್ಟಕ-೪

| ವಯೋಮಾನ ಗುಂಪು | ವರ್ಷಗಳು | ಭಾರತ ಪುರುಷರು | ಭಾರತ ಮಹಿಳೆಯರು | ಪುರುಷರ ಮರಣ ಪ್ರಮಾಣಕ್ಕೆ ಸಾಪೇಕ್ಷವಾಗಿ ಮಹಿಳೆಯರ ಮರಣ ಪ್ರಮಾಣದ ಶೇಕಡ ಪ್ರಮಾಣ |
|---|---|---|---|---|
| 1 | 2 | 3 | 4 | 5 |
| ೧-೪ ವರ್ಷಗಳು | 1970 | 51.7 | 55.1 | 106.58 |
| | 1980 | 40.1 | 43.5 | 108.48 |
| | 1990 | 24.8 | 27.9 | 108.48 |
| | 1998 | 21.0 | 24.1 | 112.05 |
| ೫-೯ ವರ್ಷಗಳು | 1970 | 4.6 | 5.0 | 108.69 |
| | 1980 | 3.3 | 4.0 | 121.21 |
| | 1990 | 2.3 | 2.8 | 121.74 |
| | 1998 | 2.1 | 2.4 | 114.28 |
| ೧೦-೧೪ ವರ್ಷಗಳು | 1970 | 2.0 | 2.4 | 120.00 |

| | | | | |
|---|---|---|---|---|
| | 1980 | 1.7 | 1.7 | 100.00 |
| | 1990 | 1.4 | 1.4 | 100.00 |
| | 1998 | 1.00 | 1.2 | 120.00 |
| ೧೫-೧೯ ವರ್ಷಗಳು | 1970 | 2.5 | 3.7 | 148.00 |
| | 1980 | 2.0 | 2.9 | 145.00 |
| | 1990 | 3.1 | 2.3 | 74.19 |
| | 1998 | 2.3 | 2.7 | 117.39 |
| ೨೫-೨೯ ವರ್ಷಗಳು | 1970 | 3.3 | 4.9 | 148.48 |
| | 1980 | 2.2 | 4.0 | 181.82 |
| | 1990 | 2.5 | 2.8 | 112.00 |
| | 1998 | 2.6 | 2.8 | 107.69 |
| ೩೦-೩೪ ವರ್ಷಗಳು | 1970 | 4.0 | 5.2 | 130.00 |
| | 1980 | 3.4 | 3.6 | 105.88 |
| | 1990 | 3.1 | 2.9 | 93.55 |
| | 1998 | 3.2 | 2.8 | 87.50 |

ಆಕರ : ಗೌವರ್ನಮೆಂಟ್ ಆಫ್ ಇಂಡಿಯಾ ೨೦೦೧. ವುಮೆನ್ ಆ್ಯಂಡ್ ಮೆನ್ ಇನ್ ಇಂಡಿಯಾ ೨೦೦೧.
ಸೆಂಟ್ರ್‍ಲ್ ಸ್ಟಾಟಿಸ್ಟಿಕಲ್ ಆರ್ಗನೈಜೇಶನ್.
ಮಿನಿಸ್ಟ್ರಿ ಆಫ್ ಸ್ಟಾಟಿಸ್ಟಿಕಲ್ ಪ್ರೊಗ್ರಾಮ್ ಇಪ್ಲಿಮೆಂಟೇಶನ್, ನ್ಯೂಡೆಲ್ಲಿ, ಪು. ೧೨. ಟೇಬಲ್-೮.

ಹುಟ್ಟುವ ಸಂದರ್ಭದಲ್ಲಿ ಪ್ರತಿ ನೂರು ಮಹಿಳೆಯರಿಗೆ ಎದುರಾಗಿ ಪುರುಷರ ಸಂಖ್ಯೆ ಮತ್ತು ಐದು ವರ್ಷದ ವಯೋಮಾನದಲ್ಲಿ ಮರಣ ಪ್ರಮಾಣದ ಲಿಂಗ ಅನುಪಾತ - ೧೯೮೧ ಮತ್ತು ೧೯೯೧

ಕೋಷ್ಟಕ-೫

| ವಿವರಗಳು | ಹುಟ್ಟುವ ಸಂದರ್ಭದಲ್ಲಿ ಪ್ರತಿ ನೂರು ಮಹಿಳೆಯರಿಗೆ ಪುರುಷರ ಸಂಖ್ಯೆ | | ಐದು ವರ್ಷದ ವಯೋಮಾನದಲ್ಲಿ ಮರಣ ಪ್ರಮಾಣ (ಪ್ರತಿ ನೂರು ಪುರುಷರಿಗೆ ಮಹಿಳೆಯರ ಸಂಖ್ಯೆ) | |
|---|---|---|---|---|
| | **1981** | **1991** | **1981** | **1991** |
| **1** | **2** | **3** | **4** | **5** |
| ಜಿಲ್ಲೆಗಳ ಸಂಖ್ಯೆ | 398 | 452 | 398 | 452 |
| ಸರಾಸರಿ (ಮೀನ್) | 101.5 | 104.0 | 105.1 | 104.3 |
| ಅನುಪಾತ ಕ್ರಮವಾಗಿ ೧೦೨ಕ್ಕಿಂತ ಮತ್ತು ೧೦೦ಕ್ಕಿಂತ ಕಡಿಮೆಯಿರುವ ಜಿಲ್ಲೆಗಳು | 225 (<102) | 136 (<102) | 167 (<100) | 192 (<100) |
| ಶೇಕಡ ಪ್ರಮಾಣ | 56.5 | 30.1 | 42 | 42 |

| | | | | |
|---|---|---|---|---|
| ಅನುಪಾತವು ಕ್ರಮವಾಗಿ ೧೦೨ ರಿಂದ ೧೦೭ರ ಮಧ್ಯೆಯಿರುವ ಹಾಗೂ ೧೦೦ಕ್ಕಿಂತ ಅಧಿಕವಿರುವ ಜಿಲ್ಲೆಗಳು | 147 (102 ರಿಂದ 107ರವರೆಗಿನ) | 231 | 2311 (+100) | 260 (+100) |
| ಶೇಕಡ ಪ್ರಮಾಣ | 36.9 | 51.1 | 58 | 58 |
| ಅನುಪಾತವು ೧೦೭ಕ್ಕಿಂತ ಅಧಿಕವಿರುವ ಜಿಲ್ಲೆಗಳು | 26 (>107) | 85 (>107) | - | - |

ಟಿಪ್ಪಣಿ : ಮೊದಲನೆಯ ಅನುಪಾತವು ಪುರುಷ-ಮಹಿಳೆ ಅನುಪಾತವಾದರೆ ಎರಡನೆಯದು ಮಹಿಳೆ-ಪುರುಷ ಅನುಪಾತವಾಗಿದೆ.

ಆಕರ : ಎಸ್. ಸುಧಾ, ಎಸ್. ಇರುದಯರಾಜನ್. ೨೦೦೩, ಪು. ೪೩೬೫.

**೦-೬ ಮಕ್ಕಳ ಲಿಂಗ ಅನುಪಾತದಲ್ಲಿ ನಗರ-ಗ್ರಾಮೀಣ ವ್ಯತ್ಯಾಸ.**

**ಕೋಷ್ಟಕ-೬**

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ನಗರ ಲಿಂಗ ಅನುಪಾತವು ಗ್ರಾಮೀಣ ಲಿಂಗ ಅನುಪಾತಕ್ಕಿಂತ ಎಷ್ಟು ಅಂಶ ಕಡಿಮೆಯಿದೆ | |
|---|---|---|---|
| | | **1991** | **2001** |
| 1 | ಉಡುಪಿ | -3 | -3 |
| 2 | ಬಿಜಾಪುರ | -7 | -72 |
| 3 | ಬಾಗಲಕೋಟೆ | - | -39 |
| 4 | ಗುಲಬರ್ಗಾ | -20 | -23 |
| 5 | ಬೀದರ್ | -11 | -57 |
| 6 | ರಾಯಚೂರು | -12 | -21 |
| 7 | ಕೊಪ್ಪಳ | - | +29 |
| 8 | ಧಾರವಾಡ | -7 | -2 |
| 9 | ಗದಗ | - | -09 |
| 10 | ಹಾವೇರಿ | - | -24 |
| 11 | ಬಳ್ಳಾರಿ | -7 | -17 |
| 12 | ಚಿತ್ರದುರ್ಗ | -15 | +4 |
| 13 | ದಾವಣಗೆರೆ | - | 13 |
| 14 | ಶಿವಮೊಗ್ಗ | -1 | +3 |
| 15 | ಚಿಕ್ಕಮಗಳೂರು | -22 | -10 |
| 16 | ತುಮಕೂರು | -21 | -04 |
| 17 | ಕೋಲಾರ | -12 | -30 |
| 18 | ಬೆಂಗಳೂರು (ನ) | -12 | -20 |
| 19 | ಬೆಂಗಳೂರು (ಗ್ರಾ) | -07 | -17 |
| 20 | ಮಂಡ್ಯ | -25 | +37 |
| 21 | ಉತ್ತರ ಕನ್ನಡ | -12 | -04 |
| 22 | ಹಾಸನ | -15 | -32 |

| | | | |
|---|---|---|---|
| 23 | ದಕ್ಷಿಣ ಕನ್ನಡ | -09 | +09 |
| 24 | ಉಡುಪಿ | - | +11 |
| 25 | ಕೊಡಗು | -14 | +10 |
| 26 | ಮೈಸೂರು | -06 | +18 |
| 27 | ಚಾಮರಾಜನಗರ | - | -06 |
| | ಕರ್ನಾಟಕ ರಾಜ್ಯ | -12 | -15 |

ಟಿಪ್ಪಣಿ : ನಗರದಲ್ಲಿ ಮಕ್ಕಳ ಲಿಂಗ ಅನುಪಾತವು ಗ್ರಾಮೀಣ ಮಕ್ಕಳ ಅನುಪಾತಕ್ಕಿಂತ ಕಡಿಮೆ ಇರುವುದನ್ನು (-) ವ್ಯವಕಲನ ಚಿನ್ಹೆಯು ಹಾಗೂ ಅಧಿಕವಿರುವುದನ್ನು (+) ಸಂಕಲನ ಚಿನ್ಹೆಯು ಸೂಚಿಸುತ್ತದೆ.

ಆಕರ : ಕೋಷ್ಟಕ - ೩.

ಲಿಂಗ ಅನುಪಾತ ಮತ್ತು ಮಾಸಿಕ ತಲಾ ಅನುಭೋಗ ವೆಚ್ಚ : ಕರ್ನಾಟಕ.

ಕೋಷ್ಟಕ-೭

| ಎನ್ ಎಸ್ ಎಸ್ ಒ ಸುತ್ತುಗಳು | ಸರಾಸರಿ ಮಾಸಿಕ ತಲಾ ಅನುಭೋಗ ವೆಚ್ಚದ ಕುಟುಂಬ ವರ್ಗಗಳು (ರೂಪಾಯಿಗಳಲ್ಲಿ) | ನಗರ-ಕರ್ನಾಟಕ ಮಕ್ಕಳ ಲಿಂಗ ಅನುಪಾತ | ಜನಸಂಖ್ಯೆಯ ಲಿಂಗ ಅನುಪಾತ |
|---|---|---|---|
| 1 | 2 | 3 | 4 |
| ೪೨ನೆಯ ಸುತ್ತು | 0-135 | 1035 | 1087 |
| | 135-215 | 946 | 1069 |
| | 215-385 | 753 | 896 |
| | 385 + | 978 | 772 |
| ೫೫ನೆಯ ಸುತ್ತು | 0-425 | 1018 | 772 |
| | 425-665 | 873 | 1013 |
| | 665-1120 | 925 | 959 |
| | 1120 + | 853 | 832 |

ಗ್ರಾಮೀಣ ಕರ್ನಾಟಕ

| ಎನ್ ಎಸ್ ಎಸ್ ಒ ಸುತ್ತುಗಳು | ಸರಾಸರಿ ಮಾಸಿಕ ತಲಾ ಅನುಭೋಗ ವೆಚ್ಚದ ಕುಟುಂಬ ವರ್ಗಗಳು (ರೂಪಾಯಿಗಳಲ್ಲಿ) | ಮಕ್ಕಳ ಲಿಂಗ ಅನುಪಾತ | ಜನಸಂಖ್ಯೆಯ ಲಿಂಗ ಅನುಪಾತ |
|---|---|---|---|
| ೪೩ನೆಯ ಸುತ್ತು | 0-95 | 1012 | 1145 |
| | 95-140 | 833 | 1004 |
| | 140-215 | 985 | 1450 |
| | 215 + | 949 | 844 |
| ೫೫ನೆಯ ಸುತ್ತು | 0-300 | 839 | 1052 |
| | 300-200 | 904 | 1004 |
| | 420-615 | 843 | 991 |
| | 615 + | 769 | 893 |

ಆಕರ : ಸಿದ್ಧಾಂತ ಎಸ್ ಮತ್ತು ಇತರರು ೨೦೦೩.

**ಆಕರ ಸೂಚಿ**


ಅಗ್ನಿಹೊತ್ರಿ ಬಿ. ಸತೀಶ್. ೨೦೦೩. ಸರ್ವೈವಲ್ ಆಫ್ ಗರ್ಲ್‌ಚೈಲ್ಡ್ : ಟನ್ನಲಿಂಗ್ ಔಟ್ ಆಫ್ ದಿ ಚಕ್ರವ್ಯೂಹ. **ಎಕಾನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ**, ಅಕ್ಟೋಬರ್ ೧೧, ೨೦೦೩. ಪು. ೪೩೫೧-೪೩೬೦.

ಸುಧಾ.ಎಸ್. ಇರುದಯರಾಜನ್.ಎಸ್. ೨೦೦೩. ಪರ್ಸಿಸ್ಟೆಂಟ್ ಡಾಟರ್ ಡಿಸ್‌ಅಡ್ವಾಂಟೇಜ್ : ವಾಟ್ ಡು ಎಸ್ಟಿಮೇಟೆಡ್ ಸೆಕ್ಸ್‌ರೇಶಿಯೋ ಅಟ್ ಬರ್ತ್ ಆ್ಯಂಡ್ ಸೆಕ್ಸ್‌ರೇಶಿಯೋ ಆಫ್ ಚೈಲ್ಡ್ ಮಾರ್ಟಾಲಿಟಿ ಲಿಸ್ಟ್ ರಿವೀಲ್? **ಎಕಾನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ**, ಅಕ್ಟೋಬರ್ ೧೧, ೨೦೦೩. ಪು. ೪೩೬೧-೪೩೬೯.

ಸಿದ್ಧಾಂತ ಎಸ್. ನಂದಿ, ದಿ ಅಗ್ನಿಹೋತ್ರಿ ಎಸ್.ಬಿ. ೨೦೦೩. ಸೆಕ್ಸ್‌ರೇಶಿಯೋ ಆ್ಯಂಡ್ ಪ್ರಾಸ್‌ಪೆರಿಟಿ ಎಫೆಕ್ಟ್ : ವಾಟ್ ಡು ಎಸ್ ಎಸ್ ಎಸ್ ಒ ಡೇಟ ರಿವೀಲ್? **ಎಕಾನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ**, ಪು. ೪೩೮೧-೪೪೦೪.

ಮಹೇಂದ್ರ ಕೆ. ಪ್ರೇಮಿ. ೨೦೦೧. ದಿ ಮಿಸ್ಸಿಂಗ್ ಗರ್ಲ್‌ಚೈಲ್ಡ್, **ಎಕಾನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ**, ಫೆಬ್ರವರಿ ೨೬, ೨೦೦೧. ಪು. ೧೮೭೫-೧೮೮೦.

ಜೀನ್ ಡ್ರೀಜ್, ಅಮರ್ತ್ಯಸೇನ್.೨೦೦೩. **ಇಂಡಿಯಾ : ಡೆವಲಪ್‌ಮೆಂಟ್ ಆ್ಯಂಡ್ ಪಾರ್ಟಿಸಿಕೇಶನ್**, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೈಸ್, ನವದೆಹಲಿ. ಪುಟ. ೨೨೯-೨೭೧.

ಅಮರ್ತ್ಯಸೇನ್. ೨೦೦೧. ಮೆನಿ ಫೇಸಸ್ ಆಫ್ ಜೆಂಡರ್ ಇನೀಕ್ವಾಲಿಟಿ. **ಫ್ರಂಟ್‌ಲೈನ್**, ನವೆಂಬರ್, ೨೦೦೧. ಪು. ೪-೧೪.

ಅಮರ್ತ್ಯಸೇನ್. ೧೯೯೦. **ಜೆಂಡರ್ ಆ್ಯಂಡ್ ಕೊ-ಆಪರೇಟಿವ್ ಕಾನ್ಫಿಲ್ಟ್**, ಐರನಿ ಟಿಂಕರ್ (ಸಂ) **ಪರ್‌ಸಿಸ್‌ಸ್ಟಿಂಗ್ ಇನಿಕ್ವಾಲಿಟೀಸ್** : ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್.

ಶೀಫಲೀ ವಾಸುದೇವ್.೨೦೦೩. ಮಿಸ್ಸಿಂಗ್ ಗರ್ಲ್ ಚೈಲ್ಡ್, **ಇಂಡಿಯಾ ಟು ಡೇ**, ಸಂ : ೨೮. ಸಂ. ೪೫. ನವೆಂಬರ್ ೪.೧೦.೨೦೦೩. ಪು. ೧೬-೨೨.




ಗ್ರಹಿಕೆ

## ಸ್ತ್ರೀವಾದಿ ವಿರೋಧಿ ನೆಲೆಯನ್ನು ಗ್ರಹಿಸುವ ಕುರಿತು

ಎಂ. ಉಷಾ

ಸ್ತ್ರೀವಾದದಿಂದ ಉಂಟಾದ ಬದಲಾವಣೆಯ ಪ್ರಮಾಣ ಅತ್ಯಲ್ಪವಾದುದಾದರೂ ಅದು ಉಂಟು ಮಾಡಬಹುದಾದ ಬದಲಾವಣೆ ಕುರಿತ ಕಲ್ಪನೆಗಳು, ಭ್ರಮೆಗಳು, ಆತಂಕಗಳು ಈ ಸಮಾಜದಲ್ಲಿ ಅಪಾರವಾದುದಾಗಿದೆ. ಹಾಗೆ ನೋಡಿದರೆ ಸ್ತ್ರೀಯ ಸಾಮರ್ಥ್ಯ, ಸಾಧ್ಯತೆಗಳ ಬಗೆಗಿನ ಅತ್ಯಂತ ಆತಂಕಕಾರಿಯಾದ ಚಿತ್ರವೊಂದು ಪಿತೃಪ್ರಧಾನ ಸಮಾಜದಲ್ಲಿ ಎಲ್ಲ ಕಾಲದಲ್ಲೂ ಇದ್ದೇ ಇವೆ. ಸ್ತ್ರೀಗೆ ವಿಚಿತ್ರವಾದೊಂದು ಶಕ್ತಿ ಇದೆ, ಅವಳನ್ನು ಹತ್ತಿಕ್ಕದಿದ್ದರೆ ಅಥವಾ ಓಲೈಸದಿದ್ದರೆ ಅವಳು ಎಲ್ಲವನ್ನೂ ಆಪೋಷಣೆಗೊಳ್ಳುವಳು ಎಂಬ ತಿಳುವಳಿಕೆಯೂ ಬಲವಾಗಿದೆ. ತನ್ನ ಪದವಿಯು ಎಲ್ಲಿ ಚ್ಯುತಿಗೊಳ್ಳುವುದೋ ಎಂಬ ಆತಂಕ ಎಲ್ಲ ಪದಾಧಿಕಾರಿಗಳಿಗೂ ಇರುವಂತೆ ಪುರುಷಾಧಿಕಾರಕ್ಕೂ ಇದೆ. ಕೆಲವೊಮ್ಮೆ ಈ ಭಯವನ್ನು ಪುರುಷಾಧಿಕಾರವು ವಿಪರೀತದಲ್ಲಿ ಸ್ವಯಂ ಕಲ್ಪಿಸಿಕೊಂಡು ಅದರ ವಿರುದ್ಧ ತನ್ನಷ್ಟಕ್ಕೆ ತಾನೇ ಕತ್ತಿ ಬೀಸಲು ಆರಂಭಿಸಿಬಿಡುತ್ತದೆ. ಅದರಂತೆ ಸ್ತ್ರೀವಾದ ಎತ್ತುವ ಲಿಂಗ ಸಮಾನತೆಯ ಪ್ರಶ್ನೆಯನ್ನು ಕೂಡ ಸ್ತ್ರೀಯ ಅಧಿಕಾರದಾಹವಾಗಿ, ಸ್ವಾತಂತ್ರ್ಯದ ಪ್ರಶ್ನೆಯನ್ನು ಸ್ವೇಚ್ಛಾಚಾರದ ಇಚ್ಛೆಯಾಗಿ ತಿರುಚಿ ತನಗೆ ತಾನೇ ಪರಿಭಾವಿಸಿಕೊಂಡು ಪ್ರತಿಕ್ರಿಯಿಸತೊಡಗುತ್ತದೆ. ಮಹಿಳೆಯರ ಕುರಿತಾದ ಒಂದು ಸಹಾನುಭೂತಿಯ ಮಾತು ಮತ್ತು ಕೃತಿಯು ಅದಕ್ಕೆ ಸಮಾಜವನ್ನೇ ಬಡುಮೇಲು ಮಾಡುತ್ತಿರುವ ಪ್ರಕ್ರಿಯೆಗಳಾಗಿ ಹೆದರಿಸುತ್ತವೆ. ಇದನ್ನು ತಡೆಗಟ್ಟುವ ಪ್ರತಿಕ್ರಮವಾಗಿ ಸ್ತ್ರೀವಾದದ ಕುರಿತ ದುಸ್ವಪ್ನವೊಂದನ್ನು ಕಲ್ಪಿಸಿ ಪುರುಧಿಕಾರವು ಸಮಾಜಕ್ಕೆ ನೀಡುತ್ತದೆ.

ಪುರುಷಪ್ರಧಾನ ಸಮಾಜದ ಸ್ತ್ರೀವಾದಿ ವಿರೋಧಿ ಚಟುವಟಿಕೆಯು ಬಹು ಬಾಹುಗಳನ್ನು ಉಳ್ಳದಾಗಿದ್ದು, ಅದರ ವೇಗ ಸ್ತ್ರೀವಾದದ ವೇಗಕ್ಕಿಂತ ಹತ್ತುಪಟ್ಟು ಹೆಚ್ಚಿನದಾಗಿರುತ್ತದೆ. ಕಾರಣ ಇಡೀ ಸಮಾಜದ ಅಧಿಕಾರವು ಅದರ ಕೈಯಲ್ಲಿರುವುದರಿಂದ ಅದನ್ನು ತಲುಪಿಸಬಹುದಾದ ಬಹು ಮಾಧ್ಯಮಗಳು ಪುರುಷಾಧಿಕಾರಕ್ಕೆ ನೂರಾರು ನಾಲಿಗೆಗಳನ್ನು ಒದಗಿಸಿಕೊಡುತ್ತವೆ. ಪ್ರಭು ಸಂಹಿತೆ, ಮಿತ್ರ ಸಂಹಿತೆ, ಕಾಂತಾ ಸಂಹಿತೆಗಳೆಲ್ಲವೂ ಅದರ ಚಟುವಟಿಕೆಯ ಆದಿಮೂಲಗಳಾಗಿವೆ. ಆದ್ದರಿಂದಲೇ ಸ್ತ್ರೀವಾದ ಜನರನ್ನು ತಲುಪುವ

ಮೊದಲೇ ಸ್ತ್ರೀವಾದಿ ವಿರೋಧಿ ಚಿಂತನೆಗಳು ಮುಟ್ಟಿರುತ್ತವೆ, ಅಸ್ತ್ರಗಳು ಝಳಪಿತಗೊಳ್ಳುತ್ತವೆ. ಪುರುಷಾಧಿಕಾರದ ಈ ಚಟುವಟಿಕೆಯ ಕಾರಣಕ್ಕಾಗಿಯೂ ಕೂಡ ಇವತ್ತಿಗೂ ಸ್ತ್ರೀವಾದವನ್ನು ಸ್ವತಃ ಮಹಿಳೆಯರಿಗೆ ತಲುಪಿಸುವುದು, ಮನನ ಮಾಡಿಸುವುದು ಕಷ್ಟಸಾಧ್ಯವಾಗುತ್ತಿದೆ. ಹೆಣ್ಣುಮಕ್ಕಳು 'ಫೆಮಿನಿಸ್ಟ' ಆಗುವುದಕ್ಕಿಂತ ಸುಲಭವಾಗಿ 'ಆ್ಯಂಟಿ ಫೆಮಿನಿಸ್ಟ' ಆಗಿಸುವುದು ಘಟಿಸಿ ಹೋಗುತ್ತಿದೆ. ಹಾಗಾಗಿ ಸ್ತ್ರೀವಾದಿ ವಿರೋಧಿ ಚಟುವಟಿಕೆಯನ್ನು ಗುರುತಿಸಿಕೊಳ್ಳುವುದು, ಗ್ರಹಿಸುವುದು, ಪ್ರತಿಕ್ರಿಯಿಸುವುದು ಮತ್ತು ಪ್ರತಿರಾಜಕಾರಣಕ್ಕಾಗಿ ಚಿಂತಿಸುವುದು ಸ್ತ್ರೀವಾದದ ಅತ್ಯಂತ ಮುಖ್ಯ ಚಟುವಟಿಕೆಗಳಲ್ಲಿ ಒಂದಾಗಬೇಕಿದೆ. ಈ ದಿಕ್ಕಿನಲ್ಲಿ ಕನ್ನಡದ ಸಂದರ್ಭವನ್ನು ಚುರುಕುಗೊಳಿಸುವ ಹಿನ್ನೆಲೆಯಲ್ಲಿ ವಸಾಹತು ಕಾಲಘಟ್ಟದ ಕೃತಿಯೊಂದನ್ನು ಹೆಕ್ಕಿ ಅದಕ್ಕೆ ಪ್ರತಿಕ್ರಿಯೆಯನ್ನು ಇಲ್ಲಿ ರೂಪಿಸಲು ಪ್ರಯತ್ನಿಸಲಾಗಿದೆ.

'ನವೀನ ಸ್ತ್ರೀ ಸ್ವಾತಂತ್ರ್ಯ' ಅಥವಾ 'ಸ್ತ್ರೀ ಪುರುಷರಿಬ್ಬರೂ ಸಮರು' ಎಂಬುದು ೧೯೨೩ ರಲ್ಲಿ ಪ್ರಕಟಗೊಂಡಿರುವ ಒಂದು ನಾಟಕ. ಇದರ ರಚನಕಾರರು ಗ್ರಾಮಂ ನರಸಿಂಹಾಚಾರ್ಯ, ಬೀರೂರು. ವಿವೇಚನ ಗ್ರಂಥಮಾಲೆಯ ಮೊದಲ ಪ್ರಕಟಣೆ ಇದಾಗಿದ್ದು ಉಡುಪಿಯಿಂದ ಮುದ್ರಿತವಾದುದಾಗಿ ಕೃತಿಯಿಂದ ತಿಳಿದು ಬರುತ್ತದೆ. ನಾಟಕವನ್ನು ಅನುಬಂಧದಲ್ಲಿ ನೀಡಲಾಗಿರುವುದರಿಂದ (ಪೀಠಿಕೆಯನ್ನು ಒಳಗೊಂಡು) ಅದರ ವಸ್ತುವನ್ನು ಇಲ್ಲಿ ವಿವರಿಸುವ ಅಗತ್ಯವಿಲ್ಲ.

ಈ ಕೃತಿ ರಚನೆಯ ೧೯೨೦ರ ಕಾಲವನ್ನು ನಾವು ಸ್ವಲ್ಪ ಗಮನಿಸುವುದಾದರೆ ಅದು ರಾಷ್ಟ್ರೀಯ ಹೋರಾಟ ಗಾಂಧಿ ನೇತೃತ್ವದಲ್ಲಿ ಚುರುಕುಗೊಂಡಿದ್ದ ಕಾಲ. ಸ್ತ್ರೀ ಸುಧಾರಣೆ, ಅಸ್ಪೃಶ್ಯತಾ ನಿವಾರಣೆ, ರಾಷ್ಟ್ರೀಯ ಏಕತೆ, ಭಾರತಾಂಬೆಯ ದಾಸ್ಯದ ಬಿಡುಗಡೆ ಇತ್ಯಾದಿಗಳೆಲ್ಲ ಒಂದರೊಡನೊಂದು ಹೆಣೆದುಕೊಂಡು ಸಾಮಾಜಿಕ ಬದಲಾವಣೆಗಾಗಿ ಅಣಿಗೊಳ್ಳುತ್ತಿದ್ದ ಕಾಲ. ವಿಧವಾ ವಿವಾಹ, ಸ್ತ್ರೀ ಶಿಕ್ಷಣ, ಪ್ರೌಢ ವಿವಾಹ, ಅಂತರ್ ಜಾತಿ ವಿವಾಹ, ಮಹಿಳೆಯರ ರಾಜಕೀಯ ಪಾಲ್ಗೊಳ್ಳುವಿಕೆ, ಮತದಾನದ ಹಕ್ಕೊತ್ತಾಯಗಳೊಂದಿಗೆ ರಾಷ್ಟ್ರೀಯ ಮಟ್ಟದಲ್ಲಿ ಮಹಿಳಾ ಸಂಘಟನೆಗಳು ತಲೆ ಎತ್ತುತ್ತಿದ್ದ ಕಾಲ. ಮಹಿಳೆಯರು ಸಂಘಟಿತರಾಗುವುದು, ಸಭೆಗಳನ್ನು ನಡೆಸುವುದು, ನಿರ್ಣಯಗಳನ್ನು ಕೈಗೊಳ್ಳುವುದು ಹೊಸದಾಗಿ ಸಮಾಜಕ್ಕೆ ಸೇರ್ಪಡೆಗೊಳ್ಳುತ್ತಿತ್ತು. ಸರೋಜಿನಿ ನಾಯ್ಡು, ಕಮಲಾದೇವಿ ಚಟ್ಟೋಪಾಧ್ಯಾಯ ಮುಂತಾದ ಹಲವು ಮಹಿಳೆಯರು ಕೋಲಾಹಲದ ನಡುವೆ ಅಂತರ್ಜಾತಿ ವಿವಾಹ, ವಿಧವಾ ವಿವಾಹಗಳನ್ನು ಸ್ವೀಕರಿಸಿದ್ದಲ್ಲದೆ, ಸಾಮಾಜಿಕ ಸಂದರ್ಭದಲ್ಲಿ ಕೂಡ ಅತ್ಯಂತ ಪ್ರಭಾವಶಾಲಿ ಸ್ಥಾನಗಳನ್ನು ಪಡೆದುಕೊಂಡು ಹೊಸ ಗಾಳಿಗೆ ತೆರೆದುಕೊಂಡ ಯುವ ಜನಾಂಗಕ್ಕೆ 'ಮಾದರಿ'ಗಳನ್ನು ನೀಡಬಲ್ಲವರಾಗಿದ್ದರು. ನೆರೆಯ ತಮಿಳುನಾಡಿನ ಪೆರಿಯಾರ್ ನೇತೃತ್ವದ 'ಸ್ವಾಭಿಮಾನಿ ಚಳುವಳಿ' ಭಾರತೀಯ ಸಮಾಜದ ಸಾಂಪ್ರದಾಯಿಕ ಸನಾತನ ಮೌಲ್ಯಗಳನ್ನು ಬುಡುಸಹಿತ ಅಲುಗಾಡಿಸಲೆತ್ನಿಸಿತ್ತು. ಮಾನವನ ವ್ಯಕ್ತಿಗತ ಸ್ವಾತಂತ್ರ್ಯ ಹಾಗೂ ಸ್ವಾಭಿಮಾನಕ್ಕೆ

ಧಕ್ಕೆ ತರುವ ಎಲ್ಲ ವಿವಾಹ ಸಂಬಂಧಗಳನ್ನು ಸ್ತ್ರೀ-ಪುರುಷರಿಬ್ಬರೂ ಧಿಕ್ಕರಿಸಿ, ಯಾವುದೇ ಪಾಪ ಪ್ರಜ್ಞೆಯಿಲ್ಲದೆ ಹೊಸ ಬದುಕನ್ನು ರೂಪಿಸಿಕೊಳ್ಳಬೇಕೆನ್ನುವ ವಿಚಾರಧಾರೆ ಸಂಪ್ರದಾಯವಾದಿಗಳನ್ನು ಅಧೀರರನ್ನಾಗಿಸಿದ್ದರೆ/ಸಿಟ್ಟಿಗೆಟ್ಟಿಸಿದ್ದರೆ, ಸುಧಾರಣಾವಾದಿಗಳಲ್ಲಿ ಆತಂಕವನ್ನು, ಮುಜುಗರವನ್ನು ಹುಟ್ಟುಹಾಕಿತ್ತು. ಪೆರಿಯಾರ್ ಹುಟ್ಟು ಹಾಕುತ್ತಿರುವ ಸ್ವಾಭಿಮಾನದ ಪರಿಕಲ್ಪನೆ ಸ್ವೇಚ್ಛಾಚಾರಕ್ಕೆ ಎಡೆ ಮಾಡಿಕೊಡುತ್ತದೆ ಎಂಬ ಗುಲ್ಲು ಗದ್ದಲ ಎಲ್ಲೆಡೆ ಹರಡಿತ್ತು. ಈ ಸಾಂದರ್ಭಿಕ ಹಿನ್ನೆಲೆಯಲ್ಲಿ ಸಂಪ್ರದಾಯವಾದಿಗಳು ಬದಲಾಗುತ್ತಿರುವ ಸ್ತ್ರೀಪುರುಷರ ಜೀವನಕ್ರಮ, ನೈತಿಕ ಮೌಲ್ಯಗಳು, ಅದನ್ನು ಪ್ರತಿಪಾದಿಸುತ್ತಿರುವ ಆಧುನಿಕ ವೈಚಾರಿಕತೆ, ಅದರಲ್ಲಿನ ಸ್ತ್ರೀವಾದ ಇತ್ಯಾದಿಗಳು ವಿಷಯ ಲೋಲುಪತೆಯನ್ನು, ಅನೈತಿಕತೆಯನ್ನು ಮನದಲ್ಲಿಟ್ಟುಕೊಂಡೇ ಹೊರಟ ದಾರಿಗಳಾಗಿವೆ ಎಂಬ ವಿಪರೀತಾರ್ಥವನ್ನು ಕಲ್ಪಿಸಿ ಪ್ರತಿಪಾದಿಸಿದ ಮಾದರಿಯೊಂದನ್ನು 'ನವೀನ ಸ್ತ್ರೀ ಸ್ವಾತಂತ್ರ್ಯ' ನಾಟಕದಲ್ಲಿ ಗ್ರಹಿಸಬಹುದಾಗಿದೆ.

ಲೇಖಕರು ತಮ್ಮ ಕೃತಿಗಳಿಗೆ ಎರಡೆರಡು ಹೆಸರಿಡುವುದು ಆಧುನಿಕ ಸಾಹಿತ್ಯಾರಂಭದ ಮೊದಲ ದಿನಗಳಲ್ಲಿನ ಪರಿಪಾಠ. ಅದರಂತೆ ಈ ಕೃತಿಗೆ ಕೂಡ ಎರಡು ಹೆಸರಿದೆ. ನಾಟಕದ ಉದ್ದೇಶವು ಆಧುನಿಕ ವೈಚಾರಿಕತೆಯು ಪ್ರತಿಪಾದಿಸುತ್ತಿದ್ದ ಸ್ತ್ರೀ ಸ್ವಾತಂತ್ರ್ಯವನ್ನು ಪರಿಶೀಲಿಸುವುದು (ಪರಿಶೀಲಿಸಿದಂತೆ ತೋರಿಸುವುದು) ಹಾಗೂ ಅದಕ್ಕೆ ಪ್ರತಿಯಾಗಿ ಯಥಾವತ್ತಾದ ಸಮಾಜ ವ್ಯವಸ್ಥೆಯಲ್ಲಿಯೇ ಸ್ತ್ರೀ-ಪುರುಷ ಸಮಾನತೆ ಇದೆ ಎಂದು ಪ್ರತಿಪಾದಿಸುವುದು ಆಗಿರುವುದರಿಂದ ಆ ಎರಡು ಅಂಶಗಳನ್ನು ಎರಡು ಶೀರ್ಷಿಕೆಗಳಾಗಿ ರೂಪಿಸಿದೆ. ಈ ಎರಡು ಶೀರ್ಷಿಕೆಗಳಲ್ಲಿ ಸ್ತ್ರೀವಾದಿ ಚಿಂತನೆಯ ಎರಡು ಪ್ರಮುಖ ಪರಿಕಲ್ಪನೆಗಳನ್ನು ಬಳಸಲಾಗಿದ್ದು, ನಾಟಕದೊಳಗೆ ಅವೆರಡನ್ನು ವಿರುದ್ಧ ನೆಲೆಗಳಲ್ಲಿ ನಿರ್ವಚಿಸಲಾಗಿದೆ. 'ಸ್ತ್ರೀ ಸ್ವಾತಂತ್ರ್ಯ'ವನ್ನು ಲೇಖಕರು ಲೇವಡಿ ಎಬ್ಬಿಸುವ ವಿಧಾನಕ್ಕೂ, 'ಸ್ತ್ರೀ ಸಮಾನತೆ'ಯನ್ನು ತಿರುಚಿ ಪ್ರತಿಪಾದಿಸುವ, ಹತ್ತಿಕ್ಕುವ ವಿಧಾನಕ್ಕೂ ವ್ಯತ್ಯಾಸವಿದೆ. ಆದರೆ ಆ ಎರಡು ಪರಿಕಲ್ಪನೆಗಳ ಮೇಲು ಹಕ್ಕು ಸಾಧಿಸುವ ವಿಧಾನ ಮಾತ್ರ ಪಿತೃಪ್ರಧಾನತೆಯದಾಗಿದೆ.

ನಾಟಕ ಎಲ್ಲಿಯೂ ಸ್ತ್ರೀ ಪುರುಷರ ನಡುವೆ ಅಸಮಾನತೆ ಇರಬೇಕು, ಸ್ತ್ರೀ ಪುರುಷನಿಗೆ ಅಧೀನಳಾಗಿ ಬದುಕಬೇಕು ಎಂಬುದನ್ನು ವಾಚ್ಯವಾಗಿಸುವುದಿಲ್ಲ. ಅದಕ್ಕೆ ಬದಲಾಗಿ ಈಗಾಗಲೇ ಅತ್ಯಂತ ತರ್ಕಬದ್ಧವಾಗಿ, ನಿಸರ್ಗ ಸಹಜವಾಗಿ ಸಮಾಜದ ಒಳಿತಿಗಾಗಿ ಒಂದು ಬಗೆಯ ಸಮಾನತೆ ಪ್ರತಿಪಾದಿತವಾಗಿದೆ. ಅದನ್ನು ನಿರಾಕರಿಸಲು ಯಾವ ಆಧಾರವೂ ಇಲ್ಲ. ಆಧುನಿಕ ಕಾಲ ಎತ್ತುತ್ತಿರುವ ಪ್ರಶ್ನೆ ಏನಿದ್ದರೂ ಅಧಿಕ ಪ್ರಸಂಗ, ಕುಯುಕ್ತಿಕ ಎಂಬ ನೆಲೆಯಲ್ಲಿ ವಿಷಯ ಮಂಡಿಸುತ್ತದೆ.

ನವೀನ ಸ್ತ್ರೀ ಸ್ವಾತಂತ್ರ್ಯದ ಪ್ರಶ್ನೆಯು ಯಾವೆಲ್ಲ ಕಾರಣಕ್ಕಾಗಿ ನಮ್ಮ ಸಮಾಜದಲ್ಲಿ ಹರಡುತ್ತಿದೆ ಎಂಬುದಕ್ಕೆ ನಾಟಕವು ಈ ಕೆಳಗಿನ ಕಾರಣಗಳನ್ನು ನೀಡುತ್ತದೆ.

೧. ಕೇವಲ ಅನುಕರಣೆಯಿಂದ ಸ್ವಂತ ವಿವೇಚನೆ ಇಲ್ಲದೆ ಜನರು ಅದರಲ್ಲೂ ವಿದ್ಯಾವಂತರು ಸ್ವೀಕರಿಸುತ್ತಿದ್ದಾರೆ.
೨. ಕೆಲವು ಗಂಡಸರು ತಮ್ಮ ಸ್ವಾರ್ಥಕ್ಕಾಗಿ ಅದನ್ನು ಪ್ರತಿಪಾದಿಸುತ್ತಿದ್ದಾರೆ. (ಇಲ್ಲಿ ಸ್ತ್ರೀಯರ ಕಾಳಜಿಯೆಂಬುದೇನೂ ಇಲ್ಲ.)
೩. ಕೆಲವು ಹೆಂಗಸರು ತಮ್ಮ ವಿಷಯ ಲೋಲುಪತೆಯಿಂದಾಗಿ, ಸ್ವೇಚ್ಛಾಚಾರಕ್ಕಾಗಿ ಸಮಾನತೆಗಾಗಿ ಹೋರಾಡುತ್ತಿದ್ದಾರೆ. (ಉಳಿದಂತೆ ಯಾವ ಅಧೀನತೆಗೂ ಅವರು ಒಳಗಾಗಿಲ್ಲ.)

ಮೇಲಿನ ಅಂಶಗಳಿಗೆ ಹೊರತಾದ ಯಾವುದೇ ಉದಾತ್ತ ಆಶಯವಾಗಲಿ, ಸೈದ್ಧಾಂತಿಕತೆಯಾಗಲಿ, ತರ್ಕವಾಗಲಿ ಸ್ತ್ರೀ ಸ್ವಾತಂತ್ರ್ಯದ ಹೋರಾಟದಲ್ಲಿಲ್ಲ. ಆದ್ದರಿಂದಲೇ ಅದರ ಪರವಾಗಿ ಮಾತನಾಡುವ ಪ್ರತಿಯೊಂದು ಪಾತ್ರವು ಯಾವುದೇ ಎಗ್ಗಿಲ್ಲದೆ ತಮ್ಮ ನಿರುದ್ದೇಶ್ಯವನ್ನು, ದುರುದ್ದೇಶವನ್ನು ಬೇಷರತ್ತಾಗಿ ಇಲ್ಲಿ ಸ್ವೀಕರಿಸುತ್ತವೆ. ಒಟ್ಟಿನಲ್ಲಿ ಇಲ್ಲಿನ ಎಲ್ಲ ಸ್ತ್ರೀವಾದಿ ಪರ ಪಾತ್ರಗಳು ಬೆನ್ನೆಲುಬೇ ಇಲ್ಲದ ಪಾತ್ರಗಳು. ಹಾಗಿದ್ದರೆ ಸ್ತ್ರೀವಾದಿ ಸೈದ್ಧಾಂತಿಕತೆ ಏನಾಯಿತು? ಎಂಬುದು ಕುತೂಹಲಕಾರಿ ಪ್ರಶ್ನೆ.

ನಾಟಕದ ಕೇಂದ್ರ ಪಾತ್ರವಾದ 'ವಿವೇಚನಾವಧಾನಿಗಳು' (ಈ ಪಾತ್ರದ ಹೆಸರು ಮಾತ್ರ ನಾಟಕದಲ್ಲಿ ಸಾಂಕೇತಿಕವಾಗಿದೆ) ಸ್ತ್ರೀವಾದಿ ಸೈದ್ಧಾಂತಿಕತೆಯನ್ನು ಅತ್ಯಂತ ಚತುರತೆಯಿಂದ 'ಹೈಜಾಕ್' ಮಾಡಿ ಅದರ ವಿರೋಧಿ ಸಿದ್ಧಾಂತವನ್ನು ಕಟ್ಟುತ್ತಾರೆ. (ಈ ಬಗೆಯಲ್ಲಿ ಹೈಜಾಕ್‌ಗೆ ಒಳಗಾಗುವ ಹಲವು ಉದಾಹಹರಣೆಗಳು ನಂತರದ ದಿನಗಳಲ್ಲೂ ಸ್ತ್ರೀವಾದದಲ್ಲಿದೆ). ಇವರು ವಿವೇಚನಾವಧಾನಿಗಳು. ಎಲ್ಲವನ್ನೂ ತಿಳಿದು, ಅರಿತು, ಅರ್ಥೈಸಿ ಸಮಾಜಮುಖಿಯಾದ ಸಿದ್ಧಾಂತವೊಂದನ್ನು ಮಂಡಿಸುವವರು. ಅವಿವೇಕಿಗಳನ್ನು, ದುರ್ಜನರನ್ನು ಬಯಲಿಗೆಳೆದು, ತಿದ್ದಿ ಸರಿದಾರಿಗೆ ತರುವವರು. ಇಂತಹ ಪಾತ್ರವನ್ನು ರೂಪಿಸುವ ಮೂಲಕ ನಾಟಕಕಾರರು ಸ್ತ್ರೀವಾದವನ್ನು ವಿರೋಧಿಸುವವರು ಪೂರ್ವಾಗ್ರಹಿಗಳಿಲ್ಲ, ಸಂಯಮಿಗಳು, ನ್ಯಾಯ ಪಕ್ಷಪಾತಿಗಳು ಎಂಬುದನ್ನು ಸಾಬೀತುಪಡಿಸಲು ವಿಶೇಷವಾಗಿ ಇಲ್ಲಿ ಯತ್ನಿಸುತ್ತಾರೆ. ಮೇಲಿನ ಎರಡು ಅಂಶಗಳ ಮೂಲಕ ಸ್ತ್ರೀವಾದ ಹಾಗು ಸ್ತ್ರೀವಾದಿಗಳನ್ನು ಟೊಳ್ಳುಗಿಸುವ, ಅದರ ವಿರೋಧಿ ವಾದವನ್ನು ಗಟ್ಟಿಯಾಗಿಸಿಕೊಳ್ಳುವ ತಂತ್ರವನ್ನು ಸಾಧಿಸಲು ಯತ್ನಿಸಿದ ನಂತರವೇ ಅವರು ಸ್ತ್ರೀವಾದಿ ಚಿಂತನೆಯನ್ನು ಒರೆಹಚ್ಚುವ ಕೆಲಸಕ್ಕೆ ಕೈಹಾಕುತ್ತಾರೆ.

ಸ್ತ್ರೀವಾದಿ ಪಾತ್ರಗಳನ್ನು ನಾಟಕವು ಟೊಳ್ಳಾಗಿಸುವ ವಿಧಾನವನ್ನು ಸ್ವಲ್ಪ ಪರಿಶೀಲಿಸಬಹುದಾಗಿದೆ. ನಾಟಕದ ಆರಂಭಕ್ಕೆ ಬರುವ ಮೊದಲ ಮೂರು ಗಂಡು ಪಾತ್ರಗಳು ಅವಧಾನಿಗಳ ಮಾತಿನಲ್ಲಿ ಹೇಳುವುದಾದರೆ, 'ಬಿ.ಎ.ಗಳೆಂದರೆ ಮಣ್ಣು ಮುದ್ದೆಗಳೇ ಸರಿ' ಎಂಬಂತವು. ಇವರು ಆಡುತ್ತಿರುವ ಮಾತಿಗೂ ಅವರ ಅನುಭವ ಪ್ರಾಮಾಣ್ಯಕ್ಕೂ ಸಂಬಂಧವೇ ಇಲ್ಲ. ಅವೆರಡೂ ಇರಬೇಕೆಂಬುದನ್ನು ಅವರಿಗೆ ಕಲಿಸುವವರು ಅವಧಾನಿಗಳು. ವಾಸ್ತವ ಬದುಕಿನಲ್ಲಿ (ಅವರ ಪ್ರಕಾರ) ಕುಟುಂಬಗಳಲ್ಲಿ ಹೆಂಡತಿಯರ ದಬ್ಬಾಳಿಕೆಗೆ ಒಳಗಾದ

ಪುರುಷರಿವರು. ಹಾಗಾಗಿ ಅವರ ವ್ಯಕ್ತಿಗತ ಅನುಭವದ ಮೂಲಕವೇ ಅವರು ಅನುಕರಿಸುತ್ತಿರುವ ಸ್ತ್ರೀ ಸ್ವಾತಂತ್ರ್ಯದ ಪ್ರಶ್ನೆ ಬಿದ್ದು ಹೋಗುತ್ತದೆ. ಅದನ್ನು ಅವರ ತಿಳುವಳಿಕೆಗೆ ತಂದು ಕೊಡುವ ಕೆಲಸವನ್ನಷ್ಟೇ ಅವಧಾನಿಗಳು ಮಾಡುತ್ತಾರೆ. ಉಳಿದಂತೆ ಸ್ತ್ರೀವಾದದ ಮೇಲೆ ಯಾವ ನೇರ ಪ್ರಹಾರವನ್ನು ಈ ಹಂತದಲ್ಲಿ ಅವಧಾನಿಗಳು ಮಾಡುವುದಿಲ್ಲ.

ಇನ್ನು ಆ ಮೂವರು ಗಂಡಸರ ಅನುಭವವನ್ನು ಪರಿಶೀಲಿಸುವುದಾದರೆ, ಅದು ಕುಟುಂಬದ ವ್ಯಾಪ್ತಿಗೆ ಕೇಂದ್ರೀಕೃತವಾದುದು. ರಾಮರಾಯರ ಪ್ರಕಾರ ಹೆಂಡತಿಯರು ಗಂಡನಿಗೆ ಅಧೀನರಾಗಿರುವುದಿಲ್ಲ. ಬದಲಿಗೆ ತವರಿನ ಪರ, ಗಂಡನ ಮನೆಯವರ ವಿರೋಧ ರಾಜಕಾರಣ ಮಾಡುತ್ತಾರೆ. ತಮ್ಮ ವ್ಯಾಪ್ತಿಯ ಒಳಗೇ ಗಂಡಸರಿಗೆ ಎರಡು ಬಗೆಯುತ್ತಾರೆ. ಕೃಷ್ಣರಾಯರ ಪ್ರಕಾರ ಹೆಂಡತಿಯರು ಗಂಡನ ಅಧಿಕಾರಕ್ಕೆ ಪ್ರತಿ ಅಧಿಕಾರ ಹೂಡುತ್ತಾರೆ. ಅಂದರೆ ಮನೆಯೊಳಗಿನ ಪತಿಯ ಅಧಿಕಾರವನ್ನು ಮುರಿಯಲು ಯತ್ನಿಸುತ್ತಾರೆ. ಗೋವಿಂದರಾಯರ ಪ್ರಕಾರ ಗಂಡಸು ಎಷ್ಟೇ ಪ್ರಯತ್ನಿಸಿದರೂ ಹೆಣ್ಣನ್ನು ಹತೋಟಿಯಲ್ಲಿಡಲು ಸಾಧ್ಯವಿಲ್ಲ. ಏಕೆಂದರೆ ಅವರು ಕುಟುಂಬದಲ್ಲಿನ ಗಂಡಿನ ಅಧಿಕಾರವನ್ನು ವಿವಿಧ ತಂತ್ರಗಳಿಂದ ಅನೂರ್ಜಿತಗೊಳಿಸುತ್ತಾರೆ.

ಮೇಲಿನ ಮೂವರ ಅನುಭವಗಳನ್ನು ಕಲೆಹಾಕಿ ಸ್ತ್ರೀ-ಪುರುಷರ ಒಳ-ಹೊರ ಎಂಬ ವಿಭಜಿತ ಕ್ಷೇತ್ರವನ್ನು ನೋಡುವುದಾದರೆ, ಅಲ್ಲಿ ಒಳಗಿನ ಒಡತಿಯರಾದ ಹೆಂಗಸರು ಪುರುಷನ ಅಧಿಕಾರವನ್ನು ನಿರಾಕರಿಸುತ್ತಾರೆ. ಹಾಗಾಗಿ ಮನೆಗಳಲ್ಲಿ ಸ್ತ್ರೀಯರ ಅಧೀನತೆ, ಶೋಷಣೆ ಎಂಬ ವಾದ ನಿರಾಧಾರವಾದದು. ಬದಲಿಗೆ ಮನೆಯೊಳಗಿಂದಲೇ ಪುರುಷನ ಹೊರಗಿನ ಅಧಿಕಾರದಲ್ಲೂ ಅವರು ಹಸ್ತಕ್ಷೇಪ ಮಾಡಲು ಯತ್ನಿಸುತ್ತಾರೆ. ಹಾಗಾಗಿ ಕುಟುಂಬಗಳಲ್ಲಿ ಹೆಣ್ಣು ಅಧೀನತೆಯನ್ನು ಅನುಭವಿಸುವುದು, ಪತಿಯನ್ನು ಅನುಸರಿಸುವುದು ಇತ್ಯಾದಿ ಮೌಲ್ಯಗಳಿಗೆ ಅನುಭವ ಪ್ರಾಮಾಣ್ಯವಿಲ್ಲ. ಇನ್ನು ಆಕೆ ಶೋಷಣೆಗೆ ಒಳಗಾಗುತ್ತಿಲ್ಲವೆಂದಾದ ಮೇಲೆ ಸುಧಾರಣೆ, ಬಿಡುಗಡೆ ಇತ್ಯಾದಿ ಪ್ರಶ್ನೆಗಳಿಗೆ ಇಲ್ಲಿ ಅವಕಾಶವೇ ಇಲ್ಲ. ಇದು ಒಂದು ನೆಲೆಯಲ್ಲಿ ಸ್ತ್ರೀವಾದವನ್ನು ಟೊಳ್ಳಾಗಿಸುವ ಪ್ರಯತ್ನ. ಆದರೆ ಇದಿಷ್ಟೇ ಈ ಕೃತಿಯ ಗುರಿಯಲ್ಲ. ಬದಲಿಗೆ ಅದು ಸ್ತ್ರೀವಾದದ ಬಗ್ಗೆ ಅಪಪ್ರಚಾರ ಮಾಡುವ ಇನ್ನೊಂದು ಮಹತ್ವದ ಗುರಿಯನ್ನು ಹೊಂದಿದ್ದಾಗಿದೆ. ಅದಕ್ಕಾಗಿ ನಾರಾಯಣ ಅಯ್ಯಂಗಾರರ ಪಾತ್ರವಿದೆ. ಆತ ನೇರವಾಗಿ ಸ್ವಲ್ಪವೂ ನಾಚದೆ ತಾನು ತನ್ನ ಸ್ವಾರ್ಥ ಸಾಧನೆಗಾಗಿ, ವಿಷಯ ಲೋಲುಪತೆಗಾಗಿ ಸ್ತ್ರೀವಾದಿಯಾಗಿದ್ದೇನೆ ಎನ್ನುತ್ತಾನೆ. ಸ್ತ್ರೀವಾದವನ್ನು ಅನೈತಿಕಗೊಳಿಸುವ ಈ ಹುನ್ನಾರು ನಾಟಕದಲ್ಲಿ ಮತ್ತು ಮುಂದುವರಿದುದಾಗಿದೆ. ಅದನ್ನು ಕೆಲವು ಹೆಣ್ಣು ಪಾತ್ರಗಳ ಮೂಲಕವೇ ನಾಟಕಕಾರರು ಪರಿಪೂರ್ಣಗೊಳಿಸಲೆತ್ನಿಸುತ್ತಾರೆ.

ನಾಟಕದಲ್ಲಿನ ಗಂಡು ಪಾತ್ರಗಳಿಂದ ಪ್ರತಿಪಾದಿಸಲು ಯತ್ನಿಸಲಾದ ವಿಚಾರಗಳನ್ನು ಗಟ್ಟಿಗೊಳಿಸುವ ಸಲುವಾಗಿ ಅವುಗಳಿಗೆ ಪೂರಕವಾಗುವಂತೆ ಕೆಲವು ಹೆಣ್ಣು ಪಾತ್ರಗಳನ್ನು ತರುತ್ತಾರೆ. ಸ್ವತಃ ಹೆಂಗಸರ ಬಾಯಲ್ಲಿಯೇ ನಾವು ಸುಖಿಗಳು, ಕಷ್ಟಪಡುತ್ತಿರುವವರೇನಿದ್ದರೂ

ಗಂಡಸರು ಎಂದು ಹೇಳಿಸುವುದರ ಮೂಲಕ ಮೇಲಿನ ಮೊದಲ ಮೂರು ಪುರುಷರ ಅನುಭವವನ್ನು ಪ್ರಮಾಣೀಕರಿಸುತ್ತಾರೆ. ಆದ್ದರಿಂದಲೇ ಪಾರ್ವತಮ್ಮ 'ನಮ್ಮ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲದೆ ಬಂದಿರುವ ಕೇಡೇನೋ? ಹಾಗೆ ನೋಡಿದರೆ ನಿಜವಾಗಿಯೂ ಪುರುಷರಿಗೆ ಸ್ವಾತಂತ್ರ್ಯವಿಲ್ಲ' ಎಂದರೆ, ಪದ್ಮಮ್ಮ ಮತ್ತು ರಂಗಮ್ಮನ ಪಾತ್ರಗಳು ನೇರವಾಗಿ ತಮ್ಮ ವಿಷಯ ಲೋಲುಪತೆ, ನೈತಿಕ ಭ್ರಷ್ಟತೆಯನ್ನು ನಿಸ್ಸಂಕೋಚವಾಗಿ ಹೇಳುತ್ತವೆ. (ಈ ಪಾತ್ರಗಳು ನಾರಾಯಣ ಅಯ್ಯಂಗಾರರ ಪಾತ್ರಕ್ಕೆ ಪೂರಕವಾಗಿವೆ.) ಇಂತಹ 'ಹೆಂಗಸರನ್ನೇ ಪಾರ್ವತಮ್ಮ 'ನಾಚಿಕೆ ಹೇಸಿಕೆಗಳಿಲ್ಲದ ಭಂಡ ಮುಂಡೆಯರು. ತಮಗೆ ಕಂಡ ಕಂಡವರಲ್ಲಿ ಸ್ವೇಚ್ಛಾ ವಿಹಾರಕ್ಕೆ ಅವಕಾಶವಿಲ್ಲವೆಂಬುದಕ್ಕೋಸ್ಕರ ಹೀಗೆ ಹೇಳುತ್ತವೆ' ಎಂದು ವ್ಯಾಖ್ಯಾನಿಸುತ್ತಾರೆ. ಇಷ್ಟೆಲ್ಲ ವಾದ-ವಿವಾದಗಳು, ಘಟನೆಗಳು ಜರುಗುವಾಗ ಅವಧಾನಿಗಳು ಕೇವಲ ಸೂತ್ರಧಾರಿ ಗಳಾಗಿ ನಿಂತು ಎಲ್ಲರಿಂದ ಮಾತನಾಡಿಸುತ್ತಾರೆ, ತಮ್ಮ ಅಭಿಪ್ರಾಯವನ್ನು ಕ್ಲೈಮ್ಯಾಕ್ಸಿಗಾಗಿ ಕಾದಿಡುತ್ತಾರೆ.

ನಾಟಕದ ಕೊನೆ ಅಂಕ ಸಂಪೂರ್ಣವಾಗಿ ವಿವೇಚನಾವಧಾನಿಗಳ ಉಪನ್ಯಾಸಕ್ಕೆ ಮೀಸಲು. ಇದು ಒಂದು ರೀತಿಯಲ್ಲಿ ಜಡ್ಜಮೆಂಟ್ ಸೀನ್. ಇಲ್ಲಿ ಮತ್ತೆ ಪ್ರಶ್ನೆ, ಸಾಕ್ಷಿ ಇತ್ಯಾದಿಗಳ ಅಧಿಕ ಪ್ರಸಂಗವಿಲ್ಲ. ಇದುವರೆಗೆ ಸಾಕ್ಷ್ಯಾಧಾರಗಳನ್ನು ವಾದ ವಿವಾದಗಳನ್ನೂ (?) ಪ್ರೇಕ್ಷಕರ ಮುಂದಿಟ್ಟ ಅವಧಾನಿಗಳು ಅದರ ಆಧಾರದ ಮೇಲೆ ತಮ್ಮ 'ನಿಷ್ಪಕ್ಷಪಾತ' ತೀರ್ಪನ್ನು ಮಂಡಿಸುತ್ತಾರೆ. ಅವರಿಗೆ ರಾಗದ್ವೇಷಗಳಿಲ್ಲ. ಪಕ್ಷಪಾತವಿಲ್ಲ. ಅಕ್ರಮದಾರಿಗಳಿಲ್ಲ. ಇರುವುದೆಲ್ಲ ವಿವೇಚನಾಪೂರ್ಣವಾದ, ಹೃದಯ ವೈಶಾಲ್ಯದ 'ರಾಜಮಾರ್ಗ'. ಸ್ತ್ರೀ ಪುರುಷರಿಬ್ಬರೂ ಸ್ವಾತಂತ್ರ್ಯದಲ್ಲಿ, ಸಮಾನತೆಯಲ್ಲಿ ಸಮಸಮನಾಗಿ ಬಂಧಿತರು ಎಂಬುದನ್ನು ಎತ್ತಿಹಿಡಿಯುವ ಘನ ಉದ್ದೇಶದ್ದು ಮಾತ್ರ.

ನಾಟಕವನ್ನು ಆರಂಭಿಸಿ, ಸೂತ್ರಧಾರನಾಗಿ ಎಲ್ಲ ಪಾತ್ರಗಳನ್ನು ಆಡಿಸಿ, ಮಾತನಾಡಿಸಿದ ಅವಧಾನಿಗಳು ಈಗ ನಿಮ್ಮೆಲ್ಲರ ಕೋರಿಕೆಯ ಮೇರೆಗೆ ನಾನು ಉಪನ್ಯಸಿಸುತ್ತೇನೆ. ನಾನು ಈ ಬಗ್ಗೆ ಯಾವುದೇ ತಯಾರಿ ಮಾಡಿಕೊಂಡು ಬಂದಿಲ್ಲ ಎನ್ನುತ್ತಾರೆ. (ಪಂಪ ಭಾರತದ ಕೃಷ್ಣ ಬೇಧಿಸಲೆಂದೇ ನುಡಿಯೆನು ಎಂದು ಕರ್ಣನಿಗೆ ಹೇಳುವುದಿಲ್ಲವೆ ಹಾಗೆ, ಸಂಪೂರ್ಣ ವಿನಯ (?) ದೊಂದಿಗೆ ತಮ್ಮ ವಾದವನ್ನು ಮಂಡಿಸುತ್ತಾರೆ. ಈ ವಾದದಲ್ಲಿ ಸ್ತ್ರೀ-ಪುರುಷರ ನಡುವಿನ ಬೇಧವು ನಿಸರ್ಗ ಸಹಜವಾದುದು, ಅದನ್ನಾಧರಿಸಿಯೇ ಸಮಾಜವು ಅವರಿಬ್ಬರ ಕಾರ್ಯಕ್ಷೇತ್ರವನ್ನು ವಿಭಜಿಸಿದೆ. ಇದು ಅತ್ಯಂತ ಸಹಜವಾದುದು, ಸೂಕ್ತವಾದುದು ಇತ್ಯಾದಿ ಗಳನ್ನು ವಿವರಿಸುತ್ತ ಇಂತಹ ಆದರ್ಶ ಸ್ಥಿತಿಯಲ್ಲಿ ಅಸಮಾನತೆ, ಶೋಷಣೆಯ ಪ್ರಶ್ನೆ ಎಲ್ಲಿಂದ ಬರಬೇಕು. ಶಕ್ತಿ ಮತ್ತು ಪರಾಧೀನತೆಗಳನ್ನು ಸೃಷ್ಟಿಕರ್ತ ಇಬ್ಬರಿಗೂ ನೀಡಿದ್ದಾನೆ. ಸಮಾಜ ಅದಕ್ಕನುಗುಣವಾಗಿ ವಿಭಜನೆ ಮಾಡಿದೆ. ಇಲ್ಲಿ ಒಬ್ಬರನ್ನು ಇನ್ನೊಬ್ಬರು ಬದಲಿಸುವ, ಅಧೀನವಾಗಿಸುವ ಸಾಧ್ಯತೆಗಳೇ ಇಲ್ಲ. ಹಾಗಾಗಿ ಯಾರ ಮಹತ್ವ ಹೆಚ್ಚು, ಯಾರದು ಕಡಿಮೆ? ಪುರುಷ ಪರತಂತ್ರನೋ, ಸ್ತ್ರೀಯೋ? ಇತ್ಯಾದಿಗಳು ಅರ್ಥಹೀನವಾದವು.

ಈಗಿರುವಂತೆಯೇ ಈ ಸಮಾಜದ ಪದ್ಧತಿಗಳು ಸೈಂಟಿಫಿಕ್ಕಾಗಿ, ನ್ಯಾಯವಾಗಿಯೇ ಇದೆ ಎನ್ನುತ್ತಾರೆ.

ನಾಟಕವನ್ನು ಓದಿದ ಯಾರಿಗಾದರೂ ನಾಟಕಕಾರರು ಸ್ತ್ರೀ ಸಮಾನತೆಯ ಪ್ರಶ್ನೆಯನ್ನು ತಿರುಚಿ ಪ್ರತಿಪಾದಿಸುವಲ್ಲಿ ಪಟ್ಟಿರುವ ಶ್ರಮ ಎಂತದ್ದು ಎಂಬುದು ಅರಿವಾಗದಿರದು. ಸ್ತ್ರೀವಾದದ ತಾತ್ವಿಕ ದ್ರವ್ಯಗಳಾದ ಸಮಾನತೆ, ಸ್ವಾತಂತ್ರ್ಯಗಳನ್ನು ಬಳಸಿಕೊಂಡು ಅದನ್ನು ಒಪ್ಪುತ್ತಲೇ, ಈಗಿರುವ ಸಮಾಜದಲ್ಲಿಯೇ ಅದು ಇದೆ ಎಂಬ ಅಭಿಪ್ರಾಯ ಮಂಡಿಸುವ, ಅದಕ್ಕೆ ಸಾಕ್ಷ್ಯಾಧಾರಗಳನ್ನು ಸೃಷ್ಟಿಸುವ ಜಾಣ್ಮೆ ಇಲ್ಲಿ ಎದ್ದು ಕಾಣುತ್ತದೆ. ಸ್ತ್ರೀ ಪುರುಷನ ಅಧೀನತೆಯಲ್ಲಿಯೇ ಬದುಕಬೇಕೆಂಬ ಒರಟಾದ ಮೂಲಭೂತವಾದಿ ಮಾದರಿಗೆ ಬದಲಾಗಿ ಅತ್ಯಂತ ನವಿರಾಗಿ ಆ ಪ್ರಶ್ನೆಗಳೇ ಅಸಂಬದ್ಧವೆಂಬ ಇನ್ನಷ್ಟು ಆಳದ ಪ್ರತಿಗಾಮಿ ಧೋರಣೆಯನ್ನು ಲೇಖಕರು ಪ್ರತಿಪಾದಿಸುತ್ತಾರೆ. ಸ್ತ್ರೀವಾದಿಗಳ ಚಾರಿತ್ರ್ಯವನ್ನು ವಧೆ ಮಾಡುವ ಮೂಲಕ ಸ್ತ್ರೀವಾದವನ್ನು ಸದೆ ಬಡಿಯಬಹುದೆಂಬ ಅತ್ಯಂತ ಅಪಾಯಕಾರಿಯಾದ ಹಾಗೂ ಪರಿಣಾಮಕಾರಿಯಾದ ತಂತ್ರವೊಂದನ್ನು ಲೇಖಕರು ಇಲ್ಲಿ ಆವಿಷ್ಕರಿಸಿಕೊಂಡಿದ್ದಾರೆ. (ಇವತ್ತಿಗೂ ಇದು ಬಳಕೆಯಲ್ಲಿದೆ.)

ಈ ನಾಟಕದ 'ಶತ್ರುತ್ವ'ದ ಮಾದರಿ ಅತ್ಯಂತ ಭಿನ್ನವಾದುದಾಗಿದ್ದು ಅದನ್ನು ಎರಡು ನೆಲೆಯಲ್ಲಿ ಗ್ರಹಿಸಬಹುದಾಗಿದೆ. ೧. ಸ್ತ್ರೀವಾದಿ ವಿರೋಧಿ ನೆಲೆಯ ತಾತ್ವಿಕತೆ ೨. ಅದನ್ನು ಪ್ರತಿಪಾದಿಸುವ/ತರ್ಕಿಸುವ ವಿಧಾನ. ಸ್ತ್ರೀವಾದವನ್ನು ಅನೈತಿಕಗೊಳಿಸುವ, ಅಪಮೌಲ್ಯಗೊಳಿಸುವ ಈ ಮಾದರಿ ಹೆಚ್ಚು ಅಪಾಯಕಾರಿಯಾದುದಾಗಿದೆ. ಈ ಹಿನ್ನೆಲೆಯಲ್ಲಿ ಕೆಳಗಿನ ಅಂಶಗಳನ್ನು ಗಮನಿಸಬೇಕಿದೆ.

ಇಡೀ ನಾಟಕವನ್ನು ಸ್ತ್ರೀವಾದದ ಕುರಿತ ಪೂರ್ವಾಗ್ರಹದ ಕಾರಣಕ್ಕಾಗಿಯೇ ರಚಿಸಲಾಗಿದೆ. ಸ್ತ್ರೀವಾದ ಎತ್ತುವ ಮೂಲಭೂತವಾದ ಪ್ರಶ್ನೆಗಳಿರಲಿ, ಸಣ್ಣಪುಟ್ಟ ಸುಧಾರಣಾವಾದಿ ಪ್ರಯತ್ನದ ಬಗ್ಗೆಯೇ ಈ ನಾಟಕಕ್ಕೆ ಹೆಚ್ಚಿನ ಆತಂಕವಿದೆ. ಮುನ್ನುಡಿ ಹಾಗೂ ನಾಟಕಾಂತರಂಗವನ್ನು ಗಮನಿಸಿದರೆ ನಾಟಕಕಾರರಿಗೆ ಕೇವಲ ಸ್ತ್ರೀ ಸುಧಾರಣೆಯಷ್ಟೇ ಅಲ್ಲ ಜಾತಿ ಪದ್ಧತಿಯ ನಿರಾಕರಣೆಯಂತಹ ಇತರ ಪ್ರಗತಿಪರ ವಿಚಾರಗಳ ಬಗ್ಗೆ ಕೂಡ ಅಸಹನೆಯಿರುವಂತಿದೆ. (ಈ ದಿಕ್ಕಿನಲ್ಲಿ ಅವರ ಚಟುವಟಿಕೆ ಹೇಗಿರಬಹುದೆಂದು ತಿಳಿಯಲು ಹೆಚ್ಚಿನ ಸಂಶೋಧನೆಗೆ ತೊಡಗಬೇಕಾಗುತ್ತದೆ.)

ಈ ನಾಟಕದ ಸಂದರ್ಭದಲ್ಲಿ ಗಮನಿಸಬೇಕಾದ ಇನ್ನೊಂದು ಮಹತ್ವದ ವಿಚಾರವಿದೆ. ಹಲವು ಅಧ್ಯಯನಗಳು ಈಗಾಗಲೇ ಗುರುತಿಸುವಂತೆ ಮಹಿಳೆಯನ್ನು ಮಾತ್ರ ಭಾರತೀಯ ಸಂಸ್ಕೃತಿಯ ವಕ್ತಾರಳಾಗಿ ಪ್ರತಿಪಾದಿಸುವ ಪ್ರಯತ್ನ ಜನಪ್ರಿಯ ಇಲ್ಲಿ ಕಾಣುವುದಿಲ್ಲ. ಪಾರ್ವತಮ್ಮನ ಪಾತ್ರ ಹೊರತುಪಡಿಸಿ ನೋಡಿದರೆ ಯಾವುದೇ 'ಆದರ್ಶ ಸ್ತ್ರೀಯ' ಪಾತ್ರವನ್ನು ಇಲ್ಲಿ ಚಿತ್ರಿಸಿಲ್ಲ. ಅಂದಿನ ಕಾಲದ ಜನಪ್ರಿಯ ಮಾದರಿ 'ಆದರ್ಶ' ಹಾಗೂ 'ಉದ್ಧಟ' ಪಾತ್ರಗಳನ್ನು ಮುಖಾಮುಖಿಯಾಗಿಸಿ ಆ ಮೂಲಕ 'ಆದರ್ಶ' ಬೋಧಿಸು

ವುದಾಗಿತ್ತು. ಆ ಮಾದರಿ ಈ ಕೃತಿಯಲ್ಲಿಲ್ಲ. ಪಾರ್ವತಮ್ಮನ ಪಾತ್ರಕ್ಕೆ ಆ ಪ್ರಮಾಣದ 'ಆದರ್ಶ ಸ್ತ್ರೀ' ಪಾತ್ರದ ಬೆಳವಣಿಗೆಯನ್ನು ನಾಟಕಕಾರರು ನೀಡಿಲ್ಲ. ಅದಕ್ಕೆ ಬದಲಾಗಿ ಸ್ತ್ರೀ ಸ್ವಾತಂತ್ರ್ಯದ ನೆಪದಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ಅನೈತಿಕ ಹಾಗೂ ಸ್ವೇಚ್ಛಾ ಸಮಾಜ ನಿರ್ಮಿಸಲು ಅವಕಾಶ ಕಲ್ಪಿಸಿದಂತಾಗುತ್ತದೆ ಎಂಬ ವಾದವಿದೆ. ಇದು ನಮ್ಮ ಅಧ್ಯಯನಗಳ ಸಂದರ್ಭದಲ್ಲಿ ಗಮನಿಸಬೇಕಾದ ಮಹತ್ವದ ವಿಚಾರ.

ಗಮನಿಸಬೇಕಾದ ಇನ್ನೊಂದು ಅಂಶ ಸ್ತ್ರೀವಾದಿ ಸೈದ್ಧಾಂತಿಕತೆಯನ್ನು ನಾಟಕಕಾರರು ಹೈಜಾಕ್ ಮಾಡುವ ವಿಧಾನದಲ್ಲಿನ ವಿವರಗಳು. ಆಧುನಿಕೋತ್ತರ ಸ್ತ್ರೀವಾದವು ಮುಂಚೂಣಿಗೆ ತಂದಿರುವ ಹೆಣ್ಣು ಗುಣ-ಗಂಡು ಗುಣ ಎಂಬ ಪರಿಕಲ್ಪನೆಗಳ ಪ್ರಸ್ತಾಪ ಈ ನಾಟಕದಲ್ಲಿಯೇ ವ್ಯಕ್ತವಾಗಿದ್ದು, ಅವು ದೈವ ನಿರ್ಮಿತ, ನಿಸರ್ಗ ಸಹಜ ಎಂದು ವಾದಿಸಿದ್ದರೂ, ಕೆಲವೊಮ್ಮೆ ಅವು ಆರ್ಜಿತ ಗುಣಗಳಾಗಿ ಕೂಡ ಮಾರ್ಪಡಬಲ್ಲವು ಎಂಬುದನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಅದಕ್ಕೆ ಉದಾಹರಣೆ ನೀಡುವಾಗ ಶೂದ್ರ ಸ್ತ್ರೀ ಹಾಗೂ ಬ್ರಾಹ್ಮಣ ಸ್ತ್ರೀ ಎಂಬ ಜಾತಿ ಆಧಾರಿತ ವಿಭಜನಾ ಕ್ರಮವನ್ನು ಮಂಡಿಸಿ ತನ್ನ ಪ್ರಮೇಯವನ್ನು ಸಾಧಿಸಲಾಗಿದೆ. ಅದಕ್ಕೆ ಪೂರ್ವದಲ್ಲಿ ಸ್ತ್ರೀ ಪುರುಷರಿಗೆ ದೇವರು ನೀಡಿರುವ ಸ್ಥಿರ ಗುಣಗಳಿಂದಾಗಿ ಸಂದರ್ಭವಶಾತ್ ಸ್ತ್ರೀಯರನ್ನು ಪುರುಷರು ಒಂದು ವೇಳೆ ಬಿಟ್ಟು ಬಿಡಬಹುದೆಂಬುದನ್ನು ಗಮನಿಸಿ ಆ ದೇವರು ಹಾಗಾಗದಂತೆ ಮಾಡಲು ಸ್ತ್ರೀಯರಲ್ಲಿ ಕೆಲವು ಸ್ವಾಭಾವಿಕ ಶಕ್ತಿಗಳನ್ನುಂಟು ಮಾಡಿದನು ಎಂದು ಪ್ರಸ್ತಾಪಿಸುತ್ತಾರೆ. ಆದರೆ ಆ ಶಕ್ತಿಗಳು ಯಾವುವು ಎಂಬುದನ್ನು ವಿವರಿಸಬೇಕಾದ್ದಿಲ್ಲ ಎಂದು ಕೈ ಬಿಡುತ್ತಾರೆ. ಅದು ಬಹುಶಃ ತಾಯ್ತನ, ಸೌಂದರ್ಯ ಇತ್ಯಾದಿಗಳನ್ನು ಕುರಿತದ್ದಾಗಿರಬಹುದು ಎಂದು ನಾವು ಊಹಿಸ ಬಹುದಷ್ಟೆ. ಆದರೆ ಅದರೊಂದಿಗೆ ಸಹನಗುಣ, ವಾತ್ಸಲ್ಯ ಇತ್ಯಾದಿಗಳನ್ನೂ ನಾಟಕದ ಹಿನ್ನೆಲೆಯಲ್ಲಿ ತರ್ಕಿಸಿ ಸೇರಿಸಬಹುದಾಗಿದೆ. ಭಾಷಾಶಾಸ್ತ್ರದ ವಿವರಗಳ ಆಧಾರವನ್ನು ಬಳಸಿಕೊಂಡು ಸ್ತ್ರೀ ಸಮಾನತೆ ಈ ಸಮಾಜದಲ್ಲಿ ಈಗಾಗಲೇ ಇದೆ ಎಂದು ತರ್ಕಿಸುವ ಸೂಚನೆಯು ಇಲ್ಲಿದೆ. ಈ ವಿವರಗಳಲ್ಲಿ ನಾಟಕವನ್ನು ಗ್ರಹಿಸುವುದಾದರೆ ಇದು ವಸಾಹತುಶಾಹಿ ಕನ್ನಡದ ಸಂದರ್ಭದಲ್ಲಿನ ಸ್ತ್ರೀವಾದಿ ವಿರೋಧಿ ಚಟುವಟಿಕೆಯ ಒಂದು 'ಗಂಭೀರ' ಪ್ರಯತ್ನವಾಗಿದೆ. ಆಧುನಿಕೋತ್ತರ ಸ್ತ್ರೀವಾದದ ಸಂದರ್ಭದವರೆಗಿನ ಹಲವು ಪರಿಕಲ್ಪನೆಗಳನ್ನು ತನಗೆ ಬೇಕಾದಂತೆ ಪಳಗಿಸಿಕೊಳ್ಳಲು ಯತ್ನಿಸಿರುವುದು, ಸ್ತ್ರೀವಾದಿ ಮಾನವಶಾಸ್ತ್ರದ ತರ್ಕದ ನೆರಳಲ್ಲಿ ತನ್ನ ಅರ್ಥೈಸುವಿಕೆಯನ್ನು ಮುನ್ನಡೆಸಲು ಪ್ರಯತ್ನಿ ಸಿರುವುದು ಇತ್ಯಾದಿ ಅಂಶಗಳು ಅದರ ಶ್ರಮದ ಸ್ವರೂಪವನ್ನು ಸಾದರಪಡಿಸುತ್ತವೆ.

ನಿಸ್ಸಂಶಯವಾಗಿ ಇದೊಂದು ಅತ್ಯಂತ ಶ್ರದ್ಧೆಯಿಂದ, ಜಾಣ್ಮೆಯಿಂದ ನಡೆಸಿರುವ ಪ್ರಯತ್ನ. ತಮ್ಮ ಪ್ರಯತ್ನದಲ್ಲಿ ನಾಟಕಕಾರರಿಗೆ ಕಿಂಚಿತ್ತಾದರೂ ಉಢಾಫೆಯಾಗಲಿ ನಿರ್ಲಕ್ಷ್ಯ ವಾಗಲಿ ಇಲ್ಲ. ತಮ್ಮ ಗುರಿ ಸ್ವಲ್ಪ ಕದಲುವುದರ ಬಗ್ಗೆಯೂ ಅದಕ್ಕೆ ಸಹಮತವಿಲ್ಲ. ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ ಸ್ತ್ರೀವಾದದ ಬಗೆಗಿರುವ ಪಿತೃಪ್ರಧಾನತೆಯ ವಿಶೇಷ

ಲಕ್ಷ್ಯವನ್ನು, ಆತಂಕವನ್ನು ಇದು ಸೂಚಿಸುತ್ತದೆ. ಕೆಲವೊಮ್ಮೆ ಈ ಆತಂಕ ವಿಪರೀತದ ಪ್ರತಿಕ್ರಿಯೆಗಳಿಗೂ ಅದನ್ನು ಪ್ರಚೋದಿಸಿದೆ. ಸ್ತ್ರೀವಾದಿ ವಿಚಾರಧಾರೆ ಹರಡುವುದನ್ನು ತುರ್ತಾಗಿ ನಿಯಂತ್ರಿಸಬೇಕೆಂಬ ತುರ್ತಿನಿಂದಾಗಿ ಅದಕ್ಕೆ ಸ್ತ್ರೀವಾದದ ನಿಜವಾದ ತರ್ಕಬದ್ಧವಾದ ಪಾತ್ರವೊಂದನ್ನು ಸೃಷ್ಟಿಸಿ ಅದನ್ನು ಮುಖಾಮುಖಿಯಾಗುವ ಅಥವ 'ಆದರ್ಶ ಗೃಹಿಣಿ'ಯೊಬ್ಬಳನ್ನು ಸೃಷ್ಟಿಸಿ ಅವಳನ್ನು ಸ್ತ್ರೀವಾದಿಗೆ ಮುಖಾಮುಖಿಯಾಗಿಸುವ ತಾಳ್ಮೆ, ಅಗತ್ಯಗಳು ಉಂಟಾಗಿಲ್ಲ. ಆದ್ದರಿಂದಲೇ ಇದನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿ ಪ್ರತಿಕ್ರಿಯಿಸಬೇಕಾದ ಅಗತ್ಯ ಸ್ತ್ರೀವಾದಕ್ಕಿದೆ. ಇದು ಈ ಹೊತ್ತಿನ ಸ್ತ್ರೀವಾದಿ ಚಿಂತನೆ ಹಾಗೂ ಹೋರಾಟಕ್ಕೆ ಭಿನ್ನವಾದ ಆಯಾಮವೊಂದನ್ನು ಹೊಸದಾಗಿ ಕಟ್ಟಿಕೊಡುತ್ತದೆ. ಚಿಂತನೆ, ಹೋರಾಟಗಳೆರಡೂ ಆ್ಯಂಟಿ ಫೆಮಿನಿಸ್ಟ ಚಟುವಟಿಕೆಗಳನ್ನು ನೇರವಾಗಿ ಮುಖಾಮುಖಿ ಯಾಗಿರುವ ಅಗತ್ಯ ಅನಿವಾರ್ಯತೆ ಈ ಹೊತ್ತಿನದಾಗಿದೆ.

## ಅನುಬಂಧ

### ನವೀನ ಸ್ತ್ರೀ ಸ್ವಾತಂತ್ರ್ಯ
### ಅಥವ
### ಸ್ತ್ರೀ ಪುರುರಿಬ್ಬರೂ ಸಮರು

**ಪೀಠಿಕೆ**

ಈ ನವನಾಗರಿಕ ಕಾಲದಲ್ಲಿ ನಮ್ಮ ದೇಶದ ಜನಗಳಿಗೆ ವಿವೇಚನೆಯೆಂಬುದೇ ಪೂರ್ಣವಾಗಿ ತೊಲಗಿಹೋಗಿ ಬಿಟ್ಟಿದೆ. ಈಗಿನ ಕಾಲದಲ್ಲಿ ಜನರೆಲ್ಲರೂ, ಒಟ್ಟಿನಲ್ಲಿ, "ಎತ್ತೀಯಿತೆಂದರೆ ಕೊಟ್ಟಿಗೆಯಲ್ಲಿ ಕಟ್ಟು" ಎನ್ನುವ ಸ್ಥಿತಿಯಲ್ಲಿರುತ್ತಾರೆ. ಈ ಸ್ಥಿತಿಯು ಸಾಮಾನ್ಯವಾಗಿ ದೊಡ್ಡ ದೊಡ್ಡ ಸಂಬಳಗಾರರಲ್ಲಿಯೂ, ದೊಡ್ಡ ದೊಡ್ಡ ಪಾಸುಮಾಡಿ ಡಿಗ್ರಿಗಳನ್ನು ಪಡೆದಿರತಕ್ಕವರಲ್ಲಿಯೇ ಹೆಚ್ಚಾಗಿದೆ. ಈಗಿನ ಕಾಲದ (ಮತವಿಷಯದಲ್ಲಿ) ರಿಫಾರ್ಮರ್‌ಗಳೆಂದು ಹೆಸರಿಟ್ಟುಕೊಂಡು, **ಕೇವಲ ನೀಚವಾದ ಸ್ವಾರ್ಥವನ್ನೂ ವಿಷಯ ತೃಪ್ತಿಯನ್ನೂ ಹೊಂದುವುದಕ್ಕೋಸ್ಕರವೇ** ಉಪನ್ಯಾಸಗಳ ಮೂಲಕ "ನಮ್ಮ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲ, ಜಾತಿಕುಲಗೋತ್ರಗಳನ್ನು ಬಿಟ್ಟುಬಿಡಬೇಕು, ಸಹಪಂಕ್ತಿ ಭೋಜನ, ವಿಧವಾ ವಿವಾಹ, ಋತುಮತೀ ವಿವಾಹ ಇತ್ಯಾದಿಗಳೆಲ್ಲವೂ ಆಚರಣೆಗೆ ಬರಬೇಕು. ಯಾವ ಜಾತಿಯವರು ಯಾವ ಜಾತಿಯಲ್ಲಾದರೂ ಮದುವೆ ಮಾಡಿಕೊಳ್ಳಬೇಕೆಂದಾಗಬೇಕು. ಒಟ್ಟಿನಲ್ಲಿ ಇಂಡಿಯಾ ದೇಶದಲ್ಲಿರತಕ್ಕ ಜನರೆಲ್ಲರೂ ಒಳಭೇದಗಳೊಂದು ಇಲ್ಲದ ಒಂದೇ ಜಾತಿಯಾಗಿ ಗಂಡುಹೆಣ್ಣುಗಳೆಂಬ ಭೇದಗಳುಳ್ಳದ್ದಾಗಿ (ಇದು ದೈವ ನಿರ್ಮಾಣವಾಗಿ ರುವುದರಿಂದ ಇವರಿಗೆ ಅದನ್ನು ಬದಲಾಯಿಸಲು ಸಾಧ್ಯವಿಲ್ಲ. ಇಲ್ಲದಿದ್ದರೆ ಇವರು ಆ ಗಂಡುಹೆಣ್ಣನ್ನೂ ತಲೆಕೆಳಗಾಗಿ ಮಾಡುತ್ತಿದ್ದರು.) **ಗೋಜಾತಿಯಂತೆ** ಎಲ್ಲಾ ವಿಷಯಗಳಲ್ಲಿಯೂ ನಿರ್ಬಂಧವಿಲ್ಲದೆ ವ್ಯವಹರಿಸಿಬಿಟ್ಟರೆ ಆಗಲೀಗ ದೇಶವು ಅಭಿವೃದ್ಧಿಗೆ ಬರುವುದೆಂತಲೂ" ಹೇಳುವರು. ಇಂತಹ ನೀಚಸ್ವಾರ್ಥಿಗಳ ಮಾತನ್ನು ಕೇಳಿ ಇತರರೂ ಸಹ "ಅಂತಹ ದೊಡ್ಡ ದೊಡ್ಡ ಪಾಸ್ ಮಾಡಿದ ಸಂಬಳಗಾರರೇ ಹಾಗೆ ಹೇಳಬೇಕಾದರೆ ಮೇಲೆ ಹೇಳಿದ ವಿಷಯಗಳು ನಿಜವೇ ಇದ್ದರೂ ಇರಬಹುದು". ಹಾಗೆಯೇ ಆಗಬೇಕೆಂಬುದಾಗಿ ಇತರರೂ ಹೇಳುವುದಕ್ಕೂ, ತಾವು ಅದರಂತೆ ಜನಗಳಿಗೆ ಬೋಧಿಸುವುದಕ್ಕೂ ಆರಂಭಿಸಿರುವರು. ಹೀಗೆಯೇ ನಮ್ಮ ದೇಶದಲ್ಲಿ ಈ ಸ್ಥಿತಿಯು ಹೆಚ್ಚಾಗುತ್ತಾ ಬಂದರೆ ನಮ್ಮ ದೇಶವು ಕೇವಲ ಹೀನಸ್ಥಿತಿಗೆ ಬರುವುದರಲ್ಲಿ ಸಂಶಯವಿಲ್ಲ. ಆದುದರಿಂದ ಈಗಿನ ಕಾಲದ ಜನಗಳಲ್ಲಿ

ಕೊಂಚಮಟ್ಟಿಗಾದರೂ ಯುಕ್ತಾಯುಕ್ತ ವಿವೇಚನಾ ಜ್ಞಾನವನ್ನುಂಟು ಮಾಡಬೇಕೆಂತಲೂ, ಈಗಿನವರು ಹೇಳುವಂತೆ ಮೇಲಿನ ಸಂಗತಿಗಳು ಎಷ್ಟುಮಟ್ಟಿಗೆ ನಿಜ ಸುಳ್ಳು ಎಂಬುದನ್ನು ಕೊಂಚವಾದರೂ ವಿಮರ್ಶಿಸಲಿ ಎಂಬ ಉದ್ದೇಶದಿಂದಲೂ, ಮೇಲಿನ ವಿಷಯಗಳಲ್ಲೊಂದಾದ "ನವೀನ ಸ್ತ್ರೀ ಸ್ವಾತಂತ್ರ್ಯ"ವೆಂಬ ಪುಸ್ತಕವನ್ನು ಬರೆದಿರುತ್ತೇನೆ.

ಇದರಲ್ಲಿ ಮೊದಲನೆಯ ಭಾಗದಲ್ಲಿ ನಮ್ಮ ಸ್ತ್ರೀಯರಿಗೆ ನಿಜವಾಗಿಯೂ ಸ್ವಾತಂತ್ರ್ಯವಿಲ್ಲವೇ ಎಂಬುದನ್ನು ಚರ್ಚಿಸಿಯಿದೆ. ಎರಡನೆಯ ಭಾಗದಲ್ಲಿ ಈಗಿನ ಕಾಲದಲ್ಲಿ ಯಾವ ಯಾವ ದುರುದ್ದೇಶದಿಂದ ಜನರು ಈ ರೀತಿ ಹೇಳುತ್ತಾರೆಂಬುದನ್ನು ಕೊಂಚಮಟ್ಟಿಗೆ ವಿವರಿಸಿಯಿದೆ. ಮೂರನೇ ಭಾಗದಲ್ಲಿ ಮೇಲ್ಕಂಡ ವಿಷಯದಲ್ಲಿ ಕೆಲವು ಹೆಂಗಸರ ಸಾಕ್ಷ್ಯಗಳನ್ನು ವಿವರಿಸಿಯಿದೆ. ಇನ್ನು ನಾಲ್ಕನೆಯ ಭಾಗದಲ್ಲಿ "ಸ್ತ್ರೀಪುರುಷರಿಬ್ಬರೂ ಸಮರ" ಎಂಬ ವಿಷಯವನ್ನು ಯುಕ್ತಿಯುಕ್ತವಾಗಿ ಸಮರ್ಥಿಸಿಯಿದೆ.

ವಾಚಕರು ಈ ಪುಸ್ತಕವನ್ನು ಆಮೂಲಾಗ್ರವಾಗಿ ಓದಿ ಇದರಲ್ಲಿರತಕ್ಕ ಗುಣಗಳನ್ನು ಮಾತ್ರ ಗ್ರಹಿಸಿ ಎಲ್ಲರೂ ಕೊಂಚಮಟ್ಟಿಗಾದರೂ ವಿವೇಚನಾಶಕ್ತಿಯನ್ನು ಉಂಟುಮಾಡಿಕೊಂಡರೆ ಅಲ್ಲಿಗೆ ಗ್ರಂಥಕರ್ತನ ಶ್ರಮವು ಸಾರ್ಥಕವಾದಂತೆಯೇ ಸರಿ.

ನಮ್ಮ ತಪ್ಪು ನಮಗೆ ತಿಳಿಯುವುದು ಶ್ರಮಸಾಧ್ಯವಾದುದರಿಂದ, ನಿಜವಾದ ಗುಣಗ್ರಾಹಿ ಪುಸ್ತಕದಲ್ಲಿರತಕ್ಕ ದೋಷಗಳನ್ನು ತಿಳಿಸಿದರೆ ಅವುಗಳನ್ನು ಕೃತಜ್ಞತೆಯಿಂದ ದ್ವಿತೀಯ ಮುದ್ರಣದಲ್ಲಿ ಸರಿಪಡಿಸುವೆನು.

ಇತಿ ವಿಧೇಯ,

**ಗ್ರಂಥಕರ್ತ.**

## ಶ್ರೀ ರಸ್ತು

## -ಪ್ರಥಮಾಂಕ -

ಸ್ಥಳ : ರಾಮರಾವ್, ಬಿ.ಎ. ಯವರ ಮನೆ.

ಕಾಲ : ಮಧ್ಯಾಹ್ನ ೨ ಗಂಟೆ.

(ವಿವೇಚನಾವಧಾನಿಗಳ ಪ್ರವೇಶ. ರಾಮರಾಯರು ಏನೋ ಯೋಚಿಸುತ್ತಾ ಅಂಗೈಮೇಲೆ ತಲೆಯನ್ನಿಟ್ಟುಕೊಂಡು ಕುಳಿತಿರುವರು.)

ವಿ : ಏನು ರಾಮರಾಯರೇ! ಏನೋ ಬಹಳವಾಗಿ ಯೋಚಿಸುತ್ತಿರುವಂತೆ ಕಾಣುತ್ತದೆ?

ರಾ : ಓಹೊ! ಬನ್ನಿ ಅವಧಾನಿಗಳೇ ಇಲ್ಲಿ ಕುಳಿತುಕೊಳ್ಳಿರಿ. ನಮ್ಮ ದೇಶದ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವಾದುದರಿಂದ ಅವರಿಗೆ ಸ್ವಾತಂತ್ರ್ಯ ಉಂಟಾಗುವಂತೆ ಮಾಡುವುದಕ್ಕೆ ಯಾವ ರೀತಿಯಲ್ಲಿ ಏರ್ಪಾಡು ಮಾಡಬೇಕೆಂದು ಯೋಚಿಸುತ್ತಿದ್ದೇನೆ.

ವಿ : ಅದೇನು, ಈ ದಿವಸವೇ ಅಷ್ಟು ಮಟ್ಟಿಗೆ ಯೋಚಿಸುತ್ತೀರಿ?

ರಾ : ಈ ದಿವಸವೇ ಟೌನ್‌ಹಾಲಿನಲ್ಲಿ ಈ ಉದ್ದೇಶದಿಂದಲೇ ಸ್ತ್ರೀಯರ ಸಭೆಯೊಂದು ಸೇರಲಿಕ್ಕಿರುವುದು. ಆದುದರಿಂದ ಅಲ್ಲಿ ನನ್ನದೂ ಒಂದು ಅಭಿಪ್ರಾಯವನ್ನು ಹೇಳಬೇಕಾಗಿ ಇರುವುದು. ಅದಕ್ಕೋಸ್ಕರ ಇಷ್ಟು ಯೋಚಿಸುತ್ತೇನೆ.

ವಿ : ಸರಿಸರಿ, ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂದು ಹೇಳಿದಿರಲ್ಲ, ಅದನ್ನು ಹೇಗೆ ತಿಳಿದುಕೊಂಡಿರಿ? ನನಗೂ ಕೊಂಚ ವಿವರಿಸಿ ಹೇಳಿರಿ! ನೋಡೋಣ?

ರಾ : ವಿವರಣೆ-ಗಿವರಣೆ ಅದೆಲ್ಲಾ ನನಗೆ ಗೊತ್ತಿಲ್ಲ. ಆ ದಿವಸ ಕೃಷ್ಣನು ನನ್ನಲ್ಲಿ ನಮ್ಮ ದೇಶದ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂದು ಹೇಳಿದನು. ಆದುದರಿಂದ ನಾನೂ ಹಾಗೆಯೇ ತಿಳಿದುಕೊಂಡೆ.

ವಿ : ಸರಿಸರಿ! ಕೃಷ್ಣರಾಯರು ಹೇಳಿದ್ದರಿಂದ ನಿಮಗೆ ಗೊತ್ತಾಯಿತು. (ಸ್ವಗತಂ:- ಇವನು ಬೇರೆ

ಯೋಚಿಸಲಿಲ್ಲ. ಕೃಷ್ಣರಾಯರು ಹೇಳಿದ್ದದು ನಿಜವೋ, ಸುಳ್ಳೋ? ಅದನ್ನು ವಿಚಾರ ಮಾಡಲಿಲ್ಲ. ಅವರು ಹೇಳಿದ್ದನ್ನೇ ನಿಜವೆಂದು ನಂಬಿ ಮುಂದಕ್ಕೆ ಯೋಚಿಸುತ್ತಿದ್ದಾನೆ. ಇವನು ಬಿ.ಎ. ಪಾಸು ಮಾಡಿದ್ದಕ್ಕೆ ಸಾರ್ಥಕವಾದಂತಾಯಿತು.) ನೀವೇ ಸ್ವತಃ ಯೋಚನೆ ಮಾಡಲಿಲ್ಲ. ಆದಿರಲಿ; ಕೃಷ್ಣರಾಯರಿಗೆ ಹೇಗೆ ಗೊತ್ತಾಯಿತೋ?

ರಾ : ಅದು ನನಗೆ ಗೊತ್ತಿಲ್ಲ. ಅವನನ್ನೇ ಕೇಳಬೇಕು.

ವಿ : ಆಗಲಿ! ಏಳಿ ಹೋಗೋಣ; ಅವರನ್ನು ಕೇಳಿ ಆ ಮೇಲೆ ಮುಂದಲ ವಿಷಯವನ್ನು ಯೋಚಿಸೋಣ.

ರಾ : ಅವನೇ ಈಗ ಇಲ್ಲಿಗೆ ಬರುತ್ತೇನೆಂದು ಹೇಳಿದ್ದಾನೆ. ಇನ್ನೇನು, ಬರುವ ಹೊತ್ತಾಯಿತು. (ಅಷ್ಟರಲ್ಲಿ ಕೃಷ್ಣರಾಯರು ಅಲ್ಲಿಗೇ ಬರುವರು.)

ವಿ : ಬನ್ನಿ ಕೃಷ್ಣರಾಯರೇ! ಇತ್ತ ದಯಮಾಡಿಸಿರಿ.
(ಅವರೂ ಬಂದು ಕುರ್ಚಿಯ ಮೇಲೆ ಕುಳಿತುಕೊಳ್ಳುವರು. ಅನಂತರ ಒಬ್ಬರಿಗೊಬ್ಬರು ಅವರವರ ಯೋಗಕ್ಷೇಮಗಳನ್ನು ವಿಚಾರಿಸುವರು. ಆಮೇಲೆ)

ವಿ : ಏನು ಕೃಷ್ಣರಾಯರೇ! ನೀವು ರಾಮರಾಯರಲ್ಲಿ ನಮ್ಮ ದೇಶದ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂದು ಹೇಳಿದಿರಂತೆ; ನೀವು ಆ ವಿಷಯವನ್ನು ಹೇಗೆ ಸಮರ್ಥಿಸುವಿರಿ?

ಕೃ : ಸಮರ್ಥನೆ - ಗಿಮರ್ಥನೆ ಅದೆಲ್ಲ ನನಗೆ ಗೊತ್ತಿಲ್ಲ. ಆ ದಿವಸ ನಾನೂ, ಗೋವಿಂದರಾಯರೂ ಒಟ್ಟಿಗೆ ವಾಕಿಂಗ್ (ತಿರುಗಾಡುವುದಕ್ಕೆ) ಹೋಗುತ್ತಿದ್ದೆವು. ಹಾಗೆಯೇ ಮಾತಾಡುವ ಸಂದರ್ಭದಲ್ಲಿ ಅವರು ನಮ್ಮ ದೇಶದ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂದು ಹೇಳಿದರು. ಅದನ್ನೇ ನಾನು ಇವನಲ್ಲಿ ಹೇಳಿದೆ.

ವಿ : ಸರಿಸರಿ! ಈಗೀಗ ಸರಿಹೋಯಿತು. ನಿಮ್ಮಿಬ್ಬರಲ್ಲಿ ಒಬ್ಬರಾದರೂ ವಿಷಯವು ನಿಜವೇ, ಸುಳ್ಳೇ ಎಂಬುದನ್ನು ಯೋಚನೆ ಮಾಡಲಿಲ್ಲ. ಸರಿ, ಇನ್ನು ಗೋವಿಂದರಾಯರು ಹೇಳಿದ್ದೂ ಹೀಗೆಯೇ ಇರಬೇಕು. (ಸ್ವಗತಂ; **ಈಗಿನ ಕಾಲದ ಬಿ.ಎ.ಗಳೆಂದರೆ ಮಣ್ಣು ಮುದ್ದೆಗಳೇ ಸರಿ.**) ಅವರನ್ನು ಒಂದು ಸಲ ಕೇಳಿ ಬಿಡುವ ಏಳಿರಿ. ತ್ರಿಶುದ್ಧಿಯಾಗಿ ಹೋಗಲಿ. (ಅಷ್ಟರಲ್ಲಿ ಗೋವಿಂದರಾಯರೂ ಅಲ್ಲಿಗೆ ಬರುವರು. ಪರಸ್ಪರ ಯೋಗಕ್ಷೇಮಗಳೆಲ್ಲ ಆದ ನಂತರ)

ವಿ : ಏನು ಗೋವಿಂದರಾಯರೇ! ನೀವು ಕೃಷ್ಣರಾಯರಲ್ಲಿ ನಮ್ಮ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂದು ಹೇಳಿದಿರಂತೆ ಇದು ನಿಜವೇ?

ಗೋ : ನಿಜವೋ ಸುಳ್ಳೋ ಅದೆಲ್ಲ ನನಗೆ ಗೊತ್ತಿಲ್ಲ. ಆ ದಿವಸ ಟಾನ್ ಹಾಲಿನಲ್ಲಿ ಒಂದು ಸಭೆ ನಡೆದಾಗ ಮ. ನಾರಣಯ್ಯಂಗಾರರು "ನಮ್ಮ ದೇಶದ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲ"ವೆಂದು ಹೇಳಿ ಒಂದು ಉಪನ್ಯಾಸವನ್ನು ಮಾಡಿದರು. ಆಗ ಎಲ್ಲರೂ ಬೇಷ್! ಬೇಷ್! ಎಂದು ಹೇಳಿ ಚಪ್ಪಾಳೆ ಹೊಡೆದರು. ನಾನು ಅದನ್ನೇ ಕೃಷ್ಣರಾಯರಲ್ಲಿ ಹೇಳಿದೆ.

ವಿ : ಆಗಲಿ; ಒಟ್ಟಿನಲ್ಲಿ ನಿಮ್ಮ ಮೂವರ ಸ್ಥಿತಿಯೂ ಒಂದೇ ಆಯಿತು. ಹೇಗೂ ನೀವು ಮೂವರೂ ಪುನಃ ಅದೇ ಉದ್ದೇಶವಾಗಿ ಈ ದಿವಸ ಟೌನ್ ಹಾಲಿನಲ್ಲಿ ನಡೆಯತಕ್ಕ ಸ್ತ್ರೀಯರ ಮೀಟಂಗಿಗೆ ಹೋಗುವವರಾಗಿದ್ದೀರಿ. ಆದರೆ ಮೊದಲು ಈಗ ನಾವು ನಮ್ಮ ಸ್ತ್ರೀಯರಿಗೆ ಸ್ವಾತಂತ್ರ್ಯವು ಇರುವುದೇ ಇಲ್ಲವೇ ಎಂಬುದನ್ನು ಯೋಚಿಸಿ ಚರ್ಚಿಸೋಣ. ಅನಂತರ ಮ. ನಾರಣಯ್ಯಂಗಾರರನ್ನೂ ಕೇಳೋಣ. ಆಮೇಲೆ ಕೆಲವು ಸ್ತ್ರೀಯರ (ಈ ವಿಷಯದಲ್ಲಿ) ಸಾಕ್ಷ್ಯಗಳನ್ನೂ ಕೇಳೋಣ. ಆ ಮೇಲೂ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂಬುವುದು ನಿಜವಾದರೆ, ಆ ರೀತಿ ಅವರಿಗೆ ಸ್ವಾತಂತ್ರ್ಯವನ್ನುಂಟು ಮಾಡುವುದಕ್ಕೆ ತಕ್ಕ ಏರ್ಪಾಡುಗಳನ್ನು ಆಲೋಚಿಸೋಣ. ಸರಿ, ಏನು ರಾಮರಾಯರೇ! ನಿಮ್ಮ ಗೃಹಕೃತ್ಯದ ಸ್ಥಿತಿಗಳು ಹೇಗಿವೆ?

ರಾ : ನನ್ನ ಗೃಹಕೃತ್ಯದ ವಿಷಯವೇ? ಅದನ್ನು ಕೇಳಲೇ ಬೇಡಿರಿ. ಅದನ್ನು ಜ್ಞಾಪಿಸಿಕೊಂಡರೆ ನನ್ನ ಮೈ

ಉರಿಯುವುದು. ಮನಸ್ಸೆಲ್ಲಾ ಕೆಟ್ಟುಹೋಗುವುದಲ್ಲದೆ ಸಂಸಾರವನ್ನು ತ್ಯಾಗಮಾಡಿ ಸನ್ಯಾಸವನ್ನು ತೆಗೆದುಕೊಂಡು ಊರುಬಿಟ್ಟು ಹೋಗೋಣವೆನ್ನಿಸುವುದು. "ಸಂಸಾರಗುಟ್ಟು" ಎಂಬಂತೆ ಮೌನವಾಗಿದ್ದರೆ ನಾನೊಬ್ಬನೇ ವ್ಯಸನಪಡುತ್ತಾ ಹೊರಗಡೆಯಾದರೂ ಗೌರವವಾಗಿರಬಹುದು. ಎಲ್ಲವನ್ನೂ ಬಾಯಿಬಿಟ್ಟೆನೆಂದರೆ ತೀರಿತು. ಎಲ್ಲರ ಅಪಹಾಸ್ಯಕ್ಕೂ ಒಳಗಾಗುವುದೇ!

ವಿ : ಏನು ರಾಮರಾಯರೇ! ಇಷ್ಟೇಕೆ ವ್ಯಸನಪಡುವಿರಿ? ಇರತಕ್ಕ ಸಂಗತಿಗಳನ್ನು ಸ್ನೇಹಿತರಲ್ಲಿ ಹೇಳುವುದರಿಂದ ಏನೂ ನಷ್ಟವಿಲ್ಲ. ನಿಮ್ಮ ಮನೋವ್ಯಥೆಯು ಕಮ್ಮಿಯಾಗುವಂತೆ ಸ್ನೇಹಿತರು ಏನಾದರೂ ಉಪಾಯಗಳನ್ನು ಹೇಳಬಹುದು. ಅದರಿಂದ ನಿಮಗೆ ಒಳ್ಳೆಯದೇ ಹೊರತು ಕೆಟ್ಟದ್ದಿಲ್ಲ.

ರಾ : ಆಗಲಿ! ನನ್ನ ಮನಸ್ಸಿನಲ್ಲಿರತಕ್ಕ ಸಂಕಟಗಳನ್ನು ಹೇಳಿಬಿಡುತ್ತೇನೆ. ನಮ್ಮ ಮಾವಂದಿರ ಮನೆಯು ಈ ಊರಿನಲ್ಲೇ ಇದೆ. ಅವರು ಬಡವರು. ಆದರೆ ತಿನ್ನುವುದಕ್ಕೇನೂ ಅಪೋಹವಿಲ್ಲ. ಆದರೂ ನನ್ನ ಹೆಂಡತಿಗೆ ತಂದೆಯ ಮನೆಯನ್ನು ಐಶ್ವರ್ಯದಿಂದ ತುಂಬಿಸಬೇಕೆಂಬ ಆಶೆ. ಇದಕ್ಕೋಸ್ಕರ ನನ್ನ ಮನೆಯಲ್ಲಿರತಕ್ಕ ಸಾಮಾನುಗಳಲ್ಲಿ (ಪ್ರತಿ ತಿಂಗಳೂ ಮನೆಗೆ ತರತಕ್ಕ) ಅರ್ಧವೆಲ್ಲವೂ ಪ್ರತಿ ತಿಂಗಳಿಗೂ ಅಲ್ಲಿಗೆ ರವಾನೆಯಾಗುವುದು. ೧೫-೨೦ನೇ ತಾರೀಖು ಸಂದವೆಂದರೆ ಮನೆಯಲ್ಲಿ ಆ ಪದಾರ್ಥವಿಲ್ಲ, ಈ ಪದಾರ್ಥವಿಲ್ಲ, ಅದನ್ನು ತರಬೇಕು, ಇದನ್ನು ತರಬೇಕು ಎನ್ನುವಳು. ಆಗ ನಾನು ಇನ್ನೂ ಸಾಮಾನುಗಳನ್ನು ತಂದು ನೆಟ್ಟಗೆ ೧೫ ದಿನಗಳಾಗಲಿಲ್ಲ, ಆಗಲೇ ಮುಗಿದು ಹೋಯಿತೇ? ಎಂದು ಕೇಳಿದರೆ, ಹೂಂ! ಖರ್ಚಾಗದೆ ಏನು? ನಾನೇ ಎಲ್ಲವನ್ನೂ ತಿಂದೆನೇನು? ಅಥವಾ ಮಾರಿ ಬಿಟ್ಟೆನೆ? ನೀವು ಹೊರಗಿನ ಕೆಲಸದವರು; ಮನೆಯೊಳಗಿನ ಖರ್ಚು ನಿಮಗೇನು ಗೊತ್ತಾಗುವುದು? ಬರುವವರು, ಹೋಗುವವರು, ಭಿಕ್ಷಾನ್ನದ ಹುಡುಗರು ಇತ್ಯಾದಿಯಾಗಿ ಎಷ್ಟೋ ಜನರು ಬಂದು ಹೋಗುವರು. ನೀವು ಬೆಳಿಗ್ಗೆ ಆಫೀಸಿಗೆ (೧೦ ಗಂಟೆಗೆ) ಹೋದವರು ರಾತ್ರೆ ೯ ಗಂಟೆಯವರಿಗೂ ಬರುವಂತಿಲ್ಲ. ಇದೆಲ್ಲಾ ನಿಮಗೆ ಹೇಗೆ ಗೊತ್ತಾಗಬೇಕು? ಸುಮ್ಮನೆ ಎಲ್ಲವೂ ಮುಗಿಯಿತೆ? ಎಂದು ಹೇಳಿಬಿಡುವಿರಿ ಇತ್ಯಾದಿಯಾಗಿ ಹೇಳಿ ನನ್ನನ್ನೇ ಹೆದರಿಸಿಬಿಡುವಳು. ನನಗೆ, ಮನೆಗೆ ಸಾಮಾನುಗಳನ್ನು ತರುವುದಲ್ಲದೆ ಇವಳಲ್ಲಿ ಅನ್ನಿಸಿಕೊಂಡೇ ಸಾಕಾಗುವುದು. ಇವಳು ಬೇರೆಯಾರಿಗೂ ಒಂದು ತುತ್ತು ಅನ್ನ ಹಾಕಿದವಳಲ್ಲ. ನಾನಿಲ್ಲದಿದ್ದಾಗ ಅವರಿಗೆ ಇವರಿಗೆ ಎಂದು ಹೇಳಿ ಎಲ್ಲವನ್ನೂ ಅಪ್ಪನ ಮನೆಗೆ ಸಾಗಿಸಿ ಬಿಡುವಳು. ಇದೂ ಹೇಗಾದರೂ ಹಾಳಾಗಿಹೋಗಲಿ. ನನ್ನ ತಾಯಿತಂದೆಗಳಾಗಲೀ, ಅಣ್ಣತಮ್ಮಂದಿರಾಗಲೀ ಬಂದರೆಂದರೆ ತೀರಿತು. ಮನೆಯಲ್ಲಿ ಎಲ್ಲಾ ಪದಾರ್ಥಗಳಿದ್ದರೂ ಯಾವುದೂ ಇಲ್ಲವೆಂತಲೇ ಆಗುವುದು. ಅಲ್ಲದೆ ಇವಳಿಗೆ ಅವರು ಬಂದಾಗ ಚಾಕರಿಮಾಡಬೇಕಲ್ಲ ಎಂದು ಹೇಳಿ ಎಲ್ಲಿಯೂ ಇಲ್ಲದಿರತಕ್ಕ ರೋಗಗಳು ಆಗಲೇ ಬರುವವು. ಆ ವೇಳೆಯಲ್ಲಿ ನನ್ನ ಮನಸ್ಸಿನ ಸ್ಥಿತಿಯನ್ನು ಏನೆಂದು ಹೇಳಬೇಕು? ಅಪರೂಪಕ್ಕೆ ಬಂದ ಬಂಧುಮಿತ್ರರನ್ನು ಉಪಚಾರ ಮಾಡಬೇಕೆಂದು ಪದಾರ್ಥಗಳನ್ನು ತಂದರೆ ಅದೆಲ್ಲವನ್ನು ನೋಡುವಾಗಲೇ ಇವಳಿಗೆ ತಲೆನೋವು ಹೊಟ್ಟೆನೋವು - ಇವುಗಳಿಗೆ ಆರಂಭ. ಆ ಸಂದರ್ಭಗಳೆಲ್ಲವನ್ನು (ನೋಡಿದವರೆಲ್ಲರೂ) ಬಂದ ನಂಟರೆಲ್ಲರೂ ನೋಡಿ ನನಗೂ ಎರಡು ಉಪಚಾರದ ಮಾತನಾಡಿ ಬೇಗನೇ ಹೊರಟು ಹೋಗುವರು. ಅವರು ಅತ್ತಲಾಗಿ ಹೊರಟು ಹೋಗುವುದೇ ತಡ, ಇವಳಿಗೆ ರೋಗವೆಲ್ಲವೂ ಮಾಯವಾಗಿ ಒಳ್ಳೇ ಶಕ್ತಿಯು ಬಂದು ಬಿಡುವುದು. ಇನ್ನು ಇವಳ ಕಡೆಯವರಾರಾದರೂ ಬಂದರೆಂದರೆ ಕೇಳಬೇಕಾಗಿಲ್ಲ. ನಿಜವಾಗಿಯೂ ಸಾಯುವ ರೋಗವಿದ್ದರೂ ಎಲ್ಲವೂ ಮಾಯವಾಗುವುದು. ಅವರಿಗೆ ಸ್ಪೆಶ್ಯಲಾಗಿ ತಿಂಡಿಗಳೂ, ಔತಣಗಳೂ ಆಗಬೇಕು. ಇನ್ನೂ ಹೀಗೆಯೇ ಹೇಳುತ್ತಾ ಹೋದರೆ ಎಷ್ಟೋ ಇದೆ. ಒಟ್ಟಿನಲ್ಲಿ ನನಗೆ ಬೇರೆ ಸುಖವಿಲ್ಲ.

ವಿ : ಸರಿ, ರಾಮರಾಯರ ಗೃಹಕೃತ್ಯದ ವಿಷಯವಂತೂ ಎಲ್ಲರಿಗೂ ಸ್ಪಷ್ಟವಾಯಿತು. ಇನ್ನು ನಿಮ್ಮ ಮನೆಯ ವಿಷಯವೇನು?

ಕೃ : ಅದನ್ನ ಹೇಳುತ್ತಾ ಹೋದರೆ ಸ್ವಾರಸ್ಯವಿಲ್ಲ. ಮೊನ್ನೆಯ ದಿವಸ ಪರಸ್ಥಳದ ವಿದ್ಯಾರ್ಥಿಯೊಬ್ಬನು ನನ್ನನ್ನು ಪಾಠಕೇಳುವುದಕ್ಕೆ ಬಂದನು. ನಾನು ಯಾವುದಾದರೂ ಒಂದು ವಾರದಲ್ಲಿ ಬಂದು ಊಟಮಾಡಿಕೊಂಡು ಹೋಗೆಂದು ಹೇಳಿದೆ. ಅದರಂತೆಯೇ ಅವನು ಆ ದಿವಸ ಬರಲು, ನೀನು ಯಾರು? ಏಕೆ ಬಂದೆ? ಎಂದು ಕೇಳಿದಳು. ಅದಕ್ಕವನು ಯಜಮಾನರಲ್ಲಿ ವಾರಕ್ಕೆ ಒಂದು ದಿವಸ ಇಲ್ಲಿ ಊಟಕ್ಕೆ ಅವಕಾಶಮಾಡಿಕೊಡಬೇಕೆಂದು ಕೇಳಿಕೊಂಡೆ; ಅವರು ಆಗಲೆಂದರು. ಅದಕ್ಕೋಸ್ಕರ ಈ ದಿವಸ ಬಂದಿರುತ್ತೇನೆಂದನು. ಆಗ ನನ್ನ ಹೆಂಡತಿಯು ತನ್ನನ್ನು ಮೊದಲು ಬಂದು ಕೇಳಲಿಲ್ಲವಲ್ಲಾ ಎಂದು ಇಲ್ಲಿ ಯಾರೂ ಮಾಡುವವರಿಲ್ಲ; ವಾರಗೀರ ಸಿಕ್ಕುವುದಿಲ್ಲ; ಹೋಗೆಂದಳು. ಅಷ್ಟು ಹೊತ್ತಿಗೆ ನಾನು ಅಲ್ಲಿಗೆ ಬಂದು ಅವನಿಗೊಬ್ಬನಿಗೆ ಊಟ ಹಾಕುವುದಕ್ಕೆ ನೀನು ಮಾಡಬೇಕಾದುದೇನು? ಅವನು ಒಂದು ವಾರ ಊಟ ಮಾಡಿಕೊಂಡು ಹೋಗಲಿ! ನಾನೇ ಅವನನ್ನು ಬಾರೆಂದು ಹೇಳಿದ್ದೇನೆಂದೆನು. ಅದಕ್ಕೆ ಅವಳು ಅದೆಲ್ಲ ಆಗುವುದಿಲ್ಲ; ಈಗ ನನಗೆ ಮನೆಯವರಿಗೆ ಮಾಡುವುದೇ ಸಾಕಾಗಿದೆ. ಬೀದಿಯವರಿಗೆಲ್ಲ ಮಾಡಲಾಗುವುದಿಲ್ಲ. ಬೇಕಾದರೆ ನೀವೇ ಮಾಡಿಕ್ಕಿರಿ ಎಂದಳು. ಆಗ ನಾನೂ ಸುಮ್ಮನಾಗಿ ಆ ವಿದ್ಯಾರ್ಥಿಯನ್ನು ಹೊರಕ್ಕೆ ಕರೆದು ಹೋಟಲಿನಲ್ಲಿ ಊಟಮಾಡುವಂತೆ ಹೇಳಿ ದುಡ್ಡುಕೊಟ್ಟು ಕಳುಹಿಸಿದೆನು. ಮಾರನೆಯ ದಿವಸ ಮತ್ತೊಬ್ಬ ವಿದ್ಯಾರ್ಥಿಯು ಬರಲು, ನಾನು ಹಿಂದಿನ ದಿನ ನಡೆದ ಸಂಗತಿಯನ್ನು ನೆನಸಿಕೊಂಡು ಮೊದಲು ಒಳಗೆ ಹೋಗಿ ಅವಳನ್ನೇ ಕೇಳು ಎಂದು ಹೇಳಿದೆ. ಅದರಂತೆ ಅವನು ಹೋಗಿ ಅವಳನ್ನೇ ಕೇಳಲು, ಗಂಡಸರನ್ನು ಕೇಳದೆ ಇವನು ತನ್ನನ್ನೇ ಕೇಳಿದನಲ್ಲಾ ಎಂಬ ಸಂತೋಷದಿಂದ ಅವನನ್ನು ನೀನು ಗೊತ್ತಾದ ವಾರದಲ್ಲಿ ಬಂದು ಊಟಮಾಡಿಕೊಂಡು ಹೋಗೆಂದು ಹೇಳಿದಳು. ಆಗ ನಾನು ಅವನಿಗೆ ಏನು ಹೇಳುತ್ತಾಳೋ ನೋಡೋಣವೆಂದು ನನ್ನ ಕೈಯಲ್ಲಿ ಮಾಡುವುದಕ್ಕಾಗುವುದಿಲ್ಲ, ಸುಮ್ಮನೆ, ಇಲ್ಲದ ತೊಂದರೆಗಳನ್ನು ಏಕೆ ಹಚ್ಚಿಕೊಳ್ಳುತ್ತೀಯಾ? ಬೇಡವೆಂದು ಹೇಳಿದೆ. ಅದಕ್ಕವಳು ಇವನಿಗೆ ನಾನು ಮಾಡಬೇಕಾದುದೇನು? ಹತ್ತರಕೂಡೆ ಹನ್ನೊಂದು ಎನ್ನುವಂತೆ ನಮ್ಮಗಳ ಮಧ್ಯೆ ಇವನಿಗೂ ಒಂದು ತುತ್ತನ್ನು ಹಾಕಿದರಾಯಿತು; ಎಂದಳು. ಆಗ ನಾನು ಮೊದಲನೇ ದಿವಸದ ಸಂಗತಿಯನ್ನು ಎತ್ತಿ ಆಡಿದರೆ ಪ್ರಯೋಜನವಿಲ್ಲವೆಂದು ಹೇಳಿ ಸುಮ್ಮನಾದೆ. ಹೀಗೆಯೇ, ಇನ್ನೂ ಎಷ್ಟೋ ಇದೆ. ಅದನ್ನೆಲ್ಲಾ ಹೇಳಿದರೆ ಉಪಯೋಗವಿಲ್ಲ.

ವಿ : ಸರಿ, ಏನು ಗೋವಿಂದರಾಯರೇ? ನಿಮ್ಮ ವಿಷಯವೇನು?

ಗೋ : ನನ್ನ ಮನೆಯ ವಿಷಯವನ್ನಂತೂ ಹೇಳಲೇಬೇಕಾಗಿಲ್ಲ. ನಾನು ಏತಿ ಎಂದರೆ ಅವಳು ಪೇತಿ ಎನ್ನುವುದೇ. ನಾನು ಹೇಳಿದ ತಿಂಡಿ ಅಡಿಗೆಗಳನ್ನು ಮಾಡೆಂದರೆ ಅವಳು ತನಗಿಷ್ಟವಾದುದನ್ನೇ ಮಾಡುವುದು. ಇದಕ್ಕೋಸ್ಕರ ತಿಂಡಿ ತೀರ್ಥವನ್ನು ವಜಾ ಮಾಡಬೇಕೆಂದು ಯೋಚಿಸಿ, ಊಟ ಮಾತ್ರ ಆಗುವಂತೆ ಕ್ಲಪ್ತವಾದ ಸಾಮಾನುಗಳನ್ನು ಮನೆಗೆ ತರಲು ಮೊದಲು ಮಾಡಿದೆ. ಅವಳೂ ಒಂದು ವಾರ ನೋಡಿದಳು. ನನಗೂ ಅದು ಬೇಕು, ಇದುಬೇಕೆಂದು ಹೇಳಿದಳು. ನಾನು ಕೇಳಲಿಲ್ಲ. ಕೊನೆಗೆ ಅವಳು ಇದೇನೋ ಸ್ವಾರಸ್ಯಕ್ಕೆ ಬರಲಿಲ್ಲವೆಂದು ಯೋಚಿಸಿ, ನಾನು ಆಫೀಸಿಗೆ ಹೋಗಿರುವ ವೇಳೆಯಲ್ಲಿ ನಾನು ಸಾಮಾನನ್ನು ತರುತ್ತಿದ್ದ ಅಂಗಡಿಗೆ ಮಕ್ಕಳನ್ನು ಕಳುಹಿಸಿ, ನನ್ನ ಹೆಸರಿಗೆ ಲೆಕ್ಕವನ್ನ ಬರೆಸಿ, ಬೇಕಾದ ಸಾಮಾನುಗಳನ್ನು ತರಿಸಿ, ತಿಂಡಿಮಾಡಿ, ತಾನು ತಿನ್ನುವಷ್ಟು ತಿಂದು ನನಗೂ ಕೊಂಚ ಕೊಟ್ಟಳು. ಆಗ ನಾನು ಇದೆಲ್ಲಿಯದೆಂದು ಕೇಳಲು, ಅವಳು ಮಾಡಿದ ಕೆಲಸಗಳನ್ನೆಲ್ಲ ಹೇಳಿದಳು. ಆಗ, ಹಾಗೆಲ್ಲ ಅಂಗಡಿಯಿಂದ ತರಿಸಬೇಡ. ಸುಮ್ಮನೆ ಸಾಲವು ಹೆಚ್ಚಾಗುವುದು; ಆಮೇಲೆ ಹೊಟ್ಟೆಗಿಲ್ಲದೆ ನರಳಬೇಕಾಗುವುದು. ತರಿಸಬೇಡವೆಂದು ಹೇಳಿದೆನು.

ಆಗಲಿ! ಎಂದಳು. ಮಾರನೇ ದಿನ ಆಫೀಸಿಗೆ ಹೋದೆನು. ಇವಳು ಯಥಾಸ್ಥಿತಿ ಹಿಂದಿನಂತೆಯೇ ಮಕ್ಕಳನ್ನು ಅಂಗಡಿಗೆ ಕಳುಹಿಸಿ, ಬೇಕಾದ ಸಾಮಾನುಗಳೆಲ್ಲವನ್ನು ತರಿಸಿ ಮತ್ತು ರುಚಿರುಚಿಯಾದ ತಿಂಡಿ ಮಾಡಿಕೊಂಡು ತಿಂದು ಬಿಟ್ಟಳು. ನನಗೆ ಕೊಡುವುದನ್ನು ನಿಲ್ಲಿಸಿಬಿಟ್ಟಳು. ಇದರಿಂದ ನಾನು ಇವಳು ಹೊಸ ಸಾಮಾನು ತರಿಸುವುದನ್ನು ನಿಲ್ಲಿಸಿಬಿಟ್ಟಿರುವಳೆಂದು ಯೋಚನೆ ಮಾಡಿದೆ. ತಿಂಗಳಾ ಖೈರಿನಲ್ಲಿ ಅಂಗಡಿಗೆ ಲೆಕ್ಕವನ್ನು ನೋಡಿದರೆ ಬರಾಬರಿ ೧ಕ್ಕೆ ೪ ರಷ್ಟು ಏರಿದೆ. ಆಗ ಯೋಚನೆ ಮಾಡಿದೆ. ನಾನು ತಿಂಡಿ ಮಾಡಬೇಡವೆಂದು ಹೇಳಿದ್ದಕ್ಕೆ ನನಗೆ ಚಕ್ರಬಿತ್ತು. ಅವಳು ತಿನ್ನುವುದನ್ನು ಬಿಡಲಿಲ್ಲ. ಇದಲ್ಲದೆ ನಾನು ಮೊದಲಿನಂತೆ ಸಾಮಾನುಗಳನ್ನು ತೆಗೆದುಕೆಂಡು ಹೋಗಿ ಮನೆಗೆ ಹಾಕಿದ್ದರೆ ೧೦ ರೂಪಾಯಿಯಲ್ಲಿ ಆಗುತ್ತಿತ್ತು. ಈಗ ೪೦ ರೂಪಾಯಿಗಳಿಗೆ ಏರಿತು, ತಿಂಡಿಗೂ ಸೊನ್ನೆಬಿತ್ತು. ಇನ್ನು ಅಂಗಡಿಯವರಲ್ಲಿ ಇತರರು ಯಾರು ಬಂದರೂ ಪದಾರ್ಥಗಳನ್ನು ಕೊಡಬೇಡಿರೆಂದು ಹೇಳಿದರೆ ಅವರಿಗೆ ನಮ್ಮ ಮನೆಯ ಗುಟ್ಟೆಲ್ಲವನ್ನು ಹೇಳಬೇಕಾಗುವುದು. ಹೀಗೆ ಮನೆಯ ಅಂತರ್ಯವನ್ನೆಲ್ಲಾ ಹೇಳಿ ಅಪಹಾಸ್ಯಕ್ಕೆ ಒಳಗಾಗುವುದಕ್ಕಿಂತಲೂ, ಮನೆಗೆ ಹಿಂದಿನಂತೆ ಮಿತವಾದ ಸಾಮಾನುಗಳನ್ನು ನಾನೇ ತೆಗೆದುಕೊಂಡು ಹೋಗಿ ಹಾಕಿ ಅವಳಿಷ್ಟ ವಾದದ್ದನ್ನೇ ಮಾಡುವಂತೆ ಹೇಳಿ ನಾನೂ ತಿನ್ನುತ್ತಿರುವುದೇ ಲೇಸೆಂದು ಯೋಚಿಸಿ ಹಾಗೆ ಮಾಡುತ್ತಾ ಬಂದೆನು. ಹೀಗೆಯೇ ನಮ್ಮ ಸೀತೆಗೆ ಮದುವೆ ಮಾಡಬೇಕಾಗಿ ಬರಲು, ನಾನೊಬ್ಬ ಯೋಗ್ಯನಾದ ವಿದ್ಯಾವಂತನನ್ನು ಗೊತ್ತುಮಾಡಿದೆ. ಅವಳು ಅವನಿಗೆ ಕೊಡಲು ಒಪ್ಪದೆ ಏನೇನೋ ಹೇಳಿಬಿಟ್ಟು ತನ್ನ ಕಡೆಯ ದಡ್ಡನೊಬ್ಬನಿಗೆ ಮದುವೆ ಮಾಡಿಬಿಟ್ಟಳು. ಹಾಗೆಯೇ ಈ ವರ್ಷ ನಮ್ಮ ಹುಡುಗನಿಗೂ ತನ್ನ ಕಡೆಯ ಹುಡುಗಿಯೊಂದನ್ನು ತಂದು ಗಂಟು ಹಾಕಬೇಕೆಂದಿದ್ದಳು. ನಾನು ಅದಕ್ಕೆ ಬೇರೆ ಉಪಾಯದಿಂದ ಈ ವರ್ಷ ಮದುವೆಯು ಆಗದಂತೆ ತಡೆದು ಬಿಟ್ಟೆ. ಒಟ್ಟಿನಲ್ಲಿ ನಾನು ನನ್ನ ಹೆಂಡತಿಗೆ ದಾಸನೆಂತಲೇ ಹೇಳಬೇಕು.

ವಿ : ಏನು, ರಾಮರಾಯರೇ! ಇಷ್ಟೆಲ್ಲಾ ಕೇಳಿದ ಮೇಲೆ ನಿಮ್ಮ ಅಭಿಪ್ರಾಯವೇನು?

ರಾ : ಮತ್ತೇನು? ನಾವು ಬಾಯಿಯಲ್ಲಿ ಯಾರಿಗೆ ಸ್ವಾತಂತ್ರ್ಯವಿಲ್ಲವೆಂದು ಹೇಳುತ್ತೇವೋ! ಅವರಿಗೆ ಸ್ವಾತಂತ್ರ್ಯವಿಲ್ಲದೆ ಇಲ್ಲ. ಯಾರು ಸ್ವಾತಂತ್ರರೆಂದು ಹೇಳಿಕೊಳ್ಳುತ್ತೇವೋ ಅವರಿಗೆ ದಾಸತ್ವವು ಇಲ್ಲದೇ ಇಲ್ಲ. ಅಷ್ಟರಲ್ಲಿ

ಗೋ : ಇಷ್ಟೇ ಅಲ್ಲ! ಆ ದಾಸತ್ವದಲ್ಲಿಯೂ ಸ್ವಾರಸ್ಯ ಉಂಟು. ಮನೆಯಲ್ಲಿರತಕ್ಕ ಶಾವನ (ನಾಯಿ)ಕ್ಕಾದರೂ ಮತ್ತೇನು ಮಾಡುವುದಕ್ಕೂ ಶಕ್ತಿಯಿಲ್ಲದಿದ್ದರೂ, ಬೊಗಳುವುದಕ್ಕಾದರೂ ಅವಕಾಶ ಉಂಟು. ನಮಗೆ ಮನೆಗೆ ಕಾಲಿಟ್ಟೆವೆಂದರೆ ತೀರಿತು! ಬಾಯಿಬಿಡುವುದಕ್ಕೆ ಅಪ್ಪಣೆ ಇಲ್ಲ. ಹಾಗೂ ಬಾಯಿಬಿಟ್ಟರೆ ಅಲ್ಲಿ ನಿಲ್ಲುವ ಸಂಭವವೇ ಇಲ್ಲ. ಮೌನವಾಗಿದ್ದು, ಆದದ್ದಾಗಲಿ, ಹೋದದ್ದು ಹೋಗಲಿ ಎಂದಿದ್ದರೆ ಏನೋ ಆದ ಅಡಿಗೆ ಊಟಗಳನ್ನ ಮಾಡಬಹುದು. ಇಲ್ಲದಿದ್ದರೆ ಅದಕ್ಕೂ ನಾಮವೇ.

ಕೃ : ಒಟ್ಟಿನಲ್ಲಿ ಇಷ್ಟನ್ನು ಹೇಳಬಹುದು - ನನ್ನ ಮಾತು ನಡೆಯುವುದೆಂದರೆ ಮನೆಯಿಂದ ಹೊರಕ್ಕೆ ಹೊರಟ ಮೇಲೆಯೇ ಸರಿ. ಮನೆಯೊಳಕ್ಕೆ ಪ್ರವೇಶ ಮಾಡಿತೆಂದರೆ ಎಲ್ಲವೂ ಪೂರೈಸಿದಂತೆಯೇ ಸರಿ. ಮನೆಯೊಳಗೆ ನಮಗೆ ಸ್ವಲ್ಪವೂ ಸ್ವಾತಂತ್ರ್ಯವಿಲ್ಲ. ಹೊರಗಡೆ ಹೆಂಗಸರಿಗೂ ಅಷ್ಟು ಸ್ವಾತಂತ್ರ್ಯವಿಲ್ಲವೆಂದು ಹೇಳಬಹುದು.

ಗೋ : ಅದರಲ್ಲಿಯೂ ಒಂದು ವಿಶೇಷವುಂಟು. ಹೊರಗಿನ ವಿಷಯದಲ್ಲಿಯೂ, ಅವರು ಪ್ರವೇಶಮಾಡದೆ ಬಿಡುವುದಿಲ್ಲ. ಅವರು ಕೇಳಿದಾಗ ಯಾವುದಕ್ಕಾದರೂ ಹಣಕಾಸುಗಳನ್ನು ಕೊಡದೆ ಹೋದರೆ, ಬಂದ ಸಂಬಳವೆಲ್ಲ ಏನಾಯಿತು? ಯಾತ ಯಾತಕ್ಕೆ ಖರ್ಚು ಮಾಡಿದಿರಿ? ಹಾಗೆ ಹೀಗೆ ಎಂದು ಕೇಳುತ್ತಲಿರುವರು. ನಾವು ಮನೆಗೆ ಬರುವುದೇನಾದರೂ ಹೊತ್ತಾಯಿತೆಂದರೆ ಅದಕ್ಕೂ ನೂರೆಂಟು

ಆಕ್ಷೇಪಣೆಗಳೇ! ಆದುದರಿಂದ ಅವರಿಗೆ ಹೊರಗಡೆಯೂ ಸಹ ಕೊಂಚಮಟ್ಟಿಗೆ ಸ್ವಾತಂತ್ರ್ಯ ಉಂಟು. ನಮಗೆ ಮಾತ್ರ ಮನೆಯೊಳಗೆ ಸ್ವಾತಂತ್ರ್ಯವಿಲ್ಲವೇ ಇಲ್ಲ.

ವಿ : ಈಗ ಎಲ್ಲಾ ವಿಷಯವೂ ಎಲ್ಲರಿಗೂ ತಿಳಿದಹಾಗಾಯಿತು. ಇನ್ನು ನಾರಣಯ್ಯಂಗಾರರನ್ನು ಕೇಳುವುದೊಂದು ಬಾಕಿ. ಆಮೇಲೆ ಈ ವಿಷಯದಲ್ಲಿ ಹೆಂಗಸರ ಸಾಕ್ಷ್ಯಗಳು. ಅವಿಷ್ಟು ಬಾಕಿಯಾಯಿತು. ಏಳಿರಿ, ಇನ್ನು ನಾರಣಯ್ಯಂಗಾರರ ಮನೆಗೆ ಹೋಗೋಣ. (ಎಲ್ಲರೂ ಹೊರಡುವರು.

## -ದ್ವಿತೀಯಾಂಕ-

ಸ್ಥಳ : ನಾರಣಯ್ಯಂಗಾರರ ಮನೆ.

ಕಾಲ : ಮಧ್ಯಾಹ್ನ ೪ ಘಂಟೆ.

(ಎಲ್ಲರೂ ನಾರಣಯ್ಯಂಗಾರರ ಮನೆಯ ಸಮೀಪಕ್ಕೆ ಬರುವರು. ನಾರಣಯ್ಯಂಗಾರರು ಎಲ್ಲರನ್ನು ಒಳಕ್ಕೆ ಕರೆದು ಪರಸ್ಪರ ಯೋಗಕ್ಷೇಮಗಳನ್ನು ವಿಚಾರಿಸುವರು. ಅನಂತರ)

ವಿ : ಏನು ನಾರಣಯ್ಯಂಗಾರರೇ. ಎಲ್ಲಿಗೋ ಹೊರಡುವುದಕ್ಕೆ ಸಿದ್ಧವಾಗಿರುವಂತೆ ಕಾಣುವುದಲ್ಲ?

ನಾ : ಹೌದು. ಈ ದಿವಸ ಟೌನ್‌ಹಾಲಿನಲ್ಲಿ ಸ್ತ್ರೀಯರ ಮೀಟಿಂಗ್ ಒಂದು ನಡೆಯುವುದು. ಅದಕ್ಕೋಸ್ಕರ ನಾನು ಹೋಗಬೇಕಾಗಿದೆ.

ವಿ : ಸರಿಸರಿ, ಅದೇನು? ನೀವು ಆ ದಿವಸ ಟೌನ್ ಹಾಲಿನಲ್ಲಿ "ನಮ್ಮ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲ" ವೆಂದು ಹೇಳಿದಿರಂತೆ, ಇದು ನಿಶ್ಚಯವೇ? ಹೇಗೆ? ತಿಳಿಸಿ,

ನಾ : ಓಹೋ! ಇದನ್ನು ಕೇಳುವುದಕ್ಕೋಸ್ಕರವೇ ಇಷ್ಟು ದೂರ ಬಂದಂತೆ ಕಾಣುತ್ತದೆ. ಆದರೆ ಇದರಲ್ಲಿ ಒಂದು ರಹಸ್ಯವುಂಟು. ಅದು ಇತರರಿಗೆ ಗೊತ್ತಿಲ್ಲ. ಹೇಳುತ್ತೇನೆ ಕೇಳಿರಿ.

ನಿಜವಾಗಿಯೂ ನಮ್ಮ ದೇಶದಲ್ಲಿ ಸ್ತ್ರೀಯರಿಗೆ (ಧರ್ಮವಾದ ವಿಷಯಗಳಲ್ಲಿ) ಇರುವಷ್ಟು ಸ್ವಾತಂತ್ರ್ಯವೂ ಸುಖವೂ ಮತ್ಯಾವದೇಶದಲ್ಲಿಯೂ ಇಲ್ಲ. ಆದರೆ ಇಷ್ಟು ಹೇಳತಕ್ಕ ನಾನು ಹೇಗೆ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂದು ಹೇಳಿದೆನೆಂದು ನೀವು ಕೇಳಬಹುದು. ಯಾವುದೋ ಒಂದು (ಇತರರಿಗೆ ಹಾಸ್ಯಾಸ್ಪದವಾದ) ಸ್ವಾರ್ಥವನ್ನು ಸಾಧಿಸುವುದಕ್ಕೋಸ್ಕರ ಆ ರೀತಿ ಹೇಳಿದೆನು. ಈಗಿನ ಕಾಲದ ನವನಾಗರಿಕರೆಂದರೆ "ಎತ್ತೀಯಿತು ಎಂದರೆ ಕೊಟ್ಟಿಗೆಯಲ್ಲಿ ಕಟ್ಟು" ಎನ್ನುವರು. ವಿಮರ್ಶೆ ಮಾಡುವುದು ಎನ್ನುವುದು ಅವರ ಮನಸ್ಸಿಗೆ ಹತ್ತುವಂತಿಲ್ಲ. ಈ ವಿಷಯವು ನನಗೆ ಚೆನ್ನಾಗಿ ಗೊತ್ತಾಗಿರುವುದರಿಂದ, ನನ್ನ ಸ್ವಾರ್ಥ ಸಾಧನೆಗೆ ಆ ರೀತಿ ಜನಗಳಲ್ಲಿ ಹೇಳಿ ಅನುಕೂಲ ಮಾಡಿಕೊಳ್ಳುವುದಕ್ಕೋಸ್ಕರವೇ ನಾನು ಉಪನ್ಯಾಸ ಮಾಡಿದ್ದು. ಅದರಂತೆ ಎಷ್ಟೋ ಜನಗಳು ಅದನ್ನು ನಿಜವೆಂತಲೇ ನಂಬಿ ಅದರಂತೆ ಕುಣಿಯುವುದಕ್ಕೆ ಹತ್ತಿರುವರಲ್ಲದೆ ನನ್ನ ಸ್ವಾರ್ಥ ಸಾಧನೆಗೆ ಅನುಕೂಲರಾಗಿಯೂ ಇರುವರು. ಅದಕ್ಕೋಸ್ಕರವೇ ಈ ದಿವಸವೂ ಮತ್ತೊಂದು ಸ್ತ್ರೀಯರ ಮೀಟಿಂಗ್ ನಡೆಯುವುದಾಗಿರುವುದು.

ವಿ : ಅದೇನು? ಆ ಸ್ವಾರ್ಥ ಸಾಧನೆಯೆಂಬುದು ಅಷ್ಟು ರಹಸ್ಯವಾದುದೇನೋ? ನಮಗೂ ಹೇಳಬಹುದಾದರೆ ಹೇಳಬಹುದು. ಏಕೆಂದರೆ ಈಗಿನ ಕಾಲದಲ್ಲಿ ಜನರು ನೀವು ಹೇಳಿದಂತೆ, ಯಾರಾದರೂ ಹೇಳಿದ್ದನ್ನು ಕೇಳಿ ಕುಣಿಯುವವರೇ ಹೊರತು ಕೊಂಚವೂ ವಿಚಾರಮಾಡುವವರಲ್ಲ. ಅಂತಹವರ ಗುಂಪಿನಲ್ಲೇ ಈ ನಿಮ್ಮ ಮೂವರು ಸ್ನೇಹಿತರೂ ಸೇರಿದವರೆಂದು ಹೇಳಬೇಕು. ಆದುದರಿಂದ ಅವರಿಗೆ ನಿಜಸಂಗತಿಯನ್ನು ತಿಳಿಸುವುದಕ್ಕೋಸ್ಕರಲ್ಲೂ, ಯಾವ್ಯಾವ ಸ್ವಾರ್ಥ ಸಾಧನೆಗೋಸ್ಕರ ಜನಗಳು ಈಗಿನ ಕಾಲದಲ್ಲಿ ಸ್ತ್ರೀಯರಿಗೆ ಸ್ವತಂತ್ರ್ಯವಿಲ್ಲ, ವಿಧವಾ ವಿವಾಹ, ಋತುಮತೀ ವಿವಾಹ, ಸಹಪಂಙ್ತಿಭೋಜನ ಇತ್ಯಾದಿಗಳನ್ನು ಮಾಡಬೇಕು; ಎಂದು ಹೇಳುವರು

ಎಂಬುದನ್ನು ಕೊಂಚವಾದರೂ ಇವರುಗಳಂತಹವರು ಯೋಚಿಸಲಿ ಎಂಬುದನ್ನು ತಿಳಿಸುವುದಕ್ಕೋಸ್ಕರಲೂ, ನಿಮ್ಮ ನಿಜಸಂಗತಿಯನ್ನು ಹೇಳಬೇಕೆಂದು ಕೇಳುತ್ತೇನೆಯೇ ಹೊರತು ಮತ್ತೇನೂ ಇಲ್ಲ.

ಸಾ : (ಸುತ್ತಲೂ ನೋಡಿ) - ಆಗಲಿ, ಇಲ್ಲಿರುವವರೆಲ್ಲರೂ ನನ್ನ ಸ್ನೇಹಿತರೇ. ಹೇಗಾದರೂ ಇರುವ ಸಂಗತಿಯನ್ನು ನಿಮ್ಮಲ್ಲಿ ಹೇಳಿಬಿಡುತ್ತೇನೆ. ಆದರೆ ನೀವೇನೂ ನನ್ನನ್ನು ಆಡಿಕೊಳ್ಳುತ್ತೀರೆಂಬುದು ನಿಶ್ಚಯ. ಆದರೆ ನೀವು ಮಾತ್ರ ಈ ವಿಷಯವನ್ನು ಹೊರಗೆ ಪ್ರಕಟಮಾಡಕೂಡದೆಂದು ಕೇಳಿಕೊಳ್ಳುತ್ತೇನೆ. ನನ್ನ ಅಂತರಾತ್ಮನಾದರೂ ಈ ವಿಷಯಕ್ಕೆ ಒಪ್ಪುವಂತಿಲ್ಲ. ಆದರೂ ನನ್ನ ಇಂದ್ರಿಯಗಳು ಮಾತ್ರ ನನ್ನ ಸ್ವಾಧೀನಕ್ಕೆ ಬರುವಂತಿಲ್ಲ.

ವಿ : ಅಡ್ವೋಕೇಟ್ ರಾಮಸ್ವಾಮೈಯ್ಯಂಗಾರರವರಿಗೆ ೧೭ ವರ್ಷದ ಮಗಳೊಬ್ಬಳಿರುವಳು (ಅಷ್ಟರಲ್ಲಿಯೆ ಹೋದ ವರುಷ ವಿಧವೆಯಾದಳಲ್ಲ, ಆ ಹುಡಿಗಿಯೇ?) ಅಹುದಹುದು ಅವಳೇ. ಈಗ ಎರಡು ಮೂರು ವರ್ಷಗಳಿಂದ ನಾನು ಅವರ ಮನೆಗೆ ಹೋಗಿಬರುವ ಪದ್ಧತಿ ಇತ್ತು. ಆಗ ನಾನು ಅವರ ಮನೆಗೆ ಹೋದಾಗಲೆಲ್ಲಾ ನನಗೆ ಆ ಹುಡುಗಿಯ ಮೇಲೆ ನನ್ನ ಕಣ್ಣು ಬೀಳುತಿತ್ತು. ಆದರೆ ಅವರೇನೋ, ಶೂರನಾಗಿಯೂ ವಿದ್ಯಾವಂತನಾಗಿಯೂ ಇರತಕ್ಕವನ್ನೊಬ್ಬನಿಗೇನೆ ಆ ಹುಡುಗಿಯನ್ನು ಮದುವೆ ಮಾಡಿಕೊಟ್ಟಿದ್ದರು. ಅವಳು ವಿಧವೆಯಾಗುವುದಕ್ಕೆ ಒಂದು ವರ್ಷ ಮುಂಚೆ ಅವಳಿಗೆ ನಿಷೇಕಪ್ರಸ್ತವಾಗಿತ್ತು. ಹೀಗಿರುವಾಗ ಅವಳ ದುರಾದೃಷ್ಟ (ನನ್ನ ಸುದೃಷ್ಟ) ವಶಾತ್ ಅವಳ ಗಂಡನು ಹೋದವರುಷ ಇನ್‌ಫ್ಲುಯಂಜಾದಲ್ಲಿ ಸತ್ತುಹೋದನು. ಆದರೆ ಈಗಿನ ಕಾಲವು ನಾಗರಿಕತೆಯುಳ್ಳದ್ದಾಗಿರುವುದರಿಂದಲೂ ಆ ಅಯ್ಯಂಗಾರರು ದೊಡ್ಡ ಮನುಷ್ಯರಾಗಿದ್ದುದರಿಂದಲೂ ಆ ಹುಡುಗಿಗೆ ಯಾವ ವಿಷಯದಲ್ಲಿಯೂ ಗಂಡನು ಹೋದರೂ ಕೊರತೆ ಇರಲಿಲ್ಲ. ಅಂದರೆ ಯಾವ ವಿಧವಾದ ವೈರೂಪ್ಯವು ಇಲ್ಲದೆ ಆಭರಣಾದಿಗಳು ಊಟ ಉಡಿಗೆ ಇವುಗಳೆಲ್ಲವೂ ಕ್ರಮವಾಗಿಯೇ ಇದ್ದು ತಿಳಿಯದವರು ಅವಳನ್ನ ನೋಡಿದರೆ ಸಧವೆಯೆಂತಲೇ ಹೇಳಬಹುದಾಗಿದ್ದಿತು. ಏನಿದ್ದರೇನು? ಮುಖ್ಯವಾದದ್ದು ಮಾತ್ರ ಇರಲಿಲ್ಲ. ಕೊಂಚ ದಿನಗಳ ನಂತರ ನನ್ನ ಮೊದಲಿನ ಯೋಚನೆಗೆ ಈಗ ಅನುಕೂಲವಾಯಿತೆಂತಲೇ ಯೋಚಿಸಿದೆ. ಅದರಂತೆ ನಾನು ಅವರ ಮನೆಯಲ್ಲಿ ಪಳಗಿದವನಾಗಿದ್ದೆನಾದುದರಿಂದ ನೆಪವಿಲ್ಲದ ನೆಪವನ್ನಹಾಕಿಕೊಂಡು ಅವರ ಮನೆಗೆ ಹೋಗುತ್ತಾ ಬರುತ್ತಾ ಕ್ರಮೇಣ ಆ ಹುಡುಗಿಯ ಅನುರಾಗವನ್ನ ನಾನು ಪಡೆದು ಇಬ್ಬರೂ ಸುಖವಾಗಿರುವುದಕ್ಕೆ ಆರಂಭಮಾಡಿದೆವು. ಇದು ಒಬ್ಬರಿಗೂ ಗೊತ್ತಾಗಲಿಲ್ಲ. ಗೊತ್ತಾಗಿಯೂ ಇಲ್ಲ. ಹೀಗಿರುವಾಗ ನಮ್ಮ ಮನಸ್ಸಿನಲ್ಲಿ ತೋರಿದ್ದೇನೆಂದರೆ - ಹೀಗೆಯೇ ಇನ್ನು ಮುಂದೆ ಕಾಲತಳ್ಳುವುದೂ ಕಷ್ಟ, ಬಿಡುವುದೂ ಕಷ್ಟ. ಇತರರಿಗೆ ತಿಳಿದರೆ ನಮಗಿಬ್ಬರಿಗೂ ಉಳಿಗಾಲವಿಲ್ಲ. ಆದುದರಿಂದ ಎಲ್ಲರಿಗೂ ತಿಳಿಯುವಂತೆಯೇ ಇಬ್ಬರು ಒಟ್ಟಿಗೆ ವಾಸ ಮಾಡುವುದಕ್ಕೆ ಅನುಕೂಲಪಡಿಸಿಕೊಳ್ಳಬೇಕೆಂದು ಯೋಚನೆ ಹುಟ್ಟಿ, ಬಹಳ ಯೋಚನೆ ಮಾಡಿ, ಕೊನೆಗೆ ಈ ಉಪಾಯವನ್ನು ಹೂಡಿದೆ. ಅದು ಆಗಲೇ ಎಲ್ಲ ನಾಗರೀಕ ಗಂಡಸರು ಹೆಂಗಸರಲ್ಲಿಯೂ ಹರಡಿ, ಮೊದಲೆ ನಾನು ನಿಮಗೆ ಹೇಳಿದಂತೆ, ಹೂಬಿಟ್ಟು ಕಾಯಾಗುವುದಕ್ಕೆ ಬಂದಿರುತ್ತದೆ. ಇದೀಗ ನಿಜವಾದ ಸತ್ಯ.

ವಿ : (ಉಳಿದವರನ್ನು ಕುರಿತು) ಏನು? ಈಗ ನಿಮಗೆ ಎಲ್ಲವೂ ಚೆನ್ನಾಗಿ ವ್ಯಕ್ತವಾಗಿರಬೇಕು. ಈ ನಿಮ್ಮ ಬುದ್ಧಿಗೂ ನಾರಣಯ್ಯಂಗಾರರ ಬುದ್ಧಿಗೂ ಹೋಲಿಸಿ ನೋಡಿಕೊಳ್ಳಿರಿ. ಹೀಗೆಯೇ ಈಗಿನ ಕಾಲದವರು ಹೇಳುವ ರಿಫಾರ್ಮ್ (ಬದಲಾವಣೆ) ಮಾತುಗಳೆಲ್ಲವೂ ಇಲ್ಲವೆ ಸ್ವಾರ್ಥ ಸಾಧನೆಗೋಸ್ಕರ ಹೇಳುವ ಮಾತು ಅಥವಾ ನಿಮ್ಮಂತೆ ಒಬ್ಬರು ಹೇಳಿದ್ದನ್ನು ವಿಚಾರ ಮಾಡದೆ ಹೇಳುವ ಮಾತು.

ಮೂವರು :-ಹೌದು, ನೀವು ಹೇಳುವುದು ನಿಶ್ಚಯ. ನಾವೇನೊ ಶುದ್ಧ ಮೂಢರೇ ಸರಿ. ಕೊಂಚವೂ ವಿವೇಚನೆ ಇಲ್ಲದವರು. ಆಗಲಿ! ಈಗ ನಾವು ನಿಮ್ಮಿಂದ ಕೊಂಚ ವಿವೇಕವನ್ನು ಕಲಿತುಕೊಂಡ ಹಾಗಾಯಿತು. ಇನ್ನು ಮುಂದೆ ಮಾತ್ರ ಯಾರಾದರೂ ಏನಾದರೂ ಹೇಳಿದರೆ ವಿಚಾರ ಮಾಡಿಯೇ ಹೀಗೆಂದು ನಿಷ್ಕರ್ಷಿಸುವುದು. ಇಲ್ಲದಿದ್ದರೆ ಒಪ್ಪುವುದೇ ಇಲ್ಲ.

ವಿ : ಸರಿ, ಇನ್ನು ಉಳಿದಿರುವ ಕೆಲಸವು ಈ ವಿಷಯದಲ್ಲಿ ಸ್ವಾತಂತ್ರ್ಯಾಪೇಕ್ಷಿಗಳಾದ ಹೆಂಗಸರ ಅಭಿಪ್ರಾಯಗಳೇನೆಂಬುದನ್ನು ತಿಳಿಯಬೇಕು. ಆದರೆ ಆ ರೀತಿ ವಿಚಾರ ಮಾಡುವುದಕ್ಕೆ ಯಾರಾದರೂ ಒಬ್ಬರೇ ಹೋಗಬೇಕಾಗಿದೆ. ಆದುದರಿಂದ ಯಾರು ಹೋಗಿ ವಿಚಾರಿಸಿಕೊಂಡು ಬರುವವರು? ಎಂದರು.

ಅದಕ್ಕೆ ಉಳಿದವರೆಲ್ಲರೂ ಅವರನ್ನೇ ನೀವು ಎಲ್ಲರಿಗೂ ಮಧ್ಯಸ್ಥರಾದುದರಿಂದ (ಪುರೋಹಿತರು) ನೀವೇ ಹೋಗಿ ಎಲ್ಲರನ್ನೂ ಕೇಳಿ ವಿಷಯಗಳನ್ನು ತಿಳಿದುಕೊಂಡು ಬಂದು ನಮಗೆ ತಿಳಿಸಿರಿ. ನಾವು ಇಲ್ಲಿಯೇ ಇರುತ್ತೇವೆಂದರು.

ವಿ : ಹಾಗೆಯೇ ಆಗಲಿ! ನಾನು ಹೋಗಿಬಂದು ಎಲ್ಲವನ್ನೂ ನಿಮಗೆ ತಿಳಿಸುತ್ತೇನೆಂದು ಹೇಳಿ ಹೊರಟು ಹೋದರು.

## ತೃತೀಯಾಂಕ

ಸ್ಥಳ : ಡೆಪ್ಯುಟೀ ಕಮೀಷನರ್ ರಂಗರಾಯರ ಮನೆ.

ಕಾಲ : ಮಧ್ಯಾಹ್ನ ೪॥ ಘಂಟೆ.

(ವಿವೇಚನಾವಧಾನಿಗಳ ಪ್ರವೇಶ.)

ವಿ : (ಒಳಕ್ಕೆ ಹೋಗಿ) ಏನು ಸುಬ್ಬಮ್ಮನವರೇ, ಮನೆಯಲ್ಲಿ ಎಲ್ಲರೂ ಆರೋಗ್ಯವೇ? ಎಲ್ಲರೂ ಚೆನ್ನಾಗಿರುವರೇ?

ಸು : ಬನ್ನಿ ಅವಧಾನಿಗಳೇ! ಒಳಕ್ಕೆ ಬನ್ನಿರಿ. (ಎಂದು ಹೇಳಿ ಮಣೆಕೊಟ್ಟು, ಕುಳಿತುಕೊಳ್ಳಿರಿ ಎನ್ನುವಳು. ಪರಸ್ಪರ ಯೋಗಕ್ಷೇಮಗಳಾದ ನಂತರ.)

ಸು : ಏನು ಅವಧಾನಿಗಳೇ! ಅಪರೂಪವಾಗಿ ಈ ಕಡೆ ಬಂದಿರಲ್ಲ? (ಅಷ್ಟರಲ್ಲಿ ಪರಿಚಾರಕಳು ಯಜಮಾನಿತಿಯ ಅಪ್ಪಣೆಯಂತೆ ಅವಧಾನಿಗಳಿಗೆ ಕೈ ಕಾಲು ತೊಳೆಯಲು ನೀರನ್ನೂ, ಉಪಹಾರಕ್ಕೆ ಕೊಂಚ ತಿಂಡಿಯನ್ನೂ ತರುವಳು. ಅದೆಲ್ಲವೂ ಆದನಂತರ)

ವಿ : ಮನೆಯಲ್ಲಿ ಎಲ್ಲವೂ ಅನುಕೂಲವಾಗಿದೆಯಷ್ಟೆ?

ಸು : ನಮಗೆ ಅನುಕೂಲವಿಲ್ಲದೆ ಏನು? ಯಜಮಾನರೆಂದರೆ ಪ್ರತ್ಯಕ್ಷ ಧರ್ಮರಾಜರೇ ಸರಿ. ನಾನು ಏನನ್ನು ತರಬೇಕೆಂದರೂ ಅದನ್ನು ಒಡನೆಯೇ ತಂದುಹಾಕುವರು. ಆದರೂ ನನ್ನನ್ನು ಏನಾಯಿತು, ಏನು ಹೋಯಿತೆಂದೂ ಕೇಳುವುದಿಲ್ಲ. ಮನೆಯಲ್ಲಿ ಆಳು-ಕಾಳು-ಅಡಿಗೆ ಮಾಡುವವರು ಮೊದಲಾದವರಂತೂ ಬೇಕಾದಷ್ಟು ಮಂದಿ. ಒಟ್ಟಿನಲ್ಲಿ ನಮಗೆ ಯಾವ ವಿಷಯದಲ್ಲಿಯೂ ಕೊರತೆಯಿಲ್ಲ. ಆದರೆ ಅವರ ಕಷ್ಟವನ್ನ ಜ್ಞಾಪಿಸಿಕೊಂಡೆನೆಂದರೆ ನನಗೆ ಊಟ, ತಿಂಡಿ, ನಿದ್ರೆ ಏನೂ ಬೇಕಾಗುವುದಿಲ್ಲ. ಬೆಳಗಾಯಿತೆಂದರೆ ಆಫೀಸಿಗೆ ಹೋಗಬೇಕು. ಮಧ್ಯಾಹ್ನವಾಯಿತೆಂದರೆ ಆಫೀಸಿಗೆ ಹೋಗಬೇಕು. ಹಗಲು ಸರಿಯಾಗಿ ಊಟಮಾಡುವುದಕ್ಕೆ ಅವಕಾಶವಿಲ್ಲ. ರಾತ್ರೆ ಬರುವುದೂ ೯ ಘಂಟೆಗೆ. ಅಲ್ಲಿಂದ ಬಂದ ಆಯಾಸದಲ್ಲಿ ಸರಿಯಾಗಿ ಊಟಮಾಡುವುದಿಲ್ಲ. ಜೊತೆಗೆ ಮೇಲಧಿಕಾರಿಗಳ ಯೋಚನೆ. ಒಟ್ಟಿನಲ್ಲಿ ಅವರಿಗೆ ಮನಸ್ಸಿಗೆ ಸಮಾಧಾನವಿಲ್ಲ. ಕಾಲಕಾಲಕ್ಕೆ ಅವರಿಗೆ ಊಟ ಉಪಚಾರಗಳಿಲ್ಲ. ಅದೊಂದರಿಂದ ಮಾತ್ರ ನನ್ನ ಮನಸ್ಸಿಗೆ ಸಮಾಧಾನವಿಲ್ಲವೇ ಹೊರತು ಮತ್ಯಾವುದಕ್ಕೂ ಯೋಚನೆ ಇಲ್ಲ. ಊಟ ಉಪಚಾರಗಳಿಗೆ, ಉಡಿಗೆ

ತೊಡಿಗೆಗಳಿಗೆ ಯಾವುದಕ್ಕೂ ಕೊರತೆಯಿಲ್ಲ. ಅವರು ನನಗೋಸ್ಕರ ತಮ್ಮ ದೇಹವನ್ನೇ ಅರೆಯುತ್ತಾರೆ. ಆದರೆ ಅವರಿಗೆ ಮಾತ್ರ ಯಾವ ಸುಖವೂ ಇಲ್ಲ.

ವಿ : (ಸ್ವಗತಂ - ಸರಿ, ಇಲ್ಲಿ ನಾನು ಇತರ ಯಾವ ಮಾತನ್ನೆತ್ತಿದರೂ ನನ್ನ ಪರ್ಯವಸಾನವಾಗುವಂತಿಲ್ಲವಾದುದರಿಂದ ಇನ್ನು ಹೊರಡುವುದೇ ಲೇಸು) ಪ್ರಕಾಶಂ - ಆಗಲಿ! ನಾನು ಹೋಗಿಬರುತ್ತೇನಮ್ಮ? (ಅನಂತರ ಭೀಮರಾಯರ ಮನೆಯ ಪ್ರವೇಶ)

ವಿ : ಏನು ಪಾರ್ವತಮ್ಮನವರೇ! ಆರೋಗ್ಯವೆ?

(ಪಾರ್ವತಮ್ಮ ಒಳಕ್ಕೆ ಬನ್ನಿರೆಂದು ಕರೆದು ಮಣೆಯನ್ನು ಕೊಡುವಳು. ಅನಂತರ ಪರಸ್ಪರ ಯೋಗಕ್ಷೇಮವನ್ನು ವಿಚಾರಿಸುವಳು.

ವಿ : (ಮೊದಲಿನ ಮನೆಗಿಂತಲೂ ಈ ಮನೆಯು ಕೊಂಚ ವಿಲಕ್ಷಣವಾಗಿರುವುದನ್ನ ಕಂಡು ಇಲ್ಲಿ ನಾವು ಯಾವ ಮಾತನ್ನೆತ್ತಿದರೂ ಏನೂ ಪರವಾ ಇಲ್ಲವೆಂದು ಯೋಚಿಸಿ)

ವಿ : ಏನು ನೀವು ಟೌನ್‌ಹಾಲಿಗೆ ಹೊಗುವುದಿಲ್ಲವೆ?

ಪಾ : ಈ ದಿವಸ ಟೌನ್ ಹಾಲಿನಲ್ಲಿ ವಿಶೇಷವೇನು?

ವಿ : ಈ ದಿವಸ ಅಲ್ಲಿ ಸ್ತ್ರೀಯರ ಮೀಟಿಂಗ್ ಒಂದು ಸೇರುವುದಂತೆ. ಅದರಲ್ಲಿ "ನಮ್ಮ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂತಲೂ ಅದನ್ನುಂಟು ಮಾಡುವುದಕ್ಕೆ" ಯಾವ್ಯಾವ ಏರ್ಪಾಡುಗಳನ್ನು ಮಾಡಬೇಕೆಂತಲೂ ತೀರ್ಮಾನ ಮಾಡುವರಂತೆ.

ಪಾ : ಓಹೊ! ಇದಕ್ಕೇಯೋ ಸೇರುವುದು? ಪುರಾಣಕ್ಕಲ್ಲ. ಪುಣ್ಯಕಥೆಗೂ ಅಲ್ಲ. ನಮ್ಮ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲದೆ ಬಂದಿರುವ ಕೇಡೇನೋ? ಹಾಗೆ ನೋಡಿದರೆ ನಿಜವಾಗಿಯೂ ಪುರುಷರಿಗೇ ಸ್ವಾತಂತ್ರ್ಯವಿಲ್ಲ. ಹೊರಗೆ ಹೋದರೆ ಮೇಲಧಿಕಾರಿಗಳ ಅಥವಾ ಇತರರ ಮಾತನ್ನು ಕೇಳಬೇಕು, ಮನೆಗೆ ಬಂತೆಂದರೆ ನಮ್ಮ ಮಾತನ್ನು ಕೇಳಬೇಕು. ನಿಜವಾಗಿಯೂ ಸ್ವಾತಂತ್ರ್ಯವಿಲ್ಲದವರೆಂದರೆ ಗಂಡಸರೇನೆ. ನಮಗೇನು? ಏತಕ್ಕೆ ಕೊರತೆ? ತಿನ್ನುವುದಕ್ಕೆ ಉಡುವುದಕ್ಕೆ, ತೊಡುವುದಕ್ಕೆ ಯಾವುದಕ್ಕೂ ಕೊರತೆ ಇಲ್ಲ. ಏನು ಬೇಕೆಂದರೂ ಅದು ಮನೆಯಲ್ಲಿ ಸಿದ್ಧವಾಗುತ್ತದೆ. ಯಜಮಾನರೋ ಏನಾಯಿತು, ಎಷ್ಟಾಯಿತು, ಏನನ್ನೂ ಕೇಳುವುದಿಲ್ಲ. ಏನೋ ನಾವಾಗಿಯೇ ಕೊಟ್ಟದ್ದನ್ನು ತಿನ್ನುತ್ತಾ ಬಡಿಸಿದ್ದನ್ನು ಊಟ ಮಾಡುವರು. ಹಗಲೆಲ್ಲ ತಿರಿದರೂ ನಮ್ಮನ್ನು ಕೇಳುವವರಿಲ್ಲ. ಅವರಿಗೆ ಕೆಲವು ವೇಳೆ ಊಟ ತಿಂಡಿಗೂ ಅವಕಾಶವಿರುವುದಿಲ್ಲ. ನಮ್ಮ ಕೆಲಸವೇನು? ಗೊತ್ತೇ ಇದೆ "ನೀನು ತಂದುಹಾಕು, ನಾನು ತಿಂದುಹಾಕುತ್ತೇನೆ" ಎನ್ನುವುದೇ. ಮನೆಯೊಳಗೆ ಇಷ್ಟಾಯಿತು. ಇನ್ನು ಹೊರಗಡೆ ಯಾರ ಮನೆಗಾದರೂ ಅರಸಿನ ಕುಂಕುಮಕ್ಕೆ ಹೋಗಬಹುದು. ದೇವ ಸ್ಥಾನಗಳಿಗೆ ಹೋಗಬಹುದು. ಪುರಾಣ ಪುಣ್ಯಕಥೆಗಳನ್ನು ಕೇಳಬಹುದು. ಇನ್ನು **ಇದಕ್ಕಿಂತಲೂ ಸ್ವಾತಂತ್ರ್ಯವೆಂದರೇನೆಂಬುದೇ ನನಗೆ ಗೊತ್ತಿಲ್ಲ**. ಯಾವಾಗಲಾದರೂ ಅಪರೂಪಕ್ಕೆ ಆಟಪಾಟಗಳು ನಾಟಕಗಳು ಮೊದಲಾದುವುಗಳಾದವೆಂದರೆ ಅವರೇ ಜತೆಯಲ್ಲಿ ಕರೆದುಕೊಂಡು ಹೋಗುತ್ತಾರೆ. ಹೀಗೆ ಪ್ರಪಂಚವೆಲ್ಲ ನಮ್ಮ ಸುಖಕ್ಕೆ ಇದ್ದರೂ ಗಂಡಸರು ನಮಗಾಗಿಯೇ ತಮ್ಮ ದೇಹವನ್ನು ಅರೆದರೂ, ಇನ್ನೂ ಸ್ವಾತಂತ್ರ್ಯವಿಲ್ಲವೆಂದರೆ ಅರ್ಥವೇನು? ನಾಚಿಕೆ ಹೇಸಿಕೆಗಳಿಲ್ಲದ ಭಂಡ ಮುಂಡೆಯರು ತಮಗೆ ಕಂಡಕಂಡವರಲ್ಲಿ ಸ್ವೇಚ್ಛಾ ವಿಹಾರಕ್ಕೆ ಅವಕಾಶವಿಲ್ಲವೆಂಬುದಕ್ಕೋಸ್ಕರ ಹೀಗೆ ಹೇಳುತ್ತಾರೋ ಏನೊ? ಅಂತಹ ಬಾಳುಗೆಟ್ಟವರ ಮಾತನ್ನೇ ನನ್ನಲ್ಲಿ ಹೇಳಬೇಡಿರಿ. ಅವರೇನು ಊರಾಗಬೇಕೊ? ಒಕ್ಕಲಾಗಬೇಕೋ? ಅವರ ವಿನಾಶಕ್ಕೇನೇ ಅವರಿಷ್ಟು ಮಾಡುವುದು.

ವಿ : ಹೌದಮ್ಮ, ನೀವು ಹೇಳುವುದೇ ನಿಶ್ಚಯ. ಈಗಿನ ಕಾಲದಲ್ಲಿಯೂ ಇಂತಹ ಸಾತ್ವಿಕ ಪತಿವ್ರತೆಯರಿ

ರುವರಲ್ಲ ಅದಕ್ಕೋಸ್ಕರ ಬಹಳ ಸಂತೋಷಿಸುತ್ತೇನೆ, ಹೋಗಿ ಬರುತ್ತೇನಮ್ಮ, ಎಂದು ಹೊರಟು ಹೋಗುವರು.

(ಆ ಮೇಲೆ ಮತ್ತೊಬ್ಬರ ಮನೆಯ ಪ್ರವೇಶ.)

ಬಾಗಿಲಿಗೆ ಹೋಗುತ್ತಲೇ ಲಕ್ಷ್ಮಮ್ಮನವರು ಕುರ್ಚಿಯನ್ನು ತೋರಿಸಿ ಕುಳಿತುಕೊಳ್ಳುವಂತೆ ಹೇಳುವರು.

(ಲಕ್ಷ್ಮಮ್ಮನವರು ಎಲ್ಲಿಗೋ ಹೊರಡುವಂತೆ ಕಾಣಬರುವುದು)

ವಿ : ಏನು ಲಕ್ಷ್ಮಮ್ಮನವರೇ? ಎಲ್ಲಿಗೋ ಹೊರಡುವಂತೆ ಕಾಣಬರುವುದಲ್ಲ?

ಲ : ಹೂಂ! ಈ ದಿವಸ ಟಾನ್‌ಹಾಲಿನಲ್ಲಿ ಸ್ತ್ರೀಯರ ಸಭೆಯೊಂದು ನಡೆಯುವುದು. ಅದಕ್ಕೋಸ್ಕರ ನಾನು ಹೋಗುತ್ತೇನೆ.

ವಿ : ಅದೇನು, ಆ ಸಭೆಯ ಉದ್ದೇಶ್ಯವೇನು?

ಲ : ಮತ್ತೇನೂ ಇಲ್ಲ. ನಮ್ಮ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲದ್ದರಿಂದ ಅದನ್ನುಂಟು ಮಾಡಿಕೊಳ್ಳುವುದಕ್ಕೋಸ್ಕರ ಹೋಗುತ್ತೇನೆ.

ವಿ : ಅದೇನಮ್ಮ? ನಮ್ಮ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೇನು?

ಲ : ಇಲ್ಲದೇ ಏನು? ಬೇಕಾದಷ್ಟಿದೆ. (ಎಂದು ಹೇಳಿ ಪಾರ್ವತಮ್ಮನು ಹೇಳಿದ ಅನುಕೂಲತೆಗಳನ್ನೆಲ್ಲಾ ಹೇಳುವಳು) ಆದರೆ ಇವುಗಳ ಜತೆಗೆ ಇನ್ನೂ ಕೊಂಚ ಬೇಕಾಗಿದೆಯಾದ್ದರಿಂದ ಅದನ್ನು ಒದಗಿಸಿಕೊಳ್ಳುವುದಕ್ಕೋಸ್ಕರವೇ ಯೋಚಿಸುತ್ತಿದ್ದೇನೆ.

ವಿ : ಅದೇನು ಇನ್ನು ಬೇಕಾದುದು? ನನ್ನಲ್ಲಿ ಹೇಳಬಹುದಾದರೆ ತಿಳಿಸಿರಿ ನೋಡೋಣ.

ಲ : ಹೇಳಬಾರದ್ದೇನು? ಆ ಉದ್ದೇಶ್ಯದಿಂದಲೇ ಈಗ ನಾವು ಹೊರಕ್ಕೆ ಹೊರಟಿರಬೇಕಾದರೆ ನಿಮ್ಮಲ್ಲಿ ಹೇಳುವುದಕ್ಕೇನು? ಕೇಳಿರಿ ಹೇಳುತ್ತೇನೆ. - ಹಿಂದೆ ನಾನು ನಿಮಗೆ ತಿಳಿಸಿದಂತೆ ಎಲ್ಲಾ ಅನುಕೂಲತೆಗಳೂ ಯಥೇಚ್ಛವಾಗಿವೆಯಾದುದರಿಂದ ನಮಗೆ ಮಾಡುವುದಕ್ಕೆ ಕೆಲಸವೇ ಇಲ್ಲವಾಗಿದೆ. - ಒಡವೇ, ಒಳ್ಳೊಳ್ಳೆ ಬಟ್ಟೆಗಳು (ಷೋಕಿಗೆ), ಇತರ ನಾಜೋಕು ಪದಾರ್ಥಗಳು, ಇವುಗಳಿಗೆ ಕಡಮೆ ಇಲ್ಲ. ವಿಧ ವಿಧವಾದ ರಸಕವಳಗಳೂ ಊಟ ಉಪಚಾರಗಳಂತೂ ಸರಿಯೆ ಸರಿ. ಇಷ್ಟೆಲ್ಲ ಇದ್ದೂ ನಮಗೆ ಮಾತ್ರ ಯಾವ ಕೆಲಸವೂ ಇಲ್ಲ. ಇನ್ನು ಸತ್ಕಾಲಕ್ಷೇಪ ಮಾಡುವುದಕ್ಕೆ ಅನುಕೂಲಗಳಿದ್ದರೂ ಅದಕ್ಕೆ ಮನಸ್ಸಿಲ್ಲ. ಹೀಗಿರುವುದರಿಂದ ನಮ್ಮ ಮನಸ್ಸಿಗೆ ಇನ್ನೇನು ಕೆಲಸ? ನೀವೇ ಹೇಳಿರಿ. ಕೆಲಸವಿಲ್ಲದ ಕುಂಬಾರ ............ಹಾಗೆ ನಮ್ಮ ಮನಸ್ಸಾದರೋ ಮತ್ತೊಂದು ವಿಧವಾದ ಎಲ್ಲಕ್ಕೂ ಮೇಲ್ಪಟ್ಟ ಸುಖವುಂಟಷ್ಟೆ? ಅದನ್ನು ಅಪೇಕ್ಷಿಸುತ್ತದೆ. ಅದಕ್ಕೆ ನಮ್ಮ ಯಜಮಾನರ ಕೆಲಸಕಾರ್ಯಗಳಿಂದ ಅವರಿಂದ ಪ್ರಯೋಜನವಾಗುವಂತಿಲ್ಲ. ಇತರರಿಂದ ಅನುಕೂಲಗಳನ್ನು ಮಾಡಿಕೊಳ್ಳೋಣವೆಂದರೆ ಜನರು ನಮ್ಮನ್ನು ನಾನಾ ವಿಧವಾಗಿ ಆಡಿಕೊಳ್ಳುತ್ತಾರೆ. ಆ ಮೇಲೆ ಆಗಿನ ಸಂದರ್ಭದಲ್ಲಿ ನಮ್ಮ ಯಜಮಾನರೂ ನಮ್ಮನ್ನು ತ್ಯಾಗ ಮಾಡಬಹುದು. ಆಗ ಇತರರೂ (ಮೊದಲು ನಮ್ಮಲ್ಲಿ ಸುಖಪಟ್ಟವರೂ) ನಮ್ಮನ್ನು ಬಹಿರಂಗವಾಗಿ ಸ್ವೀಕರಿಸುವುದಕ್ಕೆ ಒಪ್ಪುವುದಿಲ್ಲ. ಆಗ ನಮಗೆ ಉಭಯಭ್ರಷ್ಟತ್ವ ಬರುವುದು. ಈರೀತಿಯಾದ ತೊಂದರೆಗಳನ್ನು ತಪ್ಪಿಸಿಕೊಂಡು ಸ್ವೇಚ್ಛೆಯಿಂದ ಸುಖವಾಗಿರುವುದಕ್ಕೋಸ್ಕರವೇ ಈಗ ನಾವು ಹೊಡೆದಾಡಬೇಕಾಗಿದೆ.

ವಿ : (ಸ್ವಗತಂ - ಈಗೀಗ ಕೊಂಚ ಸ್ವಾರಸ್ಯ ಬಂದಿತು. ಈಗಿನ ಕಾಲದಲ್ಲಿ ಸ್ವಾತಂತ್ರ್ಯಕ್ಕೋಸ್ಕರ ಹೊಡೆದಾಡುವ ಸ್ತ್ರೀಯರ ಗುಟ್ಟು ಕೊಂಚ ಹೊರಬಿದ್ದ ಹಾಗಾಯ್ತು. ಇನ್ನು ಇನ್ನೂ ಎಂತಂತಹ ಅಭಿಪ್ರಾಯಗಳಿರುವವೋ ನೋಡೋಣ) ಪ್ರಕಾಶಂ -

ವಿ : ಆಗಲಿ! ತಮಗೆ ಕಾಲತಾಮಸವಾಯಿತೆಂದು ಕಾಣುತ್ತದೆ. ನಾನು ಹೋಗಿಬರುತ್ತೇನೆ. (ಹೊರಟು ಹೋಗುವರು.)

(ಪದ್ಮಮ್ಮನವರ ಮನೆಯ ಪ್ರವೇಶ)

(ಪದ್ಮಮ್ಮನವರು ವಿಧವಿಧವಾದ ಡ್ರೈಸ್‌ಹಾಕಿಕೊಂಡು ಎಲ್ಲಿಗೋ ಹೊರಡಲುದ್ಯುಕ್ತ ರಾಗಿರುವವರು. ಪದ್ಮಮ್ಮನವರು ವಿವೇಚನಾವಧಾನಿಗಳನ್ನು ಕಾಣುತ್ತಲೇ, ಒಳಕ್ಕೆ ಬನ್ನಿರಿ ಎಂದು ಹೇಳಿ ಶೇಕ್ ಹ್ಯಾಂಡ್ ಕೊಡಲು ಹೋಗುವಳು. ಅಷ್ಟರಲ್ಲಿ ವಿವೇಚನಾವಧಾನಿಗಳು ಉಪಾಯ ದಿಂದ ತಪ್ಪಿಸಿಕೊಂಡು ಬೇರೆ ಕುರ್ಚಿಯ ಮೇಲೆ ಕುಳಿತುಕೊಳ್ಳುವರು)

ವಿ : ಏನು ಪದ್ಮಮ್ಮನವರೇ! ಎಲ್ಲಿಗೋ ಹೊರಟಿರುವಂತೆ ಕಾಣುವುದಲ್ಲ.

ಪ : ಇದೇನೆಂತ ನಿಮಗೆ ಗೊತ್ತಿಲ್ಲವೇ? ಈ ದಿವಸ ಟಾನ್‌ಹಾಲಿನಲ್ಲಿ (ನಮ್ಮಗಳ) ಸ್ತ್ರೀಯರ ಮೀಟಿಂಗ್ ಒಂದು ನಡೆಯುವುದು. ಅದಕ್ಕೆ ಹೋಗಬೇಕಾಗಿರುವುದು.

ವಿ : ಅದೇನು, ಅಲ್ಲಿ ಮೀಟಿಂಗ್ ನಡೆಯತಕ್ಕ ಉದ್ದೇಶ್ಯವೇನು?

ಪ : ನಮ್ಮ ಸ್ತ್ರೀಯರಿಗೆ ಅಧಿಕವಾದ ಹೆಚ್ಚುಗಟ್ಟಲೆ ಸ್ವಾತಂತ್ರ್ಯವಿಲ್ಲವಾದುದರಿಂದ ಅದನ್ನು ಸಂಪಾದಿಸುವ ಉದ್ದೇಶ್ಯದಿಂದ ನಾವೆಲ್ಲರೂ ಒಂದು ರೆಜಲ್ಯೂಷನ್ (ತೀರ್ಮಾನ) ಮಾಡಬೇಕಾ ಗಿರುವುದು.

ವಿ : ಅದೇನು, ನಮ್ಮ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೇನು?

ಪ : ಇಲ್ಲದೆ ಏನು? ಬೇಕಾದಷ್ಟಿದೆ. (ಎಂದು ಲಕ್ಷ್ಮಮ್ಮನು ಹೇಳಿದ್ದ ಅನುಕೂಲಗಳನ್ನೆಲ್ಲಾ ಹೇಳಿ) ನನಗೆ ಯಾವುದಕ್ಕೂ ಯೋಚನೆ ಇಲ್ಲ. ನಾನು ಕಂಡಕಂಡ ಪುರುಷರಲ್ಲಿ ಬೇಕಾದರೂ ಮಾತುಕಥೆ ಆಟಪಾಟಗಳನ್ನಾಡಬಹುದು. ಸ್ವೇಚ್ಛಾ ವಿಹಾರವನ್ನು ಮನಬಂದಂತೆ ಮಾಡಬಹುದು. ಅದಕ್ಕೂ ಅಡ್ಡಿಯಿಲ್ಲ; ಮತ್ತು ಯಾವ ತೊಂದರೆಯೂ ಇಲ್ಲ. ನಮ್ಮ ಯಜಮಾನರು ಈಗಿನ ಕಾಲದವರಾದ್ದರಿಂದ ಅದಕ್ಕೆಲ್ಲ ಅವಕಾಶ ಕೊಟ್ಟೇ ಇರುವರು. ಈಗೇನೋ ನಾನು ಸದ್ಯಕ್ಕೆ ಎಲ್ಲರಿಗಿಂತಲೂ ಸುಖಿಯಾಗಿಯೇ ಇದ್ದೇನೆ. ಆದರೆ ಒಂದು ಯೋಚನೆ ಮಾತ್ರ. ಈಗಂತೂ ನಮ್ಮ ಯಜಮಾನರು ಜೀವದಿಂದಿದ್ದಾರೆ. ಸ್ವೇಚ್ಛಾವಿಹಾರಕ್ಕೆ ಲಕ್ಷ್ಯವಿಲ್ಲ. ಆದರೆ ಅವರೇನಾದರೂ ಆಕಸ್ಮಿತ್ತಾಗಿ "ಓಂ" ಎಂದರೆ ಸ್ವಲ್ಪ ಯೋಚನೆ. ಆಗಲಾದರೂ ಜೀವನಕ್ಕೇನೂ ಯೋಚನೆಯಿಲ್ಲ. ನನ್ನ ಹೆಸರಿನಲ್ಲಿ ನನ್ನ ಯಜಮಾನರು ೧೦ ಸಾವಿರ ರೂಪಾಯಿಗಳಿಗೆ ಲೈಫ್ ಇನ್ಸೂರೆನ್ಸ್ ಮಾಡಿಟ್ಟಿರುವರು. ಆದರೆ ಮತ್ತೊಂದು ವಿಷಯಸುಖವುಂಟಲ್ಲ, ಅದಕ್ಕೆ ಮಾತ್ರ ಕೊಂಚ ಯೋಚನೆ. ಆಗೇನಾದರೂ ಯಾರಾದರೂ ನನ್ನ ಮನೆಗೆ ಬಂದರೆ ಜನರು ಆಡಿಕೊಳ್ಳುತ್ತಾರೆ. ಆಕಸ್ಮಾತ್ತಾಗಿ ಗರ್ಭಿಣಿಯೇನಾದರೂ ಆದೆನೆಂದರೆ ತೀರಿತು. ಜನರೆಲ್ಲರೂ ಈ ಹಾಳು ಮುಂಡೆಯು ಆಗಲೆ ಮಿಂಡನನ್ನಿಟ್ಟುಕೊಂಡು ಪ್ರೋಗ್ರೆಸ್ ತೋರಿಸಿ ಬಿಟ್ಟಿದ್ದಾಳೆಂದು ಹೇಳುವರಲ್ಲ? ಆ ರೀತಿಯಾದ ತೊಂದರೆಗಳಾವುದೂ ಇಲ್ಲದೆ ಹೋದರೆ ಅನುಕೂಲವಲ್ಲವೆ? ಅದಕ್ಕೋಸ್ಕರ ಈ ರೀತಿ ಸ್ವಾತಂತ್ರ್ಯದ ಸುದ್ದಿಯನ್ನೆತ್ತಿ ನಾನು ವಿಧವೆಯಾದರೂ ಮದುವೆಶಾಸ್ತ್ರವನ್ನು ಒಬ್ಬನಲ್ಲಿ ಮಾಡಿಕೊಂಡು ಬೇಕಾದಷ್ಟು ಸುಖಗಳನ್ನನುಭವಿಸಬಹುದು. ಇದಕ್ಕೋಸ್ಕರ ನನ್ನ ಪ್ರಯತ್ನ ಅಷ್ಟೇ ಹೊರತು ಮತ್ತೇನೂ ಇಲ್ಲ.

ವಿ : (ಸ್ವಗತಂ - ಈಗ ಮತ್ತು ಸ್ವಾರಸ್ಯವಾಯ್ತು. ಇವು ಇನ್ನೂ ವಿಚಿತ್ರವಾದ ಸ್ವಾತಂತ್ರ್ಯದ ಉದ್ದೇಶ್ಯಗಳೇ ಸರಿ. ಆಗಲಿ, ಇನ್ನು ಏನೇನು ತಮಾಷೆಗಳುಂಟೋ ನೋಡುವ) ಪ್ರಕಾಶಂ-ಆಗಲಿ, - ಹೊತ್ತಾ ಯಿತೆಂದು ಕಾಣುವುದು; ಹೋಗಿಬರುತ್ತೇನೆ.

(ರಂಗಮ್ಮನವರ ಮನೆಯ ಪ್ರವೇಶ)

(ಹಿಂದಿನಂತೆಯೇ ರಂಗಮ್ಮನವರು ಎಲ್ಲಿಗೊ ಹೊರಡುವುದಕ್ಕೆ ಸಿದ್ಧರಾಗಿ ಬಾಗಿಲಲ್ಲಿ ನಿಂತಿರುವಳು. ಆಗ ವಿವೇಚನಾವಧಾನಿಗಳ ಪ್ರವೇಶ)

ರಂ : ಬನ್ನಿ ಅವಧಾನಿಗಳೆ! (ಎಂದು ಕರೆಯುವಳು)

ವಿ : (ನಿಂತುಕೊಂಡೆ) ಎಲ್ಲಿಗೊ ಹೊರಟು ಸಿದ್ಧವಾಗಿರುವಂತೆ ಕಾಣುವುದಲ್ಲ?

ರಂ : ಈ ದಿವಸ ಟೌನ್‌ಹಾಲಿನಲ್ಲಿ "ಸ್ತ್ರೀಯರಿಗೆ ಸ್ವಾತಂತ್ರ್ಯವನ್ನುಂಟು ಮಾಡುವುದಕ್ಕೋಸ್ಕರ ಒಂದು ಫೀಮೆಲ್ಸ್ ಮೀಟಿಂಗ್" (ಸ್ತ್ರೀಯರ ಸಭೆ) ನಡೆಯುವುದಾಗಿರುವುದು. ಅದಕ್ಕೋಸ್ಕರ ನಾನು ಹೊರಟಿರುತ್ತೇನೆ.

ವಿ : ಅದೇನು? ನಿಮಗೆ ಸ್ವಾತಂತ್ರ್ಯವಿಲ್ಲವೇನು?

ರಂ : ನಮಗೆ ಸ್ವಾತಂತ್ರ್ಯವಿಲ್ಲದೆ ಮತ್ಯಾರಿಗಿದೆ? ಅವಧಾನಿಗಳೇ, ಗಂಡಸರಿಗೆ ಈಗಿನ ನಮ್ಮಗಳ ಕಾಲದಲ್ಲಿ ಏನೂ ಸ್ವಾತಂತ್ರ್ಯವಿಲ್ಲವೆಂತಲೇ ಹೇಳಬೇಕು. ಎಲ್ಲರೂ ನಮ್ಮಗಳ ಮುಂದೆ ನಿಸ್ಸತ್ವಿಗಳೇ ಆಗಿಬಿಟ್ಟಿದ್ದಾರೆ. ಆದರೆ ಅದರಲ್ಲಿ ಮತ್ತೊಂದು ವಿಶೇಷವೇನೆಂದರೆ (ಎಂದು ಹೇಳಿ) ಈವರೆಗೂ ಹಿಂದಿನವರು ಹೇಳಿದ ಅನುಕೂಲತೆಗಳನ್ನೆಲ್ಲಾ ಹೇಳಿ) ನನಗೆ ಯಾತರಲ್ಲಿಯೂ ಕೊರತೆ ಇಲ್ಲ. ಒಂದು ವೇಳೆ ನನ್ನ ಯಜಮಾನರು ಸತ್ತರೂ, ನಾನು ಸ್ವೇಚ್ಛಾವಿಹಾರಕ್ಕೂ ಭಯಪಡುವಂತಿಲ್ಲ. ಆದರೆ ಇರುವ ಕೊರತೆಯೇನೆಂದು ಕೇಳಿದರೆ ಇದುವರೆಗೆ ನಾವು ಏನು ಸುಖಪಡಬೇಕಾದರೂ ಒಂದೇ ಜಾತಿಯವರಲ್ಲಿ ಮಾತ್ರ ಸುಖಪಡಬೇಕಾಗಿದೆ. ನನ್ನ ಉದ್ದೇಶ್ಯವೇನೆಂದರೆ ಇತರ ಜಾತಿಯವರಲ್ಲಿ ಒಳ್ಳೇ ಲಾಯಃಖಾಗಿರತಕ್ಕವರಲ್ಲಿಯೂ ಸುಖಪಡುವುದಕ್ಕಾಗಲಿ ಮದುವೆ ಮಾಡಿಕೊಳ್ಳುವುದಕ್ಕಾಗಲಿ ಅವಕಾಶವಿಲ್ಲವಲ್ಲ? ಅದನ್ನು ಹೇಗಾದರೂ ಆಚರಣೆಗೆ ತರುವಂತೆ ಮಾಡಿ ಸುಖವಾಗಿರಬೇಕೆಂದು ಯೋಚನೆ ಮಾಡುತ್ತೇನಾದುದರಿಂದ ಅದಕ್ಕಾಗಿ ಇಷ್ಟೆಲ್ಲಾ ನಮ್ಮಗಳ ಪ್ರಯತ್ನ.

ವಿ : (ಸ್ವಗತಂ - ಇದು ಮತ್ತು ವಿಶೇಷವೆಂತಲೇ ಹೇಳಬೇಕು. ಆಗಲಿ, ಕಾಲಚಕ್ರಕ್ಕೆ ಮಾಡುವುದೇನು? ಸಾಕು. ಇನ್ನು ಸಾಕ್ಷಿಗಳನ್ನು ಕೇಳಿದ್ದು ಸಾಕಾಯಿತು.) ಪ್ರಕಾಶಂ - ಆಗಲಿ, ದಯಮಾಡಿಸೋಣಾಗಲಿ, ಹೊತ್ತಾಯಿತು.

## ಚತುರ್ಥಾಂಕ

(ಆ ಮೇಲೆ ಸ್ನೇಹಿತರೆಲ್ಲರೂ ಒಂದು ಕಡೆ ಸೇರುವರು. ಅಷ್ಟು ಹೊತ್ತಿಗೆ ಇನ್ನೂ ಕೆಲವರು ಅಂತಹ ಸ್ನೇಹಿತರೇ ಸೇರುವರು. ಅನಂತರ ವಿವೇಚಾನಾವಧಾನಿಗಳು ತಾವು ಇದುವರೆಗೆ ವಿಚಾರಿಸಿದ ಹೆಂಗಸರ ಸಾಕ್ಷ್ಯಗಳೆಲ್ಲವನ್ನೂ ವಿವರಿಸುವರು. ಅನಂತರ ಎಲ್ಲರೂ ಸ್ತ್ರೀಯರ ಕುಟಿಲತನದ ಬುದ್ಧಿಯ ಆಳವನ್ನು ಕಂಡುಹಿಡಿಯಲಾರದೆ ಆಶ್ಚರ್ಯಪಡುತ್ತಾ ವೆ| ರಾ| ವಿವೇಚನಾವಧಾನಿಗಳನ್ನು ಕುರಿತು) "ದೈವ ನಿರ್ಮಾಣದಲ್ಲಿ ಸ್ತ್ರೀಪುರುಷರುಗಳಲ್ಲಿ ಯಾರು ಹೆಚ್ಚು? ಯಾರು ಕಮ್ಮಿ? ಯಾರಿಗೆ ಸ್ವಾತಂತ್ರ್ಯತೆ ಹೆಚ್ಚು? ಯಾರಿಗೆ ಸ್ವಾತಂತ್ರ್ಯತೆ ಕಮ್ಮಿ? ಇತ್ಯಾದಿ ವಿಷಯಗಳನ್ನು ನಮ್ಮಗಳಿಗೋಸ್ಕರ ಕೊಂಚಮಟ್ಟಿಗೆ ಉಪನ್ಯಾಸ ಮಾಡಬೇಕೆಂದು ಕೇಳಿಕೊಂಡರು.

## ಅವರ ಉಪನ್ಯಾಸದ ಸಾರ

ಮಹನೀಯರೇ!

ಈಗ ನೀವು ನನ್ನನ್ನು ಇದ್ದಕ್ಕಿದ್ದ ಹಾಗೆಯೇ ಸ್ತ್ರೀಪುರುಷರಿಬ್ಬರಲ್ಲಿ ಯಾರು ಹೆಚ್ಚು. ಯಾರು ಕಮ್ಮಿ, ಯಾರು ಸ್ವತಂತ್ರರು, ಯಾರು ಪರತಂತ್ರರು - ಇತ್ಯಾದಿ ವಿಷಯಗಳನ್ನು ಉಪನ್ಯಸಿಸುವಂತೆ ಕೇಳುತ್ತೀರಿ. ಆದರೆ ನಾನು ಯಾವುದನ್ನೂ ಮೊದಲೇ ಸಿದ್ಧಮಾಡಿಕೊಳ್ಳಲಿಲ್ಲವಾಗಿ ಬಹಳವಾಗಿ ವಿವರಿಸಿ ಹೇಳುವುದು

ಸಾಧ್ಯವೇ ಅಲ್ಲ. ಆದರೂ ನಿಮ್ಮಗಳ ಅಭಿಮಾನವು ನನ್ನಲ್ಲಿ ಪೂರ್ಣವಾಗಿರುವುದರಿಂದ ಸಾಧ್ಯವಾದಷ್ಟನ್ನ ತಮ್ಮಗಳಲ್ಲಿ ಅರಿಕೆ ಮಾಡುತ್ತೇನೆ.

ಪರಬ್ರಹ್ಮನು ತನ್ನ ಲೀಲಾರ್ಥವಾಗಿ ಈ ಪ್ರಪಂಚವನ್ನು ಸೃಷ್ಟಿ ಮಾಡಬೇಕೆಂದು ಯೋಚಿಸಿದಾಗಲೇ ಈ ಚರಾಚರ ಪ್ರಪಂಚದಲ್ಲಿ ಪ್ರತಿಯೊಂದು ಪಂಗಡವೂ ಗಂಡು-ಹೆಣ್ಣು ಜಾತಿಗಳಿಂದಲೇ ಅಭಿವೃದ್ಧಿಯಾಗುವಂತೆ ಏರ್ಪಡಿಸಿದನು. ಅದರಂತೆಯೇ, ಮಾನವ ಸೃಷ್ಟಿಯನ್ನು ಮಾಡುವಾಗಲೂ ಆ ತತ್ವವನ್ನೇ ಅನುಸರಿಸಿದನು. ಆದರೆ ಮಾನವ ಜಾತಿಗೆ ಬುದ್ಧಿ, ಜ್ಞಾನ, ಅನುಕೂಲವಾದ ಇಂದ್ರಿಯಗಳು, - ಇವುಗಳನ್ನು ಹೆಚ್ಚಾಗಿ ಕೊಟ್ಟನು. ಯಾವಾಗ ಈ ರೀತಿಯಾದ ಅನುಕೂಲಗಳನ್ನು ಹೆಚ್ಚಾಗಿ ಕೊಟ್ಟನೊ ಒಡನೆಯೇ ಇತರ ಪ್ರಾಣಿಗಳಿಗೆ ಕೊಟ್ಟಿರತಕ್ಕ (ರಿಯಾಯತಿ) ಅನುಕೂಲಗಳನ್ನು (ಮಗುವು ಹುಟ್ಟಿದೊಡನೆಯೇ ಓಡಾಡುವುದು, ತಾಯಿಯ ಮೊಲೆ ಹಾಲನ್ನ ತಾನೇ ಕುಡಿಯುವುದು, ೧-೨ ತಿಂಗಳಾದ ನಂತರ ಸ್ವತಃ ಆಹಾರವನ್ನು ಸಂಪಾದಿಸಿಕೊಳ್ಳುವುದು ಇತ್ಯಾದಿ.) ತಪ್ಪಿಸಿರುವನು. ಈ ಅನುಕೂಲತೆಗಳು ತಪ್ಪುತ್ತಲೇ ನಾವು ಮಕ್ಕಳು ಹುಟ್ಟಿದೊಡನೆಯೇ ಅವರನ್ನ ಕ್ರಮವಾಗಿಯೇ ಪ್ರಯತ್ನಪೂರ್ವಕವಾಗಿ ಪೋಷಿಸಿ ಬೆಳೆಸಬೇಕಾಯಿತು. ಇದರ ಮಧ್ಯೆ ಹೊಟ್ಟೆಯ ಪಾಡೊಂದು ಆಗಲೇ ಬೇಕಷ್ಟೆ. ಅದಕ್ಕಾಗಿ ಸ್ತ್ರೀ ಪುರುಷರಿಬ್ಬರೂ ಹೊರಗೆ ಹೋಗಿ ಆಹಾರ ಸಂಪಾದಿಸಬೇಕಾಯಿತು. ಹಾಗೆ ಇಬ್ಬರೂ ಹೊರಟರೆ ಮನೆಯಲ್ಲಿ ಮಗುವನ್ನು ನೋಡಿಕೊಳ್ಳುವವರಾರು? ಆಗ ಇಬ್ಬರಲ್ಲಿ ಒಬ್ಬರು ಮನೆಯಲ್ಲಿ ಅಗತ್ಯ ನಿಲ್ಲಬೇಕಾಯಿತು. ಆಗ ಯಾರು ಮನೆಯಲ್ಲಿ ನಿಂತರೆ ಉತ್ತಮವೆಂದು ಯೋಚನೆಗೆ ಬರಲು, ಹೆತ್ತ ತಾಯಿಯರಿಗೆ ಸ್ವಾಭಾವಿಕವಾಗಿ ಮಕ್ಕಳಲ್ಲಿ ಕರುಳುಸಂಬಂಧ ಹೆಚ್ಚಾಗಿರುವುದರಿಂದಲೂ ಪ್ರೀತಿಯು ಹೆಚ್ಚಾಗಿರುವುದರಿಂದ ಮಕ್ಕಳ ಆಹಾರವು ಅವರಲ್ಲಿ ಸ್ವಾಭಾವಿಕವಾಗಿ (ಸ್ತನ್ಯಾಪಾನದಲ್ಲಿ) ಇರುವುದರಿಂದಲೂ, ಅವರನ್ನೇ ಮಕ್ಕಳನ್ನು ನೋಡುವುದಕ್ಕೆ ನಿಯಮಿಸಬೇಕಾಯ್ತು. ಅಲ್ಲದೆ ಅವರಿಗೆ ಮಕ್ಕಳಲ್ಲಿ ಪ್ರೀತಿಯ ಜತೆಗೆ ಸಹನಗುಣವೂ ಹೆಚ್ಚಾಗಿರುವುದು. ಗಂಡಸರಿಗೆ ಈ ರೀತಿ ಹೆಂಗಸಿನಷ್ಟು ಕರುಳು ಸಂಬಂಧವಾಗಲಿ ಸಹನ ಗುಣವಾಗಲಿ ಇಲ್ಲವೇ ಇಲ್ಲ. ಈ ವಿಷಯವು ನಿಮಗೆಲ್ಲರಿಗೂ ಪ್ರತ್ಯಕ್ಷವೇನೆ. ಎಂದಾದರೂ ಒಂದು ದಿವಸ ಆಕಸ್ಮಾತ್ತಾಗಿ ತಾಯಿಯು ಮನೆಯಲ್ಲಿಲ್ಲದೆ ಮನೆಗೆಲಸವು ನಿಮ್ಮ ಮೈ ಮೇಲೆ ಬಿದ್ದಾಗ, ಮಕ್ಕಳು ಕೊಂಚ ಅತ್ತು ಕರೆದು ಕಿರುಕುಳ ಮಾಡಿದರೆಂದರೆ ಆಗ ತಂದೆಯು ಮಾಡುವುದೇನು? ಮಕ್ಕಳು ಎಂದೆಂದಿಗೂ ಮರೆಯದಂತಹದೊಂದು ಏಟನ್ನ ಘಟೀರನೆ ಕೊಡುವುದೇ, ಹೀಗಾದರೆ ಮಕ್ಕಳು ತಂದೆಯಲ್ಲಿ ಹೇಗೆ ನಿಲ್ಲಬೇಕು? ಇಷ್ಟೇ ಅಲ್ಲ. ಅವರು ಮೂಲಮೂತ್ರ ವಿಸರ್ಜನೆ ಮಾಡಿದರೆಂದರೆ ಇವನು ಥೂ ಥೂ ಎನ್ನುತ್ತಾ ಬಯ್ಯುತ್ತಿರುವನೇ ಹೊರತು ಮತ್ತೇನನ್ನೂ ಮಾಡಲಾರನು, ಆದರೆ ತಾಯಿಯೋ? ಮಕ್ಕಳು ಎಷ್ಟೇ ತಪ್ಪುಮಾಡಲಿ, ಹಿಂಸೆಮಾಡಲಿ, ಮಲಮೂತ್ರವಿಸರ್ಜನೆ ಮಾಡಲಿ, ಇನ್ನೇನೆ ಮಾಡಲಿ, ಎಲ್ಲವನ್ನೂ ಶಾಂತತೆಯಿಂದ ಸಹಿಸಿಕೊಂಡು ಅವುಗಳಿಗೆ ಉಪಚಾರಮಾಡಿ ಅವುಗಳನ್ನು ಬೆಳೆಸುವರು. ಇರಲಿ, ಮುಂದಲ ವಿಷಯವನ್ನು ನೋಡೋಣ.

ಆ ಮೇಲೆ ಹೀಗೆ ಹೆಂಗಸರು ಮನೆಯಲ್ಲಿ ನಿಲ್ಲಬೇಕಾದ್ದರಿಂದ ಗಂಡನೊಬ್ಬನೇ ಇಬ್ಬರ ಆಹಾರವನ್ನು ಸಂಪಾದಿಸಿಕೊಂಡು ಬರಬೇಕಾಯಿತು. ಈ ರೀತಿ ಅವನು ತಂದ ಆಹಾರವನ್ನು ಅವನೇ ಮನೆಗೆ ಬಂದು ಊಟಕ್ಕೆ ಸಿದ್ಧಮಾಡಿಕೊಳ್ಳುವುದೆಂದರೆ ಕಷ್ಟವೇ ಅಲ್ಲವೆ? ಅಲ್ಲದೆ ಹೆಂಗಸರು ಹಗಲೆಲ್ಲ ಮಕ್ಕಳನ್ನು ನೋಡಬೇಕಾದುದು ಇಲ್ಲ. ಆದುದರಿಂದ ಪುರುಷರು ತಂದ ಆಹಾರವನ್ನು ಊಟಕ್ಕೆ ಸಿದ್ಧಮಾಡುವುದು ಸ್ತ್ರೀಯರ ಕೆಲಸವೇ ಆಯಿತು. ಅಂತು ಒಟ್ಟಿನಲ್ಲಿ ಹೊರಗಿನ ಸಂಪಾದನೆಯ ಕೆಲಸವು ಗಂಡಸಿಗೂ, ಮನೆಯೊಳಗಿನ ಕೆಲಸಗಳೆಲ್ಲವೂ ಹೆಂಗಸಿನದೂ ಆಯಿತು. ಯಾವಾಗ ಗಂಡಸರು ಸಂಪಾದನೆಗೋಸ್ಕರ ಹೊರಗೆ ಹೋಗಬೇಕಾಯಿತೋ ಆಗ ಅವರಿಗೆ ಬೇಕಾದ ಮಳೆ ಬಿಸಿಲು ಗಾಳಿ ಇವುಗಳನ್ನೂ ಅಧಿಕವಾಗಿ ಸಹಿಸುವ ಶಕ್ತಿಯವನ್ನೂ ದೇವರು ಅವರಿಗೆ ಕೊಟ್ಟನು. ಆದರೆ ಮನೆಯಲ್ಲಿನ ಹೆಂಗಸರಿಗೆ ಇವು ಅಷ್ಟು ಬೇಕಿಲ್ಲವಾದುದರಿಂದ ಅವರಿಗೆ ಆ ಮೇಲಣ ಶಕ್ತಿಯನ್ನು ಹೆಚ್ಚಾಗಿ ಮಾಡಲಿಲ್ಲ. ಅಂದ ಮಾತ್ರಕ್ಕೆ ಅವರಿಗೇನೂ ಶಕ್ತಿಯಿಲ್ಲವೆಂದಲ್ಲ. ಅವುಗಳನ್ನು ಹೆಚ್ಚಾಗಿ ಸಹಿಸುವ ಶಕ್ತಿ ಇಲ್ಲವೆಂದರ್ಥ. ಈ ವಿಷಯದಲ್ಲಿ ನೋಡಿರಿ :-

ನೀವು ಒಬ್ಬೊಬ್ಬರೆ ಎಲ್ಲಿಗಾದರೂ ದೂರ ಪ್ರಯಾಣ ಮಾಡಬೇಕಾದರೆ ಯಾವುದಕ್ಕೂ ಲಕ್ಷಿಸದೆ ನಡೆದುಕೊಂಡೆ ಹೋಗುವಿರಿ. ಹೆಂಗಸರನ್ನ ಕರೆದುಕೊಂಡು ಹೋಗಬೇಕಾದರೆ ಮಾತ್ರ ಬಂಡಿಯನ್ನ ಮಾಡುತ್ತೀರಿ. ಅದರೊಳಗೂ ಬಿಸಿಲು, ಮಳೆ, ಗಾಳಿ ಇವುಗಳು ತಗಲಬಾರದೆಂದು ಕಮಾನುಗಾಡಿಯನ್ನೇ ಮಾಡುತ್ತೀರಿ. ಈ ವಿಷಯಗಳೆಲ್ಲವೂ ಎಲ್ಲರ ಅನುಭವದಲ್ಲಿಯೇ ಇದೆ. ಅದನ್ನ ಇಲ್ಲಿ ವಿವರಿಸಬೇಕಾದುದಿಲ್ಲ. ಈ ರೀತಿ ಪ್ರಪಂಚವು ಯಾವಾಗ್ಲೂ ಸರಾಗವಾಗಿ ನಡೆಯುವುದಕ್ಕೋಸ್ಕರ ಆಯಾ ಗುಣಗಳನ್ನು ದೇವರು ಅವರವರಲ್ಲಿ ಸ್ಥಿರವಾಗಿಟ್ಟನು. ಈ ರೀತಿ ಮಾಡಿದ ಮೇಲೆ ಸಂದರ್ಭವಶಾತ್ ಸ್ತ್ರೀಯರನ್ನು ಪುರುಷರು ಒಂದು ವೇಳೆ ಬಿಟ್ಟು ಬಿಡಬಹುದೆಂದು ಯೋಚಿಸಿ ಆ ರೀತಿ ಪುರುಷರು ಬಿಟ್ಟು ಹೋಗದಂತೆ ಸ್ತ್ರೀಯರಲ್ಲಿ ಕೆಲವು ಸ್ವಾಭಾವಿಕ ಶಕ್ತಿಗಳನ್ನುಂಟು ಮಾಡಿದನು. ಆ ಶಕ್ತಿಯು ಯಾವುದೆಂಬುದು ನಿಮಗೆ ಗೊತ್ತೇ ಇದೆ. ಅದನ್ನ ನಾನು ವಿವರಿಸಬೇಕಾದುದಿಲ್ಲ.

ಇದರಿಂದ ಪುರುಷನು ಸ್ತ್ರೀಯರನ್ನು ಬಿಟ್ಟು ಹೋಗದಂತಾಯಿತು. ಆದರೆ ನೀವು ಒಂದು ವಿಷಯವನ್ನ ಕೇಳಬಹುದು. ಆಯಾ ಗುಣಗಳನ್ನು ದೇವರು ಅವರವರಲ್ಲಿ ಸ್ಥಿರವಾಗಿಟ್ಟನೆಂದು ಹೇಳಿದಿರಲ್ಲ; ಇದು ನಿಶ್ಚಯವೇ? ಅವರಿಗೆ ಆ ಶಕ್ತಿಯು ಬರುವ ಹಾಗಿಲ್ಲವೆ? ಎಂದು ಕೇಳಬಹುದು, ನಿಜ. ಲೋಕದಲ್ಲಿ ಯಾವುದನ್ನಾದರೂ ಸರಿಯೆ. ಬಹಳ ಕಾಲ ವ್ಯವಸಾಯ ಮಾಡೋಣದರಿಂದ ಸಾಧಿಸಬಹುದು. ಉದಾಹರಣೆ :- ರೈತರ (ಶೂದ್ರರ) ಸ್ತ್ರೀಯರನ್ನು ನೋಡಿರಿ :- ಅವರು ಮಳೆ ಬಿಸಿಲು ಗಾಳಿಗಳಲ್ಲಿ ಹೊಲ ಗದ್ದೆಗಳಿಗೆ ಹೋಗಿ ಕೆಲಸ ಮಾಡುವರು. ಬಹಳ ದೂರಕ್ಕೆ ನಡೆಯಲೂ ಬಲ್ಲರು. ಆದರೆ ಇದರಿಂದ ಏನು ಹೇಳಿದ ಹಾಗಾಯಿತು? ಬಹಳ ಕಾಲದಿಂದಲೂ ಅವರು ಆ ರೀತಿ ಅಭ್ಯಾಸ ಮಾಡಿರುವುದರಿಂದ ಅವರಿಗೆ ಇತರರಿಗಿಂತಲೂ (ಬ್ರಾಹ್ಮಣರೇ ಮೊದಲಾದ ಮೇಲು ಜಾತಿ ಸ್ತ್ರೀಯರಿಗಿಂತಲೂ) ಕೊಂಚ ಹೆಚ್ಚು ಶಕ್ತಿಯುಂಟಾಗಿರುವುದೇನೋ ನಿಜ. ಆದರೆ ಅದೇ ಜಾತಿಯ ಶೂದ್ರನಿಗೂ, ಶೂದ್ರನ ಹೆಂಡತಿಗೆ ಹೋಲಿಸಿದರೆ ಅವನು ಮಾಡುವಷ್ಟು ಕಷ್ಟವಾದ ಕೆಲಸವನ್ನು ಮಾಡುವುದಾಗಲಿ, ಅವನು ಸಹಿಸುವಷ್ಟು ಮಳೆ, ಗಾಳಿ, ಬಿಸಿಲುಗಳನ್ನು ಸಹಿಸುವುದಾಗಲಿ ಸಾಧ್ಯವಿಲ್ಲವೇ ಇಲ್ಲ. ಸರಿ; ಅಂತೂ ಒಟ್ಟಿನಲ್ಲಿ ಏನು ಹೇಳಿದ ಹಾಗಾಯಿತು? ಎಷ್ಟಾದರೂ ಸರಿಯೆ; ಹೊರಗೆ ಕೆಲಸ ಮಾಡುವ ಶಕ್ತಿಯು ಗಂಡಸಿಗಿಂತಲೂ ಹೆಂಗಸಿಗೆ ಕಡಿಮೆಯೆಂದು ಹೇಳಿದ ಹಾಗಾಯಿತು. ಇದಕ್ಕೆ ಮೊದಲೇ ಮನೆಯಲ್ಲಿ ಹೆಂಗಸರು ಮಾಡತಕ್ಕ ಕೆಲಸವನ್ನು ಗಂಡಸರೂ ಮಾಡಲಾರರೆಂದು ತಿಳಿಸಿದೆ. ಒಟ್ಟಿನಲ್ಲಿ ಗಂಡಸರು ಮಾಡತಕ್ಕ ಕೆಲಸವನ್ನು ಹೆಂಗಸರೂ, ಹೆಂಗಸರು ಮಾಡತಕ್ಕ ಕೆಲಸವನ್ನು ಗಂಡಸರೂ ಮಾಡುವುದಕ್ಕಾಗುವುದಿಲ್ಲವೆಂಬುದು ನಿಷ್ಕರ್ಷೆಯಾಯಿತು. ಇವರಿಬ್ಬರ ಕೆಲಸದಲ್ಲಿ ಒಬ್ಬರ ಕೆಲಸವು ಸುಲಭ; ಮತ್ತೊಬ್ಬರ ಕೆಲಸವು ಕಷ್ಟವೆಂದು ಹೇಳುವಂತಿಲ್ಲ. ಇಬ್ಬರ ಕೆಲಸವೂ ಒಂದೇ. ಈ ವಿಷಯದಲ್ಲಿ ಇಬ್ಬರೂ ಒಂದು ದಿವಸ ಅದಲುಬದಲು ಮಾಡಿಕೊಂಡು ಕೆಲಸಕ್ಕೆ ಹೊರಟರೆಂದರೆ ಇಬ್ಬರಿಗೂ ಅವರವರ ಮನಸ್ಸಿನಲ್ಲಿ "ಸಾಕಪ್ಪ ಈ ಹಾಳುಗೋಳು ಕೆಲಸ; ನಮ್ಮ ಕೆಲಸವೇ ನಮಗೆ ಸರಿ" ಎನ್ನುವರು. ಇದು ಎಲ್ಲರ ಅನುಭವಕ್ಕೂ ಬಂದದ್ದೇ. ಇರಲಿ; ಕೆಲವರು ಹೇಳುವುದೇನೆಂದರೆ - ಮನೆಯಲ್ಲಿ ಹೆಂಗಸರಿಗೆ ಕೆಲಸ ಹೆಚ್ಚೆಂದೂ; ಕೆಲವರು ಗಂಡಸರಿಗೆ ಕೆಲಸ ಹೆಚ್ಚೆಂದೂ ಹೇಳುವರು; ಆದರೆ ಇವೆರಡೂ ಸುಳ್ಳೇನೆ. ಹೇಗೆಂದರೆ:- ಸದ್ಯಕ್ಕೆ ಉದಾಹರಣೆಗಾಗಿ ಒಬ್ಬ ಬಡ ಸ್ಕೂಲಿನಲ್ಲಿ ದಿನ ೧ಕ್ಕೆ ೫ ಘಂಟೆಗಳ ಕಾಲ ಕೆಲಸ ಮಾಡಬೇಕಾಗಿರುವುದಷ್ಟೇ? ಅವನ ಹೆಂಡತಿಗೂ ಸಹ ಮನೆಯಲ್ಲಿ ಅಷ್ಟೇ ಹೊತ್ತಿನ ಕೆಲಸವಿರುವುದು. ಅಂದರೆ ಬೆಳಿಗ್ಗೆ ಎದ್ದರೆ ಸಾರಿಸುವುದೂ, ಗುಡಿಸುವುದೂ, ಕಸಮುಸರೆಗಳು ಇತ್ಯಾದಿಗಳಿರುವುದರಿಂದ ೩ ಘಂಟೆ ಕಾಲದ ಕೆಲಸವೂ, ರಾತ್ರಿ ಈ ಕೆಲಸಗಳು ಕಮ್ಮಿಯಾಗಿರುವುದರಿಂದ ೨ ಘಂಟೆ ಕಾಲದ ಕೆಲಸವೂ ಆಗುವುದು. ಆದರೆ ಅದರೊಳಗೆ ಒಂದು ವಿಶೇಷವುಂಟು. ಅದೇನೆಂದರೆ-ಗಂಡಸರು ತಾವು ಮಾಡುವ ಕೆಲಸವನ್ನು ಅವಿಚ್ಛಿನ್ನವಾಗಿ ಮಾಡುತ್ತಾರೆ. ಹೆಂಗಸರು ಅಲ್ಲಿ ಕೂತು ಇಲ್ಲಿ ಕೂತು ಅವರಲ್ಲಿ ಇವರಲ್ಲಿ ಮಾತನಾಡುತ್ತ ಕೆಲಸ ಮಾಡುವರು. ಈ ರೀತಿ ಅವರು ಮಾಡುವುದರಿಂದ ನಮಗೆ ಹೆಂಗಸರಿಗೆ ಮೂರು ಹೊತ್ತೂ ಕೆಲಸವಿರುವ ಹಾಗೆ ತೋರುತ್ತದೆಯೆ ಹೊರತು ನಿಜವಾಗಿಯೂ ಹಗಲೆಲ್ಲ ಮಾಡಬೇಕಾದ ಕೆಲಸವಿಲ್ಲ. ಇನ್ನು ಕೆಲವರು

ಮಕ್ಕಳು ಮರಿಯಾದವರಿಗೆ ಒಂದು ಕಡೆ ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವುದೂ, ಮತ್ತೊಂದು ಕಡೆ ಇತರ ಮನೆಯ ಕೆಲಸಗಳನ್ನು ನೋಡಿಕೊಳ್ಳುವುದೂ ಎರಡೂ ಸೇರಿ ಹೆಚ್ಚು ಕಷ್ಟವೂ, ಹೆಚ್ಚು ಹೊತ್ತಿನ ಕೆಲಸವೂ ಆಗುವುದಿಲ್ಲವೆ? ಎಂದು ಕೇಳಬಹುದು. ಇದಕ್ಕೆ ಉತ್ತರ ಅದರ ಹಿಂದೆಯೆ ಇದೆ. ಮಕ್ಕಳಮರಿ ಹೆಚ್ಚಾದಂತೆಲ್ಲ ಇವನ ಮೊದಲಿನ ಸಂಪಾದನೆಯೂ ಸಾಲದೆ ಹೋಗುವುದು. ಆಗ ಇವನೂ ಸಹ ತಾನು ಸ್ಕೂಲಿನಲ್ಲಿ ಕೆಲಸ ಮಾಡುವುದರ ಜತೆಗೆ ಇತರ ಕಡೆಗಳಲ್ಲಿ ೨-೩ ಘಂಟೆಗಳ ಕಾಲ ಕೆಲಸ ಮಾಡಿ ಹೆಚ್ಚಿಗೆ ಹಣವನ್ನ ಸಂಪಾದಿಸಬೇಕಾಗುವುದು. ಮತ್ತೆ ಕೆಲವರು, ಬಡವರ ಮನೆಯಲ್ಲೇನೊ ನೀವು ಹೇಳುವ ಮಾತು ನಿಶ್ಚಯ. ಐಶ್ವರ್ಯವಂತರ ಮನೆಯಲ್ಲಿ ಗಂಡಸರಿಗೆ ಹೆಚ್ಚು ಕಷ್ಟವೆಂದು ಹೇಳುವರು. ಅದೂ ಸುಳ್ಳೇನೆ. ಹೇಗೆಂದರೆ, ಉದಾಹರಣೆಗಾಗಿ ಒಬ್ಬ ಕಾಲೇಜ್ ಪ್ರೊಫೆಸರನನ್ನು ಇಟ್ಟುಕೊಳ್ಳೋಣ. ಅವರು ಮಾಡುವ ಕೆಲಸವು ದಿನ ೧ಕ್ಕೆ ೨-೩ ಘಂಟೆಗಳ ಕಾಲ ಮಾತ್ರ. ಅವರ ಮನೆಯ ಹೆಂಗಸರಿಗಾದರೂ ಅಷ್ಟೇ ಹೊತ್ತಿನ ಕೆಲಸವೇ. ಹೇಗೆಂದರೆ:- ಎಷ್ಟಾದರೂ ಕಾಲೇಜ್ ಪ್ರೊಫೆಸರಾದುದರಿಂದ ಎಷ್ಟೇ ಕಮ್ಮಿಯೆಂದರೂ ೨೦೦/- ರೂಪಾಯಿಗಳಿಗೆ ಕಮ್ಮಿಯಾಗಿ ಬೇರೆ ಸಂಬಳವಿರುವುದಿಲ್ಲ. ಆದುದರಿಂದ ಅವರು ಮನೆಯಲ್ಲಿ ಹೆಂಗಸರಿಗೆ ಅನುಕೂಲವಾಗುವಂತೆ ಇತರ ಕೆಲಸಗಳಿಗೆ ಆಳುಗಳನ್ನೂ, ಅಡಿಗೆಯವರನ್ನೂ ಇಟ್ಟುಕೊಂಡೇ ಇರುತ್ತಾರೆ. ಅಂದ ಮಾತ್ರಕ್ಕೆ ಹೆಂಗಸರಿಗೇನೂ ಕೆಲಸವೇ ಇಲ್ಲವೆಂದು ಹೇಳಬಹುದು. ಆಳುಕಾಳುಗಳ ಮೇಲೂ ಮನೆಗೆ ಬಂದು ಹೋದ ಸಾಮಾನುಗಳ ವಿಷಯದಲ್ಲಿ, ಮನೆಗೆ ಬಂದು ಹೋಗುವವರ ಯೋಗಕ್ಷೇಮಗಳನ್ನೂ ವಿಚಾರಿಸುವುದು, ಈ ಕೆಲಸಗಳನ್ನಾದರೂ ಮಾಡಲೇ ಬೇಕಷ್ಟೆ? ಇದಕ್ಕಾದರೂ ೨-೩ ಘಂಟೆಗಳ ಕಾಲ ಕೆಲಸಮಾಡಲೇ ಬೇಕು. ಹೀಗೆಯೇ ಉಳಿದ ಅಧಿಕಾರಿಗಳು ಅಧಿಕಾರಿಗಳಲ್ಲದವರು ಇವರಿಗೆಲ್ಲ ಊಹಿಸಬಹುದು. ಅಂತೂ ಒಟ್ಟಿನಲ್ಲಿ ಗಂಡಸಿನ ಕೆಲಸವೂ, ಹೆಂಗಸಿನ ಕೆಲಸವೂ ಒಂದೇ ಸಮನಾದ, ಕಷ್ಟ-ಸುಖ, ಹೊತ್ತು-ಬೆಲೆ ಜವಾಬ್ದಾರಿಯುಳ್ಳವುಗಳೆಂದು ಹೇಳಿದ ಹಾಗಾಯಿತು. ಸ್ಥಿತಿಗಳೂ, ಗತಿಗಳೂ ಹೀಗಿರುವಾಗ, ಗಂಡಸು ಹೆಚ್ಚೋ, ಹೆಂಗಸು ಹೆಚ್ಚೋ? ಗಂಡಸಿಗೆ ಸ್ವಾತಂತ್ರ್ಯವೋ, ಹೆಂಗಸರಿಗೆ ಸ್ವಾತಂತ್ರ್ಯವೋ ಪುರುಷನು ಪರತಂತ್ರನೋ, ಸ್ತ್ರೀಯು ಪರತಂತ್ರಳೋ? ಏನೂ ಇಲ್ಲ. ಗಂಡಸರೂ, ಹೆಂಗಸರೂ ಇಬ್ಬರೂ ಒಂದೇ. ಮನೆಯೊಳಗೆ ಅವಳಿಗೆ ಸ್ವಾತಂತ್ರ್ಯ. ಹೊರಗೆ ಇವನಿಗೆ ಸ್ವಾತಂತ್ರ್ಯ. ಮನೆಯೊಳಗಿನ ವಿಷಯಕ್ಕೆ ಇವನು ಪರತಂತ್ರ. ಮನೆಯ ಹೊರಗಿನ ವಿಷಯಕ್ಕೆ ಅವಳು ಪರತಂತ್ರಳು. ಈ ಕ್ರಮವು ನಮ್ಮಲ್ಲಿ ಆದಿಯಿಂದಲೂ ಬಂದದ್ದೇ. ಈಗಲೂ ಇಬ್ಬರೂ ಸಮಾನರೆಂಬುದನ್ನು ತೋರಿಸತಕ್ಕ ನಮ್ಮಲ್ಲಿ ಬಳಿಕೆಯಲ್ಲಿರತಕ್ಕ ಪದಗಳನ್ನು ನೋಡಿರಿ.- ಇವನು ಗೃಹಸ್ಥ, ಅವಳು ಗೃಹಿಣಿ; ಇವನು ಪತಿ, ಅವಳು ಪತ್ನಿ, ಅವನು ಯಜಮಾನ; ಇವಳು ಯಜಮಾನಿತಿ; ಇವೆಲ್ಲಕ್ಕಿಂತಲೂ ಹೆಚ್ಚಿನದು ಇವನು ಅರ್ಧಾಂಗ, ಅವಳು ಅರ್ಧಾಂಗಿ.- ಹೀಗೆ ಇವುಗಳೆಲ್ಲವೂ ಏನನ್ನ ತೋರಿಸುತ್ತವೆ? ಇಬ್ಬರೂ ಒಂದೇ, ಯಾರೂ ಹೆಚ್ಚಿಲ್ಲ, ಕಮ್ಮಿಯಿಲ್ಲ ಎಂಬುದನ್ನಲ್ಲವೇ ತೋರಿಸುವುದು? ಇದೆಲ್ಲ ಇರಲಿ. ನಮ್ಮಲ್ಲಿರುವ ಒಂದು ಗಾದೆಯು ನಿಮಗೆಲ್ಲರಿಗೂ ಗೊತ್ತೇಯಿರಬಹುದಲ್ಲವೇ? "ಸಾವಿರ ರೂಪಾಯಿ ಸಂಬಳಗಾರನಾದರೂ ಮನೆಯ ಹೆಂಡತಿಗೆ ಕಾಸ್ತಾರ" ಎಂಬುದು. ಅಂದರೇನು? ಇವನು ೧೦೦೦ ರೂಪಾಯಿಗಳನ್ನು ಸಂಪಾದಿಸಿದ ಮಾತ್ರಕ್ಕೆ ಇವನಿಗೆ ಹೆಚ್ಚಿನ ಯೋಗ್ಯತೆಯೂ, ಇವನ ಹೆಂಡತಿಗೆ ಕಡಿಮೆ ಯೋಗ್ಯತೆಯೂ ಆದ ಹಾಗಾಗಲಿಲ್ಲವೆಂಬುದೇ. ಇದೆಲ್ಲ ಇರಲಿ. ಸದ್ಯಕ್ಕೆ ಈ ವಿಷಯವು ನಮ್ಮಲ್ಲಿ ಆಚರಣೆಯಲ್ಲಿದೆಯೆ ಇಲ್ಲವೆ ಎಂಬುದನ್ನು ನೋಡೋಣ. ಈಗ ನಿಮ್ಮನ್ನು ಒಂದು ವಿಷಯವನ್ನ ಕೇಳಬೇಕಾಗಿದೆ. ಈಗ ನೀವು ಇಷ್ಟು ಜನಗಳು ಸೇರಿರುವಿರಲ್ಲವೆ? ನಿಮ್ಮಗಳಲ್ಲಿ ಎಷ್ಟು ಮಂದಿ ಮನೆಗೆಲಸಗಳಲ್ಲಿ ನಿಮ್ಮಗಳ ಪತ್ನಿಯರಿಗೆ ಸ್ವಾತಂತ್ರ್ಯವನ್ನು ಕೊಡದೆಯೂ, ಅವರು ಹೇಳಿದಂತೆ ನಡೆಯದೆಯೂ ಇರತಕ್ಕವರು ನಿಜವಾಗಿಯೂ ಇದ್ದರೆ ನಿಸ್ಸಂಕೋಚವಾಗಿ ಕೈಯೆತ್ತಿರಿ! ನೋಡೋಣ!! (ಯಾರೂ ಕೈಯೆತ್ತುವುದಿಲ್ಲ).........ಇರಲಿ.......ಎಲ್ಲರೂ ಅವರವರ ಪತ್ನಿಯರಿಗೆ ಸ್ವಾತಂತ್ರ್ಯವನ್ನು ಕೊಟ್ಟಿರುವಂತೆಯೂ, ಅವರ ಮಾತಿನಂತೆ ನಡೆಯತಕ್ಕವರಾಗಿಯೂ ಇರುವಿರೆಂದು ಗೊತ್ತಾಯಿತು. ಆದರೆ ಈಗ ಮತ್ತೊಂದನ್ನು ಕೇಳಬೇಕಾಗಿದೆ. ಈಗ ನಿಮ್ಮಲ್ಲಿ ಎಷ್ಟು ಜನರು ಹೆಂಗಸರಿಗೆ ಸ್ವಾತಂತ್ರ್ಯವಿಲ್ಲವಲ್ಲಾ

ಎಂದು ಹೇಳಿ ಯೋಚಿಸಿ ಆ ನಂತರ ಮೇಲೆ ಹೇಳಿದಂತೆ ಸ್ವಾತಂತ್ರ್ಯವನ್ನು ಕೊಟ್ಟಿರುವಿರಿ? ಕೈಯೆತ್ತಿರಿ. (ಯಾರೂ ಎತ್ತುವುದಿಲ್ಲ) ನೋಡಿದಿರಾ? ಈಗ ನೀವೇ ನಿಮ್ಮನ್ನು ನೋಡಿಕೊಳ್ಳಿರಿ. ಈಗಲೂ ಎಲ್ಲರೂ ಸ್ವಾಭಾವಿಕವಾಗಿಯೇ ಮನೆಗೆಲಸಗಳಲ್ಲಿ ಸ್ವಾತಂತ್ರ್ಯವನ್ನು ಕೊಟ್ಟಿರುವಿರಲ್ಲವೆ? ಹೀಗಿದ್ದರೂ ಈಗಿನ ಕಾಲದಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂಬ ವಾದಪ್ರವಾದಗಳು ಏಕೆ? ಹುಟ್ಟಿರುವುದಕ್ಕೆ ಕಾರಣವೇನೆಂದು ಕೇಳಬಹುದು. ಸ್ತ್ರೀಪುರುಷರ ವಿವಾಹ ಪದ್ಧತಿಯು ಸ್ವೇಚ್ಛಾವಿಹಾರಕ್ಕೆ ಅವಕಾಶವಿಲ್ಲವೆಂಬುದಿಷ್ಟೇ ಕಾರಣವೆಂದು ನನಗೆ ತೋರುವುದು. ಆದರೆ ಈ ವಿಷಯಗಳಲ್ಲಿಯೂ ಈಗ ನಮ್ಮಲ್ಲಿರತಕ್ಕ ಪದ್ಧತಿಗಳಿಗೆ ಶಾಸ್ತ್ರೀಯವಾಗಿ (ಸೈಂಟಿಫಿಕ್ಕಾಗಿ) ನ್ಯಾಯವಾಗಿರುವುದೆಂಬುದನ್ನು ಮಿಕ್ಕ ಪದ್ಧತಿಗಳಿಂದ ಜನಾಂಗಕ್ಕೆ ಕೇಡುಂಟೆಂಬುದನ್ನ ರುಜುವಾತು ಮಾಡಬಹುದು. ಆದರೆ ಈಗಲೇ ಹೇಳುವುದೆಂದರೆ ಹೊತ್ತಾಯಿತು. ನೀವುಗಳೆಲ್ಲರೂ ಅಪೇಕ್ಷಿಸಿದರೆ ಮತ್ತೊಂದು ದಿವಸ ಆ ವಿಷಯಗಳನ್ನಿಟ್ಟುಕೊಳ್ಳೋಣ.

ಆದರೆ ಒಂದನ್ನು ಮಾತ್ರ ಚೆನ್ನಾಗಿ ಜ್ಞಾನಪವಿಟ್ಟುಕೊಳ್ಳಿರಿ. ಅದೇನೆನ್ನುವಿರಾ? **ಸ್ತ್ರೀಯರಿಗೆ ಎಷ್ಟು ಮಟ್ಟಿಗೆ ಸ್ವೇಚ್ಛಾವಿಹಾರಕ್ಕೆ ಅವಕಾಶವಿಲ್ಲವೋ, ಅಷ್ಟೇ ನಿರ್ಬಂಧವು ಪುರುಷರಿಗೂ ಸಹ ಇದ್ದೇ ಇರುವುದು. ಈ ನಿಯಮವನ್ನು ಯಾರು ಮೀರಿದರೂ ಅವರಿಗೆ ಜನನಿಂದೆಯೂ ತಪ್ಪುವುದಿಲ್ಲ. ಅವರುಗಳ ಏಳಿಗೆಗೂ ಹಾನಿ ತಟ್ಟುವುದು.** ಇಷ್ಟೆಲ್ಲಾ ಆದ ಮೇಲೆ ನಿಮ್ಮನ್ನು ನಾನು ಒಂದು ಮಾತನ್ನು ಮಾತ್ರ ಕೇಳಿಕೊಳ್ಳಬೇಕಾಗಿದೆ. ಅದನ್ನು ಎಲ್ಲರೂ ಪ್ರತಿಜ್ಞೆ ಮಾಡಬೇಕು. ಅದೇನೆಂದರೆ - ಯಾರಾದರೂ ಏನಾದರೂ ಹೇಳಿದರೆ ಅದು ಎಷ್ಟುಮಟ್ಟಿಗೆ ನಿಶ್ಚಯ ಅಥವಾ ಸುಳ್ಳು ಎಂಬುದನ್ನು ವಿವೇಚನೆ ಮಾಡಿ, ಆ ವಿಷಯಕ್ಕೆ ನಿಮ್ಮ ಸಮ್ಮತಿಯನ್ನು ಅಸ್ತು ಅಥವಾ ಇಲ್ಲವೆಂದು ಹೇಳಿರಿ. ಈ ರೀತಿ ನೀವು ನಡೆದುಕೊಂಡಿರೆಂದರೆ ಆ ದಿವಸವೇ ನಮ್ಮ ದೇಶವು ಎಲ್ಲಾ ವಿಷಯಗಳಲ್ಲಿಯೂ ಅಭಿವೃದ್ಧಿಗೆ ಬಂದಂತೆಯೇ ಸರಿ. ಇನ್ನು ನೀವು ನನ್ನಲ್ಲಿರತಕ್ಕ ಅಭಿಮಾನದ ಮಾತ್ರದಿಂದಲೆ ನನ್ನನ್ನು ಒಬ್ಬ ತಿಳಿದವನನ್ನಾಗಿ ಭಾವಿಸಿ ಈ ಮೇಲೆ ಹೇಳಿದ ವಿಷಯದಲ್ಲಿ ಉಪನ್ಯಾಸ ಮಾಡುವಂತೆ ಹೇಳಿದ್ದಕ್ಕೂ ಇಷ್ಟುಮಟ್ಟಿಗೆ ಶಾಂತತೆಯಿಂದ ಎಲ್ಲವನ್ನು ಕೇಳಿದ್ದಕ್ಕೋಸ್ಕರವೂ ನಿಮಗೆಲ್ಲರಿಗೂ ನನ್ನ ಕೃತಜ್ಞತೆಯನ್ನು ಅರ್ಪಿಸಿ ಸದ್ಯಕ್ಕೆ ನನ್ನ ಸ್ಥಾನವನ್ನು ಬಿಟ್ಟು ಪುನಃ ಸಂದರ್ಭವೊದಗಿದಾಗ ನಿಮ್ಮಲ್ಲಿ ಮಾತನಾಡುತ್ತೇನೆ.



## ಸಮಕಾಲೀನ

ಭಾರತದ ಸಂದರ್ಭದಲ್ಲಿ ಮಹಿಳಾ ವಿಶ್ವವಿದ್ಯಾಲಯ ಹೊಸದಲ್ಲವಾದರೂ ಕರ್ನಾಟಕದ ಮಟ್ಟಿಗೆ ಇದೊಂದು ಮಹತ್ವದ ಚರಿತ್ರಾರ್ಹ ಘಟನೆ. ಈ ಹಿನ್ನೆಲೆಯಲ್ಲಿ ಆರಂಭಗೊಳ್ಳಲಿರುವ ಮಹಿಳಾ ವಿಶ್ವವಿದ್ಯಾಲಯ ಕುರಿತಂತೆ ವಿದ್ವಾಂಸರ ಅಭಿಪ್ರಾಯಗಳನ್ನು ಟಿಪ್ಪಣಿ ರೂಪದಲ್ಲಿ ಸಂಗ್ರಹಿಸಿ ಓದುಗರಿಗೆ ಒದಗಿಸಬೇಕೆಂಬ ಆಕಾಂಕ್ಷೆಯೊಂದಿಗೆ ಸಂಚಿಕೆಯ ಸಮಕಾಲೀನ ಅಂಕಣವನ್ನು ರೂಪಿಸಲಾಯಿತು. ಆದರೆ ನಾವು ಕೇಳಿಕೊಂಡ ವಿದ್ವಾಂಸರಲ್ಲಿ ಹೆಚ್ಚಿನವರಾರು ಇದಕ್ಕೆ ಪ್ರತಿಕ್ರಿಯಿಸಲೇ ಇಲ್ಲ. ಇದಕ್ಕೆ ಕಾರಣಗಳು ಹಲವಿರಬಹುದು. ನಮ್ಮ ಕೋರಿಕೆಗೆ ಓಗೊಟ್ಟು ಕಳುಹಿಸಿದ ಡಾ. ಎಸ್.ಎಸ್. ಹಿರೇಮಠ ಹಾಗೂ ಪ್ರೊ. ಕೆ. ಎಸ್. ಉಮಾದೇವಿಯವರ ಎರಡು ಟಿಪ್ಪಣಿಗಳೊಂದಿಗೆ ಈಗಾಗಲೇ ಬೇರೆ ಪತ್ರಿಕೆಯಲ್ಲಿ ಪ್ರಕಟಗೊಂಡ ಟಿ.ಆರ್. ಚಂದ್ರಶೇಖರ ಹಾಗೂ ಡಾ. ಮಲ್ಲಿಕಾಘಂಟಿಯವರ ಬರಹಗಳ ಪರಿಷ್ಕೃತ ಟಿಪ್ಪಣಿಗಳನ್ನು ಈ ಅಂಕಣದಲ್ಲಿ ನೀಡಲಾಗಿದೆ. ಮಹಿಳಾ ವಿಶ್ವವಿದ್ಯಾಲಯವು ಅಧಿಕೃತವಾಗಿ ಈಗಾಗಲೇ ಕಾರ್ಯನಿರ್ವಹಿಸಲು ಆರಂಭಿಸಿದ್ದರೂ ಅದರ ಮುಂದಿನ ಬೆಳವಣಿಗೆಯ ಸಂದರ್ಭದಲ್ಲಿ ಈ ಟಿಪ್ಪಣಿಗಳು ಉಪಯುಕ್ತವಾಗಬಹುದೆಂದು ಭಾವಿಸುತ್ತೇವೆ.

- ಸಂ

# ಮಹಿಳಾ ವಿಶ್ವವಿದ್ಯಾಲಯ : ಒಂದು ಚರ್ಚೆ

**ಟಿ.ಆರ್. ಚಂದ್ರಶೇಖರ**

ಪ್ರಾದೇಶಿಕ ಅಸಮಾನತೆ ನಿವಾರಣೆ ಬಗ್ಗೆ ಅಧ್ಯಯನ ನಡೆಸಲು ಸರ್ಕಾರವು ನೇಮಿಸಿದ್ದ ಉನ್ನತಾಧಿಕಾರ ಸಮಿತಿಯ ಶಿಫಾರಸ್ಸಿನಂತೆ ಸರ್ಕಾರವು ಪ್ರಸ್ತುತ ವರ್ಷದಿಂದಲೇ ಬಿಜಾಪುರ ದಲ್ಲಿ ಮಹಿಳಾ ವಿಶ್ವವಿದ್ಯಾಲಯವನ್ನು ಆರಂಭಿಸುವ ತೀರ್ಮಾನ ತೆಗೆದುಕೊಂಡಿದೆ. ಇದೊಂದು ಸ್ವಾಗತಾರ್ಹ ಸಂಗತಿ. ಆದರೆ ವಿಚಿತ್ರವೆಂದರೆ ಮಹಿಳಾ ವಿಶ್ವವಿದ್ಯಾಲಯದ ಸ್ವರೂಪ ಹೇಗಿರಬೇಕು? ಅಲ್ಲಿ ಯಾವ ಬಗೆಯ ಶಿಕ್ಷಣವನ್ನು ಸಂಘಟಿಸಬೇಕು? ಅದರ ಆಶಯ ಏನಾಗಿರಬೇಕು? ಅದರ ದಿಕ್ಕು ದಿಶೆ ಯಾವುದಿರಬೇಕು? ಮುಂತಾದ ಗಂಭೀರ ವಿಷಯಗಳನ್ನು ಕುರಿತಂತೆ ರಾಜ್ಯದಲ್ಲಿ ಚರ್ಚೆ ನಡೆಯಬೇಕಾಗಿತ್ತು. ಆದರೆ ಅದಕ್ಕೆ ಪ್ರತಿಯಾಗಿ ಮಹಿಳಾ ವಿಶ್ವವಿದ್ಯಾಲಯಕ್ಕೆ ಯಾರ ಹೆಸರಿಡಬೇಕು ಎಂಬುದರ ಬಗ್ಗೆ ತೀವ್ರ ಚರ್ಚೆ ಪ್ರಾರಂಭವಾಗಿದೆ. ಕೆಲವು ಸಂಘ-ಸಂಸ್ಥೆಗಳು ಅದರ ಹೆಸರಿನ ಬಗ್ಗೆ ನಿರ್ಣಯ ಅಂಗೀಕರಿ

ಸುತ್ತಿವೆ. ಅದರ ತಾತ್ವಿಕ ಸ್ವರೂಪದ ಬಗ್ಗೆ ಯಾರೂ ಮಾತನಾಡುತ್ತಿಲ್ಲ. ಚರ್ಚೆ ತಪ್ಪುದಾರಿ ಹಿಡಿದು ಬಿಟ್ಟಿದೆ. ಪ್ರಸ್ತುತ ಪ್ರಬಂಧದಲ್ಲಿ ಮಹಿಳಾ ವಿಶ್ವವಿದ್ಯಾಲಯವನ್ನು ಕುರಿತಂತೆ ಕೆಲವು ಮಹತ್ವದ ಸೈದ್ಧಾಂತಿಕ ಸಂಗತಿಗಳನ್ನು ಚರ್ಚಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

೧. ಪದವಿಗಳನ್ನು ನೀಡುವುದು ಮಹಿಳಾ ವಿಶ್ವವಿದ್ಯಾಲಯದ ಕೆಲಸವಾಗಬಾರದು. ಏಕೆಂದರೆ ಧಂಡಿಯಾಗಿ ಕಾಲೇಜು-ವಿಶ್ವವಿದ್ಯಾಲಯಗಳು ಅಂತಹ ಕೆಲಸ ಮಾಡುತ್ತಿವೆ. ಇದು ಮೊಟ್ಟಮೊದಲನೆಯದಾಗಿ ತನ್ನದೇ ವಿಶಿಷ್ಟತೆ-ವಿಭಿನ್ನತೆಯನ್ನು ಕಂಡುಕೊಳ್ಳಬೇಕು-ಕಟ್ಟಿಕೊಳ್ಳಬೇಕು. ಹತ್ತರಲ್ಲಿ ಇದೂ ಒಂದು ಅಂತಾಗಬಾರದು. ಪದವಿ ನೀಡುವುದು ಬೇಡವೇ ಬೇಡವೆಂದು ಹೇಳುತ್ತಿಲ್ಲ. ಅದು ನಿಮಿತ್ತವಾಗಿ ಲಿಂಗ ಸಂಬಂಧಗಳನ್ನು ಕುರಿತ ಅಧ್ಯಯನವು ಇದರ ಕೇಂದ್ರ ಆಶಯವಾಗಬೇಕು. ಈಗಾಗಲೆ ತಿಳಿಸಿರುವಂತೆ ಪ್ರಾದೇಶಿಕ ಅಸಮಾನತೆಯನ್ನು ನಿವಾರಿಸುವ ಒಂದು ಸಾಧನವಾಗಿ ಇದು ಅಸ್ತಿತ್ವಕ್ಕೆ ಬರುತ್ತಿದೆ. ಅಭಿವೃದ್ಧಿಗೆ ಸಂಬಂಧಿಸಿದ ಪ್ರಾದೇಶಿಕ ಅಸಮಾನತೆಯ ಲಿಂಗ ಸಂಬಂಧಿ ಸ್ವರೂಪದ ಅಧ್ಯಯನಕ್ಕೆ ಇದು ಅವಕಾಶ ಮಾಡಿಕೊಡಬೇಕು.

೨. ಲಿಂಗ ಸಮಾನತೆಯನ್ನು ಸಾಧಿಸಿಕೊಳ್ಳುವ ದಿಶೆಯಲ್ಲಿ ಮಹಿಳಾ ವಿಶ್ವವಿದ್ಯಾಲಯವು ತನ್ನನ್ನು ತಾನು ತೊಡಗಿಸಿಕೊಳ್ಳಬೇಕಾಗುತ್ತದೆ. ಉತ್ತರ ಕರ್ನಾಟಕದಲ್ಲಿನ ಲಿಂಗ ಸಂಬಂಧಿ ಅಸಮಾನತೆಯ ಸ್ವರೂಪ ಹಾಗೂ ತೀವ್ರತೆಯು ದಕ್ಷಿಣ ಕರ್ನಾಟಕದಲ್ಲಿನ ಲಿಂಗ ಸಂಬಂಧಿ ಅಸಮಾನತೆಯ ಸ್ವರೂಪ ಹಾಗೂ ತೀವ್ರತೆಗಿಂತ ಭಿನ್ನವಾಗಿದೆ. ಮಹಿಳೆಯ ಬಗ್ಗೆ ಸಮಾಜದಲ್ಲಿ ಆಳವಾಗಿ ಬೇರೂರಿರುವ ಪೂರ್ವಗ್ರಹಗಳನ್ನು ತೊಡೆದು ಹಾಕುವ ದಿಶೆಯಲ್ಲಿ ಮಹಿಳಾ ವಿಶ್ವವಿದ್ಯಾಲಯವು ಕೆಲಸ ಮಾಡಬೇಕಾಗುತ್ತದೆ. ಪುರುಷಶಾಹಿ ವಿಚಾರ ಪ್ರಣಾಳಿಕೆಯನ್ನು ಪ್ರಶ್ನೆ ಮಾಡುವ, ತೊಡೆದು ಹಾಕುವ ಒಂದು ಮಹತ್ವದ ಉದ್ದೇಶಕ್ಕೆ ಅದು ತನ್ನನ್ನು ತಾನು ಮೀಸಲಿರಿಸಿಕೊಳ್ಳಬೇಕಾಗುತ್ತದೆ. ಈ ಕಾರಣಗಳಿಂದಾಗಿ ಅಕ್ಕಮಹಾದೇವಿಗಿಂತ ಕದಿರ ರೆಮ್ಮವ್ವೆಯ ಉಗ್ರ ಸ್ತ್ರೀವಾದವು ಮಹಿಳಾ ವಿಶ್ವವಿದ್ಯಾಲಯದ ಪ್ರಣಾಳಿಕೆಯಾಗಬಹುದಾಗಿದೆ. ‘ಎಲ್ಲ ಗಂಡಂದಿರು ಮೇಲೆ, ನನ್ನ ಗಂಡ ಕೆಳಗೆ, ನಾ ಮೇಲೆ’ ಎನ್ನುವ ಆಕೆ ಸಮಾಜದಲ್ಲಿನ ಪುರುಷಶಾಹಿ ಯಾಜಮಾನ್ಯವನ್ನು ತಿರುವು ಮುರುವು ಮಾಡುವ ರಾಜಕಾರಣವನ್ನು ಪ್ರತಿನಿಧಿಸುವ ಅವಳ ವೈಚಾರಿಕ ಆಕೃತಿಯಿಂದ ಮಹಿಳಾ ವಿಶ್ವವಿದ್ಯಾಲಯವು ಪ್ರೇರಣೆ ಪಡೆದುಕೊಳ್ಳಬಹುದಾಗಿದೆ. ಲಿಂಗ ಸಂಬಂಧಗಳ ಬಹುರೂಪಿ ಮುಖಗಳನ್ನು ಜೈವಿಕ ನಿಯತಿಯ ಚೌಕಟ್ಟಿನಲ್ಲಿ ಪರಿಭಾವಿಸಿಕೊಳ್ಳುವ ಪರಿ ರೂಢಿಯಲ್ಲಿದೆ. ಜೈವಿಕ ನಿಯತಿಯ ನೆಲೆಯಿಂದ ಲಿಂಗಸಂಬಂಧಗಳನ್ನು ಪರಿಭಾವಿಸಿಕೊಳ್ಳುವ ಪರಿಗೆ ಪರಂಪರೆ ಹಾಗೂ ವಿಜ್ಞಾನ ಎರಡೂ ಆಧಾರವನ್ನೊದಗಿಸುತ್ತಿವೆ. ಆದರೆ ಕರ್ನಾಟಕದಲ್ಲಿ ಇದನ್ನು ೧೨ನೆಯ ಶತಮಾನದಲ್ಲೇ ಪ್ರಶ್ನಿಸಲಾಗಿದೆ. ಲಿಂಗ ಸಂಬಂಧಗಳನ್ನು ಸಾಮಾಜಿಕ ನೆಲೆಯಲ್ಲಿ ಪರಿಭಾವಿಸಿಕೊಳ್ಳುವ ಒಂದು ವಿಚಾರಧಾರೆ ೮೦೦ ವರ್ಷಗಳಿಂದಲೂ ನಾಡಿನಲ್ಲಿ ಹರಿದುಕೊಂಡು ಬಂದಿದೆ. ಲಿಂಗ ಸಂಬಂಧಗಳನ್ನು ಸಾಮಾಜಿಕ ಪರಿಪ್ರೇಕ್ಷ್ಯೆಯಲ್ಲಿ ಅಧ್ಯಯನ ನಡೆಸುವ ಕೇಂದ್ರವಾಗಿ ಮಹಿಳಾ ವಿಶ್ವವಿದ್ಯಾಲಯ ರೂಪಗೊಳ್ಳಬೇಕಾದ ಅಗತ್ಯವಿದೆ. ಲಿಂಗ

ಸಂಬಂಧಗಳ ಜಾತಿ ಸ್ವರೂಪ, ವರ್ಗ ಸ್ವರೂಪ, ಪ್ರಾದೇಶಿಕ ಸ್ವರೂಪ, ಗ್ರಾಮೀಣ ಸ್ವರೂಪ, ವಲಸೆಯ ಸ್ವರೂಪಗಳನ್ನು ಕುರಿತಂತೆ ಅನುಸಂಧಾನ ಅಲ್ಲಿ ನಡೆಯುವಂತಾಗಬೇಕು. ಲಿಂಗ ಸಂಬಂಧಿ ತಾರತಮ್ಯ-ಪೂರ್ವಗ್ರಹ-ಏಣಿಶ್ರೇಣಿಗಳು ಹುಟ್ಟಿದ ಸಂಗತಿಗಳಲ್ಲ, ಅವು ಕಟ್ಟಿಕೊಂಡ ಸಂಗತಿಗಳು ಎಂಬುದನ್ನು ಮಹಿಳಾ ವಿಶ್ವವಿದ್ಯಾಲಯವು ಅನಾವರಣಗೊಳಿಸುವಂತಾಗಬೇಕು.

೩. ದುಡಿಮೆಯನ್ನು ಲಿಂಗ ಸಂಬಂಧಿ ನೆಲೆಗಳಿಂದ ಪರಿಭಾವಿಸಿಕೊಳ್ಳುವ-ನಿರ್ವಚಿಸುವ ಉದ್ದೇಶವನ್ನು ಮಹಿಳಾ ವಿಶ್ವವಿದ್ಯಾಲಯವು ತನ್ನ ಮುಂದಿರಿಸಿಕೊಳ್ಳಬೇಕಾಗುತ್ತದೆ. ಇಂದು ಮಹಿಳೆಯರು ಸಮಾಜದಲ್ಲಿ ತಾರತಮ್ಯಗಳಿಗೆ, ನಿರ್ಲಕ್ಷ್ಯಕ್ಕೆ, ಶೋಷಣೆಗೆ, ಹಿಂಸೆಗೆ, ತುಳಿತಕ್ಕೆ ಒಳಗಾಗಿದ್ದರೆ ಅದಕ್ಕೆ ಮುಖ್ಯ ಕಾರಣ ದುಡಿಮೆಯ ಪುರುಷಶಾಹಿ ಸ್ವರೂಪದಲ್ಲಿದೆ. ಸಮಾಜ ವಿಜ್ಞಾನಗಳೂ ಸಹ ದುಡಿಮೆಯನ್ನು ಪುರುಷಶಾಹಿ ನೆಲೆಯಿಂದಲೆ ಪರಿಭಾವಿಸಿಕೊಂಡು ಬರುತ್ತಿವೆ. ಅತ್ಯಂತ ದೊಡ್ಡ ಸಂಖ್ಯೆಯಲ್ಲಿ ಮಹಿಳೆಯರು ದುಡಿಮೆ ಸಂಪಾದನೆಯಲ್ಲಿ ನಿರತರಾಗಿದ್ದರೂ ಅವರ ಕಾರ್ಯ ನೈಸರ್ಗಿಕವೆಂದೂ, ಸಂಗೋಪನೆಯೆಂದೂ ಅವರ ಕಾರ್ಯಕ್ಷೇತ್ರ ಮನೆ-ಮಕ್ಕಳು-ಸಂಸಾರ-ಗಂಡನೆಂದೂ ಪ್ರತಿಪಾದಿಸಿಕೊಂಡು ಬರಲಾಗಿದೆ. ಸಂಪಾದನೆಯೇನಿದ್ದರೂ ಪುರುಷರದ್ದು. ಸಂಗೋಪನೆಯೇನಿದ್ದರೂ ಮಹಿಳೆಯರದ್ದು ಎಂಬ ಲಿಂಗಸಂಬಂಧಿ ಶ್ರಮ ವಿಭಜನೆಯು ಮಹಿಳಾ ವಿಶ್ವವಿದ್ಯಾಲಯದಲ್ಲಿ ಅಧ್ಯಯನದ ವಸ್ತುವಾಗಬೇಕು.

## ಮಹಿಳೆಯರ ಸಾಪೇಕ್ಷ ಪ್ರಮಾಣ

ಕೋಷ್ಟಕ-೧

| ಕ್ರ. ಸಂ. | ವಿವರಗಳು | ದಶಕಗಳು | | |
|---|---|---|---|---|
| | | ೧೯೮೧ | ೧೯೯೧ | ೨೦೦೧ |
| ೧. | ಒಟ್ಟು ಜನಸಂಖ್ಯೆಯಲ್ಲಿ ಮಹಿಳೆಯರ ಪ್ರಮಾಣ ಶೇಕಡ | ೪೯.೦೪ | ೪೮.೯೭ | ೪೯.೦೮ |
| ೨. | ಒಟ್ಟು ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ಶೇಕಡ | ೩೦.೮೭ | ೩೪.೨೭ | ೩೫.೦೭ |
| ೩. | ಒಟ್ಟು ಕೃಷಿಕೂಲಿಕಾರರಲ್ಲಿ ಮಹಿಳೆಯರ ಪ್ರಮಾಣ ಶೇಕಡ | ೪೬.೯೪ | ೪೯.೭೫ | ೫೮.೧೯ |
| ೪. | ಅಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣ | ೩೫.೧೫ | ೪೧.೭೦ | ೪೨.೧೦ |
| ೫. | ಅನಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣ | ೬೦.೮೫ | ೬೨.೦೦ | ೬೩.೪೦ |
| ೬. | ದುಡಿಮೆ ಸಹಭಾಗಿತ್ವ ಪ್ರಮಾಣ ಮಹಿಳೆ | ೨೫.೩೩ | ೨೯.೩೯ | ೩೧.೮೮ |

## ಮಹಿಳೆಯರ ಸಂಖ್ಯೆಯ ಬೆಳವಣಿಗೆ ಪ್ರಮಾಣ

ಕೋಷ್ಟಕ-೨

| ಕ್ರ. ಸಂ. | ವಿವರಗಳು | ದಶಕಗಳು | |
|---|---|---|---|
| | | ೧೯೮೧-೧೯೯೧ | ೧೯೯೧-೨೦೦೧ |
| ೧. | ಒಟ್ಟು ಜನಸಂಖ್ಯೆಯ ಬೆಳವಣಿಗೆ ಪ್ರಮಾಣ | | |
| | ಮಹಿಳೆಯರು | ೨೦.೯೩ | ೧೭.೪೯ |
| | ಪುರುಷರು | ೨೧.೨೯ | ೧೭.೦೧ |
| ೨. | ದುಡಿಮೆಗಾರ ಬೆಳವಣಿಗೆ ಪ್ರಮಾಣ | | |
| | ಮಹಿಳೆಯರು | ೪೦.೩೧ | ೨೭.೪೪ |
| | ಪುರುಷರು | ೨೦.೧೭ | ೨೩.೦೩ |
| ೩. | ಕೃಷಿ ಕೂಲಿಕಾರರ ಬೆಳವಣಿಗೆ ಪ್ರಮಾಣ | | |
| | ಮಹಿಳೆಯರು | ೪೪.೯೮ | ೪೫.೨೫ |
| | ಪುರುಷರು | ೨೯.೫೫ | ೩೩.೨೬ |

ಮೂಲ : ಜನಗಣತಿ ವರದಿಗಳು ೧೯೯೧ ಮತ್ತು ೨೦೦೧

**ದುಡಿಮೆಯ ಮಹಿಳೀಕರಣ**

ಕೋಷ್ಟಕ-೧ ಮತ್ತು ಕೋಷ್ಟಕ-೨ರಲ್ಲಿ ಕರ್ನಾಟಕದ ಜನಸಂಖ್ಯೆಯಲ್ಲಿ, ದುಡಿಮೆಗಾರರಲ್ಲಿ, ಕೃಷಿಕೂಲಿಕಾರರಲ್ಲಿ ಹಾಗೂ ಅಕ್ಷರಸ್ಥ-ಅನಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣವು ೧೯೮೧ ರಿಂದ ೨೦೦೧ರ ಅವಧಿಯಲ್ಲಿ ಹೇಗೆ ಬದಲಾಗಿದೆ ಎಂಬುದನ್ನು ಮತ್ತು ೧೯೮೧-೯೧ ಮತ್ತು ೧೯೯೧-೨೦೦೧ -ಎರಡು ದಶಕಗಳಲ್ಲಿ ಜನಸಂಖ್ಯೆಯಲ್ಲಿ, ದುಡಿಮೆಗಾರರಲ್ಲಿ ಹಾಗೂ ಕೃಷಿಕೂಲಿಕಾರರಲ್ಲಿ ಮಹಿಳೆಯರ ಪ್ರಮಾಣವು ಹೇಗೆ ಪುರುಷರ ಪ್ರಮಾಣಕ್ಕಿಂತ ಅಧಿಕವಾಗಿ ಬೆಳೆಯುತ್ತಿದೆ ಎಂಬುದನ್ನು ತೋರಿಸಲಾಗಿದೆ. ಈ ಎರಡೂ ಕೋಷ್ಟಕಗಳು ಕರ್ನಾಟಕದಲ್ಲಿ ದುಡಿಮೆಯು ಮಹಿಳೀಕರಣಕ್ಕೆ ಒಳಗಾಗಿರುವ ಪರಿಯನ್ನು ದೃಢಪಡಿಸುತ್ತವೆ.

ಈ ಎರಡೂ ಕೋಷ್ಟಕಗಳಲ್ಲಿ ನಿರೂಪಿತವಾಗಿರುವ ಕೆಲವು ಮುಖ್ಯ ತಥ್ಯಗಳನ್ನು ಹೀಗೆ ಹಿಡಿದಿಡಬಹುದು.

* ಜನಸಂಖ್ಯೆಯಲ್ಲಿ ಮಹಿಳೆಯರ ಪ್ರಮಾಣವು ೧೯೮೧ ರಿಂದ ೨೦೦೧ರ ಅವಧಿಯಲ್ಲಿ ಸುಮಾರು ಶೇ. ೪೯ರ ಮಟ್ಟದಲ್ಲಿ ಸ್ಥಿರವಾಗಿದೆ.

* ಒಟ್ಟು ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣವು ೧೯೮೧ರಲ್ಲಿ ಶೇ. ೩೦.೮೭ರಷ್ಟಿದ್ದುದು ೧೯೯೧ರಲ್ಲಿ ಶೇ. ೩೪.೨೭ಕ್ಕೆ ಮತ್ತು ೨೦೦೧ರಲ್ಲಿ ಶೇ. ೩೫.೦೭ಕ್ಕೆ ಏರಿಕೆಯಾಗಿದೆ.

* ಇದೇ ರೀತಿ ಕೃಷಿಕೂಲಿಕಾರರಲ್ಲಿ ಮಹಿಳೆಯರ ಪ್ರಮಾಣವು ೧೯೮೧ರಲ್ಲಿ ಶೇ. ೪೬.೯೪ರಷ್ಟಿತ್ತು. ಇದು ೧೯೯೧ರಲ್ಲಿ ಶೇ. ೪೯.೭೫ರಷ್ಟಾಯಿತು. ಇತ್ತೀಚೆಗೆ ನಡೆದ ೨೦೦೧ರ ಜನಗಣತಿ ಪ್ರಕಾರ ಕೃಷಿಕೂಲಿಕಾರರಲ್ಲಿ ಮಹಿಳೆಯರ ಪ್ರಮಾಣ ಶೇ. ೫೮.೧೯ರಷ್ಟಾಗಿದೆ.

* ಒಟ್ಟು ದುಡಿಮೆಗಾರರ ಸಂಖ್ಯೆಯ ಬೆಳವಣಿಗೆಗೆ ಸಂಬಂಧಿಸಿದಂತೆ, (೧೯೮೧-೯೧ ಮತ್ತು ೧೯೯೧-೨೦೦೧) - ಎರಡೂ ದಶಕಗಳಲ್ಲಿ ಮಹಿಳಾ ದುಡಿಮೆಗಾರರ ಸಂಖ್ಯೆಯ ಬೆಳವಣಿಗೆ ಪ್ರಮಾಣವು (ಕ್ರಮವಾಗಿ ಶೇ. ೪೦.೩ ಮತ್ತು ಶೇ. ೨೭.೪೪) ಪುರುಷ ದುಡಿಮೆಗಾರರ ಸಂಖ್ಯೆಯ ಬೆಳವಣಿಗೆ ಪ್ರಮಾಣಕ್ಕಿಂತ (ಕ್ರಮವಾಗಿ ಶೇ. ೨೦.೧೭ ಮತ್ತು ಶೇ. ೨೩.೦೩) ಅಧಿಕವಾಗಿದೆ.

* ಒಟ್ಟು ಕೃಷಿ ಕೂಲಿಕಾರರ ಸಂಖ್ಯೆಯ ಬೆಳವಣಿಗೆಗೆ ಸಂಬಂಧಿಸಿದಂತೆ, ೧೯೮೧-೯೧ ಮತ್ತು ೧೯೯೧-೨೦೦೧ ಎರಡೂ ದಶಕಗಳಲ್ಲಿ ಮಹಿಳಾ ಕೃಷಿಕೂಲಿಕಾರರ ಸಂಖ್ಯೆಯ ಬೆಳವಣಿಗೆ ಪ್ರಮಾಣವು (ಕ್ರಮವಾಗಿ ಶೇ. ೪೪.೯೮ ಮತ್ತು ಶೇ. ೪೫.೨೫) ಪುರುಷ ಕೃಷಿಕೂಲಿಕಾರರ ಸಂಖ್ಯೆಯ ಬೆಳವಣಿಗೆ ಪ್ರಮಾಣಕ್ಕಿಂತ (ಕ್ರಮವಾಗಿ ಶೇ. ೨೯.೫೫ ಮತ್ತು ಶೇ. ೩೩.೨೬) ಅಧಿಕವಾಗಿದೆ.

* ದುಡಿಮೆಯು ಮಹಿಳೀಕರಣಕ್ಕೆ ಒಳಗಾದ ಪರಿಣಾಮವಾಗಿ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣವು ೧೯೮೧ರಲ್ಲಿ ಶೇ. ೨೫.೩೩ ಇದ್ದುದು ೧೯೯೧ರಲ್ಲಿ ಶೇ. ೨೯.೩೯ಕ್ಕೆ ಏರಿತು. ಮುಂದೆ ೨೦೦೧ರಲ್ಲಿ ಅದು ಶೇ. ೩೧.೮೮ಕ್ಕೇರಿದೆ.

* ಒಟ್ಟು ದುಡಿಮೆಗಾರರಲ್ಲಿರುವ ಮಹಿಳೆಯರ ಪ್ರಮಾಣಕ್ಕಿಂತ ಕೃಷಿಕೂಲಿಕಾರರಲ್ಲಿರುವ ಮಹಿಳೆಯರ ಪ್ರಮಾಣ ಅಧಿಕವಾಗಿದೆ. ಒಟ್ಟು ಮಹಿಳಾ ದುಡಿಮೆಗಾರರ ಸಂಖ್ಯೆಯ ಬೆಳವಣಿಗೆ ಪ್ರಮಾಣವು ಅಧಿಕವಾಗಿದೆ. ಇದು ದುಡಿಮೆಯು ಮಹಿಳೀಕರಣಕ್ಕೆ ಹಾಗೂ ಮಹಿಳೆಯರ ದುಡಿಮೆಯು ಅನಿಯತತನ(Casualisation)ಕ್ಕೆ ಒಳಗಾಗಿರುವುದನ್ನು ತೋರಿಸುತ್ತದೆ.

**ಲಿಂಗಸಂಬಂಧಗಳ ಪ್ರಾದೇಶಿಕ ಆಯಾಮಗಳು**

ಕೋಷ್ಟಕ-೩ರಲ್ಲಿ ಕರ್ನಾಟಕದಲ್ಲಿ ದುಡಿಮೆಯ ಲಿಂಗಸಂಬಂಧಗಳ ಪ್ರಾದೇಶಿಕ ಸ್ವರೂಪವನ್ನು ಚಿತ್ರಿಸಲಾಗಿದೆ. ಇದು ಅನೇಕ ದೃಷ್ಟಿಯಿಂದ ಕುತೂಹಲಕಾರಿಯಾದುದಾಗಿದೆ. ಮಹಿಳಾ ವಿಶ್ವವಿದ್ಯಾಲಯವು ಅಗತ್ಯವಾಗಿ ಮಹಿಳೆಯರ ದುಡಿಮೆಯ ಪ್ರಾದೇಶಿಕ ಆಯಾಮಗಳನ್ನು ಅಧ್ಯಯನಕ್ಕೆ ಒಳಪಡಿಸಬೇಕಾಗುತ್ತದೆ. ಈಗಾಗಲೆ ಹೇಳಿರುವಂತೆ ಪ್ರಾದೇಶಿಕ ಅಸಮಾನತೆಯನ್ನು ನಿವಾರಿಸುವ ದಿಶೆಯಲ್ಲಿ ಡಾ. ಡಿ.ಎಂ.ನಂಜುಂಡಪ್ಪ ಸಮಿತಿಯ ಶಿಫಾರಿಸ್ಸಿನಂತೆ ಮಹಿಳಾ ವಿಶ್ವವಿದ್ಯಾಲಯವು ಬಿಜಾಪುರದಲ್ಲಿ ಪ್ರಾರಂಭ ವಾಗುತ್ತಿದೆ. ಆದ್ದರಿಂದ ಈ ಮಹಿಳಾ ವಿಶ್ವವಿದ್ಯಾಲಯವು ಲಿಂಗಸಂಬಂಧಗಳ ಪ್ರಾದೇಶಿಕ ಆಯಾಮ ಕುರಿತ ಅನ್ವೇಷಣೆಯನ್ನು ತನ್ನ ಅಧ್ಯಯನದ ಕೇಂದ್ರ ವಿಷಯ ವಸ್ತುವನ್ನಾಗಿ ಮಾಡಿಕೊಳ್ಳಬೇಕಾಗುತ್ತದೆ.

ಕೋಷ್ಟಕ ೩

ದುಡಿಮೆಯ ಲಿಂಗಸಂಬಂಧಗಳ ಪ್ರಾದೇಶಿಕ ಸ್ವರೂಪ

| ಕ್ರ. ಸಂ. | ವಿವರಗಳು | ದಶಕಗಳು | |
|---|---|---|---|
| | | ೧೯೮೧ | ೧೯೯೧-೨೦೦೧ |
| ೧. | ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಜನ ಸಂಖ್ಯೆಯಲ್ಲಿ ಮಹಿಳೆಯರ ಪ್ರಮಾಣ | ೫೦.೮೫ | ೪೯.೧೭ |
| ೨. | ಉಳಿದ ಕರ್ನಾಟಕದ ಜನಸಂಖ್ಯೆಯಲ್ಲಿ ಮಹಿಳೆಯರ ಪ್ರಮಾಣ | ೫೧.೦೭ | ೪೯.೦೫ |
| ೩. | ಹೈದರಾಬಾದ್ ಕರ್ನಾಟಕ ಪ್ರದೇಶದ ಒಟ್ಟು ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ | ೩೮.೮೮ | ೩೮.೮೯ |
| ೪. | ಉಳಿದ ಕರ್ನಾಟಕದ ಒಟ್ಟು ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ | ೩೩.೨೭ | ೩೪.೨೬ |
| ೫. | ಹೈದರಾಬಾದ್ ಕರ್ನಾಟಕ ಪ್ರದೇಶದ ಕೃಷಿಕೂಲಿ ಕಾರರಲ್ಲಿ ಮಹಿಳೆಯರ ಪ್ರಮಾಣ | ೫೫.೭೭ | ೬೧.೭೪ |
| ೬. | ಉಳಿದ ಕರ್ನಾಟಕದ ಕೃಷಿಕೂಲಿಕಾರರಲ್ಲಿ ಮಹಿಳೆಯರ ಪ್ರಮಾಣ | ೪೭.೩೯ | ೬೦.೯೧ |
| ೭. | ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ | ೩೪.೨೬ | ೨೪.೨೭ |
| ೮. | ಉಳಿದ ಕರ್ನಾಟಕದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ | ೨೮.೩೬ | ೩೧.೩೫ |

ಈಗಾಗಲೆ ಸ್ಪಷ್ಟವಾಗಿರುವಂತೆ ಕರ್ನಾಟಕದಲ್ಲಿ ದುಡಿಮೆಯು ಮಹಿಳೀಕರಣಕ್ಕೆ ಒಳಗಾಗಿರುವುದನ್ನು ಕೋಷ್ಟಕ-೧ ಮತ್ತು ೨ರಲ್ಲಿತೋರಿಸಲಾಗಿದೆ. ಈ ದುಡಿಮೆಯ ಮಹಿಳೀಕರಣ ಪ್ರಕ್ರಿಯೆಯು ರಾಜ್ಯದ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಉಳಿದ ಕರ್ನಾಟಕಕ್ಕಿಂತ ತೀವ್ರಗತಿಯಲ್ಲಿ ನಡೆದಿರುವುದನ್ನು ಕೋಷ್ಟಕ-೩ ತೋರಿಸುತ್ತದೆ.

ದುಡಿಮೆಗಾರರು ಮತ್ತು ಕೃಷಿ ಕಾರ್ಮಿಕರಿಗೆ ಸಂಬಂಧಿಸಿದಂತೆ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಮಹಿಳೆಯರ ಪ್ರಮಾಣವು ರಾಜ್ಯಮಟ್ಟದಲ್ಲಿರುವ ಮಹಿಳೆಯರ ಪ್ರಮಾಣಕ್ಕಿಂತ ಅಧಿಕವಾಗಿದೆ. ಮಹಿಳೆಯರ ದುಡಿಮೆ ಸಹಭಾಗಿತ್ವವು ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ೧೯೯೧ರಲ್ಲಿ ಶೇ. ೩೪.೨೬ರಷ್ಟಿದ್ದು ೨೦೦೧ರಲ್ಲಿ ಶೇ. ೩೪.೨೭ರಷ್ಟಾಗಿದೆ. ಆದರೆ ಎರಡು ಕಾಲಘಟ್ಟದಲ್ಲಿ ಉಳಿದ ಕರ್ನಾಟಕದಲ್ಲಿ ಅದು ಕೇವಲ ಕ್ರಮವಾಗಿ ಶೇ. ೨೮.೩೬ ಮತ್ತು ಶೇ. ೩೧.೩೫ರಷ್ಟಾಗಿದೆ.

ಮೇಲ್ಕಂಡ ಸಂಗತಿಗಳೆಲ್ಲವೂ ಜನಗಣತಿ ವರದಿಗಳನ್ನು ಆಧರಿಸಿದ್ದಾವೆ. ವಾಸ್ತವವಾಗಿ ಅಲ್ಲಿ ಏನಿದೆ ಎಂಬುದನ್ನು ಅಧ್ಯಯನ ಕ್ಷೇತ್ರಕಾರ್ಯಗಳಿಂದ ಮೇಲೆ ರೂಪಿಸಲಾಗಿರುವ ಪ್ರಮೇಯಗಳನ್ನು ದೃಢಪಡಿಸಬೇಕಾಗುತ್ತದೆ. ಮಹಿಳಾ ವಿಶ್ವವಿದ್ಯಾಲಯವು ಇಂತಹ ಅಧ್ಯಯನಗಳನ್ನು ನಡೆಸುವ ಕೇಂದ್ರವಾಗಬೇಕು. ದುಡಿಮೆಯ ಮಹಿಳೀಕರಣ ಹಾಗೂ ಮಹಿಳಾ ದುಡಿಮೆಯ ಅನಿಯತತನದ ಹಿಂದಿನ ಸಾಮಾಜಿಕ-ಆರ್ಥಿಕ-ರಾಜಕೀಯ-ಸಾಂಸ್ಕೃತಿಕ ಸಂಗತಿಗಳನ್ನು ಹಿಡಿದಿಡಬೇಕಾಗಿದೆ. ಇಲ್ಲಿ ಇನ್ನೂ ಒಂದು ಸಂಕೀರ್ಣ ಸಂಗತಿಯಿದೆ. ಅದೇನೆಂದರೆ ದುಡಿಮೆ ಕ್ಷೇತ್ರಕ್ಕೆ ಮಹಿಳೆಯರು ಹೆಚ್ಚು ಹೆಚ್ಚು ಪ್ರವೇಶಿಸುತ್ತಿರುವುದನ್ನು ಬಿಡುಗಡೆಯ-ವಿಮೋಚನೆಯ ಸೂಚಿಯಾಗಿ ಕಾಣಲಾಗುತ್ತಿದೆ. ಆದರೆ ವಾಸ್ತವ ಸಂಗತಿಯೇನೆಂದರೆ ದುಡಿಮೆಯ ಮಹಿಳೀಕರಣವು ಅಸಂಘಟಿತ ಹಾಗೂ ಅನಿಯತ ನೆಲೆಯಲ್ಲಿ ನಡೆಯುತ್ತಿದೆ. ಇದನ್ನು ಮಹಿಳೆಯರ ವಿಮೋಚನೆಯ ಸೂಚಿಯಾಗಿ ಪರಿಗಣಿಸುವುದು ಕಷ್ಟ. ಇಂತಹ ಸಂಗತಿಗಳೆಲ್ಲ ಮಹಿಳಾ ವಿಶ್ವವಿದ್ಯಾಲಯದಲ್ಲಿ ಅಧ್ಯಯನಕ್ಕೆ ಒಳಗಾಗಬೇಕು.

೪. ರಾಚನಿಕೋತ್ತರ ಸಂಕಥನದ ವಿಜೃಂಭಣೆಯಿಂದಾಗಿ ನಮ್ಮ ಅಧ್ಯಯನಗಳಲ್ಲಿ ಸಾಂಸ್ಕೃತಿಕತೆ ಮುಂಚೂಣಿಗೆ ಬಂದು ರಾಜಕಾರಣವು ಹಿಂದೆ ಸರಿದಿದೆ. ಮಹಿಳೆಯರ, ಲಿಂಗ ಸಂಬಂಧಗಳ, ರಾಜಕಾರಣದ ವಿವಿಧ ಮುಖಗಳನ್ನು ಕುರಿತಂತೆ ಅಧ್ಯಯನ ನಡೆಸುವುದು ಮಹಿಳಾ ವಿಶ್ವವಿದ್ಯಾಲಯದ ಗುರಿಯಾಗಬೇಕು. ಗ್ರಾಮಪಂಚಾಯತಿ, ತಾಲ್ಲೂಕು ಪಂಚಾಯತಿ ಹಾಗೂ ಜಿಲ್ಲಾ ಪಂಚಾಯತಿಗಳಲ್ಲಿ ಇಂದು ಅಕ್ಷರಶಃ ಸಾವಿರಾರು ಮಹಿಳೆಯರು ಜನ ಪ್ರತಿನಿಧಿಗಳಾಗಿ ನೀತಿ-ನಿರ್ಣಯ ಕೈಗೊಳ್ಳುವಲ್ಲಿ ಭಾಗಿಗಳಾಗುತ್ತಿದ್ದಾರೆ. ಆದರೆ ಲಿಂಗ ಸಂಬಂಧಿ ಅಸಮಾನತೆಯಿಂದಾಗಿ ಅವರಲ್ಲಿ ಮೂರು ಮುಕ್ಕಾಲು ವಾಸಿ ಮಹಿಳೆಯರಿಗೆ ತಮ್ಮ ಅಧಿಕಾರವನ್ನು ಚಲಾಯಿಸಲು ಸಾಧ್ಯವಾಗಿಲ್ಲ. ದಲಿತ ಮಹಿಳೆಯರಿಗೆ, ಹಿಂದುಳಿದ ವರ್ಗದ ಮಹಿಳೆಯರಿಗೆ ರಾಜಕೀಯವಾಗಿ ಅಧಿಕಾರ ಬಂದಿದೆ. ಆದರೆ ದೈನಂದಿನ ಬದುಕಿನಲ್ಲಿ ಜಮೀನ್ದಾರರು-ಉನ್ನತವರ್ಗಗಳ ಮರ್ಜಿಯಲ್ಲಿ ಬದುಕಬೇಕಾದ ದಲಿತ ಹಿಂದುಳಿದ ವರ್ಗಗಳ ಮಹಿಳೆಯರು ಆರ್ಥಿಕವಾಗಿ ದುರ್ಬಲರಾಗಿದ್ದಾರೆ- ದುಸ್ಥಿತಿಯಲ್ಲಿದ್ದಾರೆ. ಇಂತಹ ಆಸ್ಫೋಟಕಾರಿ ಸಂಗತಿಗಳ ಬಗ್ಗೆ ಮಹಿಳಾ ವಿಶ್ವವಿದ್ಯಾಲಯವು ಚಿಂತಿಸಬೇಕು. ಲಿಂಗ ಸಂಬಂಧಗಳನ್ನು ಸಾಹಿತ್ಯಿಕ-ಸಾಂಸ್ಕೃತಿಕ ಮುಖಗಳಿಗಿಂತ ಹೆಚ್ಚಾಗಿ ಅವುಗಳ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ವರೂಪದ ಅಧ್ಯಯನಕ್ಕೆ ಮಹಿಳಾ ವಿಶ್ವವಿದ್ಯಾಲಯದಲ್ಲಿ ಅವಕಾಶ ದೊರೆಯಬೇಕು. ಸ್ಥಳೀಯ ಸಂಸ್ಥೆಗಳ ಮಹಿಳಾ ಜನಪ್ರತಿನಿಧಿಗಳಿಗೆ ತರಬೇತಿ ನೀಡುವ ಒಂದು ಬೃಹತ್ ಕಾರ್ಯಕ್ರಮವನ್ನು ಮಹಿಳಾ ವಿಶ್ವವಿದ್ಯಾಲಯವು ಹಮ್ಮಿಕೊಳ್ಳಬೇಕಾಗುತ್ತದೆ.

೫. ಕೊನೆಯದಾಗಿ ಮಹಿಳಾ ವಿಶ್ವವಿದ್ಯಾಲಯವು ಮುಖ್ಯವಾಗಿ ಮೂರು ಮುಖಗಳಲ್ಲಿ ತನ್ನನ್ನು ತಾನು ಸಂಘಟಿಸಿಕೊಳ್ಳಬಹುದು. ಮೊದಲನೆಯದು ಶಿಕ್ಷಣ. ಅದು ಸಾಂಪ್ರದಾಯಿಕ

ಪದವಿಗಳ ಜೊತೆಗೆ ಹೊಸ ಬಗೆಯ ಕೋರ್ಸುಗಳನ್ನು ರೂಪಿಸಬಹುದು. ಇದು ಬಹಳ ಕಷ್ಟವಾದ ಕೆಲಸವೇನಲ್ಲ. ಎರಡನೆಯ ಮತ್ತು ಬಹುಮುಖ್ಯವಾದ ಸಂಗತಿಯೆಂದರೆ ಅಧ್ಯಯನ. ಮಹಿಳಾ ವಿಶ್ವವಿದ್ಯಾಲಯವು ಲಿಂಗಸಂಬಂಧಗಳ ಅಧ್ಯಯನ ಕೇಂದ್ರವಾಗಬೇಕು. ಅದರ ವಿವಿಧ ಮುಖಗಳ ಅಧ್ಯಯನಕ್ಕೆ ಸೂಕ್ತವಾದ ರೀತಿಯಲ್ಲಿ ಸಮಾಜ ವಿಜ್ಞಾನ ವಿಭಾಗಗಳು ಅಲ್ಲಿ ತಲೆ ಎತ್ತಬೇಕು. ಆದರೆ ಅಲ್ಲಿ ಅಸ್ತಿತ್ವಕ್ಕೆ ಬರುವ ಸಮಾಜ ವಿಜ್ಞಾನ ವಿಭಾಗಗಳು ಸಾಂಪ್ರದಾಯಿಕ ವಿಶ್ವವಿದ್ಯಾಲಯಗಳಲ್ಲಿನ ಸಮಾಜವಿಜ್ಞಾನ ವಿಭಾಗಗಳ ಪಡಿಯಚ್ಚುಗಳಾಗಬಾರದು. ಮೂರನೆಯದು ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ನಿರತರಾಗಿರುವ ನಾಡಿನ ಮಹಿಳೆಯರಿಗೆ ಸೂಕ್ತವಾದ ರೀತಿಯ ತರಬೇತಿ ಕಾರ್ಯಕ್ರಮಗಳನ್ನು ಮಹಿಳಾ ವಿಶ್ವವಿದ್ಯಾಲಯವು ಹಮ್ಮಿಕೊಳ್ಳಬೇಕು. ಸ್ತ್ರೀ ಶಕ್ತಿ ಕೇಂದ್ರಗಳಿವೆ. ಮಹಿಳೆಯರ ಸ್ವಸಹಾಯ ಗುಂಪುಗಳಿವೆ. ಸ್ಥಳೀಯ ಸಂಸ್ಥೆಗಳ ಮಹಿಳಾ ಜನಪ್ರತಿನಿಧಿಗಳಿದ್ದಾರೆ. ಅಂಗನವಾಡಿ ಕಾರ್ಯಕರ್ತೆಯರಿದ್ದಾರೆ, ಕಛೇರಿ ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಮಹಿಳೆಯರಿದ್ದಾರೆ. ಇವರೆಲ್ಲರಿಗೂ ತಕ್ಕುದಾದ ತರಬೇತಿ ಕಾರ್ಯಗಾರಗಳನ್ನು ಮಹಿಳಾ ವಿಶ್ವವಿದ್ಯಾಲಯವು ಸಂಘಟಿಸಬೇಕು. ಮಹಿಳೆಯರ ಸಬಲೀಕರಣಕ್ಕೆ ಮಹಿಳಾ ವಿಶ್ವವಿದ್ಯಾಲಯವು ಇಂಬಾಗಿ ನಿಲ್ಲಬೇಕು.



# ಮಹಿಳೆಯರಿಗಾಗಿಯೇ ಮಹಿಳಾ ವಿಶ್ವವಿದ್ಯಾಲಯ

ಕೆ.ಎಸ್. ಉಮಾದೇವಿ

ಈಗ ಬಿಜಾಪುರದಲ್ಲಿ ಮಹಿಳೆಯರಿಗಾಗಿ ಒಂದು ವಿಶ್ವವಿದ್ಯಾಲಯ ಆರಂಭ ಆಗಿರುವುದು ನಿಜಕ್ಕೂ ಸಂತೋಷದ ವಿಷಯ. ಬಹಳ ಹಿಂದೇನೇ ಇದು ಆಗಬೇಕಿತ್ತು. ಈಗಲಾದ್ರು ಇದು ಆಯ್ತು. ಈಗ ಈ ವಿಶ್ವವಿದ್ಯಾಲಯದ ಬಗ್ಗೆ ನಾವು ಗಮನಿಸಬೇಕಾದ ಮುಖ್ಯ ವಿಚಾರ ಅಂದ್ರೆ ಅಲ್ಲಿ ವಿಮೆನ್ ಓರಿಯಂಟೆಡ್ ಕೋರ್ಸ್‌ಗಳನ್ನು ಆರಂಭ ಮಾಡಬೇಕು. ವಿಮೆನ್ ಓರಿಯಂಟೆಡ್ ಅಂದ ತಕ್ಷಣ ಹಳೇ ಧಾಟಿಯಲ್ಲಿ ಅಡಿಗೆ ಮನೆಗೆ ಸೀಮಿತ ಆಗೋದಾಗಲಿ, ಮಕ್ಕಳು, ಮನೆ ಗಂಡ ಅಂತ ಅನ್ನುವ ತರಹದ ಕೋರ್ಸ್ ಅಲ್ಲ. ಮಹಿಳೆಯರ ಪ್ರತಿಭೆ ಏನಿದೆ ಅದು ಹೊರ ಬರುವಂತಹ ಯಾವುದೇ ಹೊಸ ಕೋರ್ಸನ್ನು ಬೇಕಾದ್ರೂ ಅಲ್ಲಿ ಆರಂಭ ಮಾಡಬಹುದು. ಉದಾಹರಣೆಗೆ ಮಹಿಳಾ ಅಧ್ಯಯನ. ಸುಮಾರು ಜನಕ್ಕೆ ಮಹಿಳಾ ಅಧ್ಯಯನ ಓದೋದರಿಂದ ಮಹಿಳೆಯರು ಕೆಟ್ಟು ಹೋಗ್ತಾರೆ ಅನ್ನೋ ಭಾವನೆ ಇದೆ. ನಿಜವಾಗಿ ಹೇಳಬೇಕೆಂದ್ರೆ ಯಾರು ಮಹಿಳಾ ಅಧ್ಯಯನ ಓದಿದ್ದಾರೋ ಅಥವಾ ಅದರ ಜ್ಞಾನ ಪಡೆದಿದ್ದಾರೋ ಅವರು ತಮ್ಮ ಕುಟುಂಬ ಜೀವನದಲ್ಲಿ ಗುಣಪ್ರದವಾದ ಬದಲಾವಣೆ ತರೋದರಲ್ಲಿ ಖಂಡಿತಾ ಸಫಲರಾಗಿದ್ದಾರೆ. ಇಂತಹ ಹಲವು ಬಗೆಯ ಜ್ಞಾನ ಶಾಖೆಗಳು ಮಹಿಳೆಯರಿಗೆ ಉಪಯೋಗ ಆಗುತ್ತೆ. ಅಂತಹ ಉಪಯುಕ್ತ ಕೋರ್ಸ್‌ಗಳ ಕಡೆ ಗಮನ ಕೊಡಬೇಕು. ಮುಕ್ತವಾದ ಅವಕಾಶಗಳನ್ನು ಹೆಂಗಸರಿಗೆ ಕೊಡಬೇಕು. ಎಷ್ಟೋ ಸಾರಿ ಮಹಿಳೆಯರಿಗೆ ಇದು ಬೇಡ ಅದು ಬೇಡ ಅಂತ ಅವರೇ ತೀರ್ಮಾನ ಮಾಡಿಬಿಡ್ತಾರೆ. ಆ ತರ ಇಲ್ಲಿ ಆಗಬಾರದು. ವಿಶ್ವವಿದ್ಯಾಲಯದಲ್ಲಿ ಒಂದೊಳ್ಳೆ ಪರಿಸರ ನಿರ್ಮಾಣ ಆಗಬೇಕು. ಒಳ್ಳೆಯ ಅವಕಾಶವನ್ನು ಮಹಿಳೆಯರಿಗೆ ಕೊಡಬೇಕು ಮತ್ತು ಎಲ್ಲಿಯವರೆಗಾದರೂ, ಯಾವುದೇ ಮಟ್ಟದಲ್ಲಾದರೂ - ಅದು ಕುಲಪತಿಯವರೆಗೆ - ಅಂತಹ ಪೋಸ್ಟ್‌ಗಳನ್ನು ಮಹಿಳೆಯರಿಗೆ ಮೀಸಲಿಟ್ಟು ಅವರು ಯಾವ ರೀತಿ ಕೆಲಸ ಮಾಡ್ತಾರೆ ಅನ್ನೋದನ್ನ ನೋಡಬಹುದು. ಅದು ಬಿಟ್ಟು ಮಹಿಳೆಯರಿಗೆ ಆ ಕೆಲಸ ಆಗಲ್ಲ, ಈ ಕೆಲಸ ಬರಲ್ಲ ಅನ್ನೋದು ತಪ್ಪು. ಯಾವುದೇ ಕೆಲಸವನ್ನಾದರೂ ಸಮಸ್ಯೆ ಇಲ್ಲದಂತೆ ಅವರು ರಚನಾತ್ಮಕವಾಗಿ ಮಾಡಬಲ್ಲರು. ಈಗ ಮಹಿಳೆಯರು ಅಂತ ಅಂದ್ಕೊಂಡ್ರ ಅದು ಕೇವಲ

ಮಹಿಳೆಯರಿಗೆ ಸೀಮಿತ ಆಗೋಲ್ಲ. ಉತ್ತರೋತ್ತರ ಅದು ಸಾಮಾಜಿಕ ಅಭಿವೃದ್ಧಿ ತಂದೇ ತರುತ್ತೆ. ಆದ್ದರಿಂದ ಮಹಿಳೆಯರಿಗೆ ಎಷ್ಟೆಲ್ಲ ಒಳ್ಳೆ ಅವಕಾಶ ಕಲ್ಪಿಸುತ್ತೇವೆ. ಅದು ಅಂತಿಮವಾಗಿ ಸಮಾಜಕ್ಕೆ ಸೇರುತ್ತೆ. ಆದ್ದರಿಂದ ಈ ವಿಶ್ವವಿದ್ಯಾಲಯದ ಮೂಲಕ ಒಂದು ಉನ್ನತ ಮಟ್ಟದ ಅವಕಾಶವನ್ನು ಮಹಿಳೆಯರಿಗೆ ಕಲ್ಪಿಸಿಕೊಡುವುದೇ ಇದರ ಮುಖ್ಯ ಉದ್ದೇಶ ಆಗಿರಬೇಕು.

ಈಗ ಕೆಲವಾರು ಕೋರ್ಸ್‌ಗಳು ಮಹಿಳೆಯರಿಗೆ, ಮಹಿಳಾ ರಾಜಕಾರಣಕ್ಕೆ ಧಕ್ಕೆ ತರುತ್ತವೆ ಅನ್ನೋ ಭಾವನೆ ಕೂಡ ಇದೆ. ಉದಾಹರಣೆಗೆ ಇಂಟೀರಿಯರ್ ಡೆಕೋರೇಷನ್. ಇವು ಮನೆಗೆ ಸೀಮಿತಗೊಳಿಸುತ್ತವೆ. ಸಾಂಪ್ರದಾಯಿಕವಾಗಿ ಮಹಿಳೆಯಿಂದ ಏನನ್ನು ನಿರೀಕ್ಷಿಸಲಾಗುತ್ತಿತ್ತೋ ಅದನ್ನೇ ಪುನಃ ಹೊಸ ಬಗೆಯಲ್ಲಿ ತರಲಾಗುತ್ತದೆ ಎಂಬ ಭಾವನೆ ಇದೆ. ಆದ್ರೆ ಅದನ್ನ ಹೀಗೂ ನೋಡಬಹುದು. ಇಂಟಿರಿಯರ್ ಡೆಕೊರೇಷನ್‌ಗೆ ಈಗ ಗ್ಲೋಬಲ್ ಲೆವೆಲ್‌ನಲ್ಲಿ ಸಾಕಷ್ಟು ಮಹತ್ವ ಸಿಕ್ಕಿದೆ. ಆದ್ರೆ ಅಲ್ಲಿ ಮಹನೀಯರೇ ಯಾಕೆ ಹೋಗಿ ಅದನ್ನ ಬಳಸ್ಕೋಬೇಕು. ಉನ್ನತ ಸ್ಥಾನ ಪಡಿಬೇಕು ಅಂತ್ಲೂ ಅಂದ್ಕೋ ಬಹುದು...ಇಲ್ಲಿ ಇಂಟಿರಿಯರ್ ಡೆಕೊರೇಷನ್‌ಗೆ ನಾವು ಲೋಯರ್ ಪ್ರೊಫೈಲ್ ಕೊಟ್ಟು ನೋಡಲೇಬಾರದು. ಬ್ರಾಡರ್ ಪ್ರೊಫೈಲ್‌ನಿಂದ, ಫರ್ಸ್‌ಪೆಕ್ಟೀವನಿಂದ ನೋಡಬೇಕು. ಇವತ್ತಿನ ದಿನ ಇಂಟಿರಿಯರ್ ಡೆಕೊರೇಷನ್ ಅಂದ್ರೆ ಕೇವಲ ಅಲಂಕಾರ ಆಗಿ ಉಳಿದಿಲ್ಲ. ಅದು ಉಳಿತಾಯ, ಆರೋಗ್ಯ ಇತ್ಯಾದಿ ವ್ಯಾಪ್ತಿಯನ್ನು ಪಡೆದಿದೆ.... ಹಾಗಾಗಿ ಇದನ್ನೊಂದು ಕೆಳದರ್ಜೆಯ ಕೆಲಸವಾಗಿ ನಾವು ನೋಡುವುದಕ್ಕೆ ಹೋಗಬಾರದು.... ಮಹಿಳೆಯರು ಯಾವ ಕ್ಷೇತ್ರದಲ್ಲಿ ಮುಂದೆ ಬರಲು ಇಚ್ಛಿಸುತ್ತಾರೆ. ಅದನ್ನು ಮುಕ್ತವಾಗಿ ಕೊಡಬೇಕು....ನಾನಾಗ್ಲೆ ಹೇಳಿದಂತೆ ಇದು ಉತ್ತರೋತ್ತರವಾಗಿ ಸಮಾಜದ ಅಭಿವೃದ್ಧಿಗೆ ತಳಹದಿಯಾಗಿರುವುದರಿಂದ ಮಹಿಳೆಯರು ಏನನ್ನು ಮಾಡಲು ಬಯಸುತ್ತಾರೆ. ಅದಕ್ಕೆ ಸಂಪೂರ್ಣ ಅವಕಾಶ ಕಲ್ಪಿಸಿ ಕೊಡೋದು ತುಂಬ ಮುಖ್ಯ. ಈ ದಿಕ್ಕಿನಲ್ಲಿ ಈ ವಿಶ್ವವಿದ್ಯಾಲಯ ಕೆಲಸ ಮಾಡಬೇಕು.

ಒಂದು ವಿಶ್ವವಿದ್ಯಾಲಯ ಮಹಿಳೆಯರಿಗಾಗಿಯೇ ಇದೆ ಅಂದ್ರೆ ಅದರಲ್ಲಿ ತಪ್ಪೇನು ಇಲ್ಲ. ಹಾಗಾಗಿ ಇಲ್ಲಿ ಪುರುಷರಿಗೆ ಯಾವ ಪ್ರಮಾಣದಲ್ಲಿ ಅವಕಾಶ ಇರಬೇಕು ಅನ್ನೋ ಪ್ರಶ್ನೆನೇ ಬೇಕಿಲ್ಲ. ಯಾಕೆಂದ್ರೆ.... ಸೋ ಫಾರ್ ಮೆನ್ ಹ್ಯಾವ್ ಲುಕಡ್ ಆಫ್ಟರ್ ದೆಮ್ ಸೆಲ್ಫ್ ಎಕ್ಸಲೆಂಟ್ಲಿ ವೆಲ್, ಇಟ್ಸ್ ಓನ್ಲೀ ವಿಮೆನ್ ಹೂ ಡಿಡ್ ನಾಟ್ ಗೆಟ್ ದಿ ಆಪರ್ಚುನಿಟಿ, ಸೋ, ವಿ ಹ್ಯಾವ್ ಟು ಪ್ರೊವೈಡ್ ಸ್ಯೂಟಬಲ್ ಆಪರ್ಚುನಿಟಿ ಫಾರ್ ಎ ವಿಮೆನ್ ಹ್ಯಾವ್ ಸಚ್..... ಈ ವಿಶ್ವವಿದ್ಯಾಲಯ ಮಹಿಳೆಯರಿಗೋಸ್ಕರನೇ ಇರಬೇಕು. ಮಹಿಳೆಯರಿಗೆ ಬೇಕಾದ ಎಲ್ಲ ಅವಕಾಶಗಳನ್ನು ಕಲ್ಪಿಸಿಕೊಡಬೇಕು ಮತ್ತು ಎಲ್ಲ ಮಟ್ಟದಲ್ಲಿ ಈ ಕಾರ್ಯಕ್ಕೆ ಮಹಿಳೆಯನ್ನೇ ನೇಮಿಸುವುದರಿಂದ ನಾವು ಈ ವಿಶ್ವವಿದ್ಯಾಲಯವನ್ನು ಚೆನ್ನಾಗಿ ಬೆಳಸಬಹುದು.

●

# ಮಹಿಳಾ ವಿಶ್ವವಿದ್ಯಾಲಯವೆಂಬ ಬಂಗಾರದ ಜಿಂಕೆಯ ಹಿಂದೆ ಸೀತೆಯರ ದಂಡು

ಮಲ್ಲಿಕಾ ಘಂಟಿ

**ಈ** ಶತಮಾನದ ಪ್ರಾರಂಭ ಹಲವು ಸಂಗತಿಗಳಿಗೆ ಚಾರಿತ್ರಿಕ ಮಹತ್ವವನ್ನು ಪಡೆದುಕೊಂಡಿದೆ. ಅದರಲ್ಲಿ ಮಹಿಳೆಯರ ಅರಿವಿನ ನೆಲೆ ಹಿಗ್ಗಿದ ಸಂಗತಿಯೂ ಒಂದು. ಹೆಣ್ಣು ತನ್ನ ಅಸ್ತಿತ್ವಕ್ಕಾಗಿ, ಅನನ್ಯತೆಗಾಗಿ ವ್ಯವಸ್ಥೆಯ ಜೊತೆಗೆ ಮುಖಾಮುಖಿಯಾಗಿರುವ ಕಾರಣ ದಿಂದಲೇ ಪುರುಷ ಪ್ರಧಾನ ಬದುಕಿನಲ್ಲಿ ಭಯ, ಆತಂಕ, ಸಂದೇಹ ಜಾಗೃತಗೊಂಡಿದೆ. ರಾಜಕೀಯ ಮೀಸಲಾತಿಯ ನಾಟಕದ ತಂತ್ರಗಾರಿಕೆಯ ಹುನ್ನಾರ ಸಿಕ್ಕಿಳಗೊಂಡು ಯಜಮಾನ ಸಂಸ್ಕೃತಿಯ ಇನ್ನೊಂದು ಮುಖವು ಸಾರ್ವಜನಿಕರ ಎದುರಿಗಿದೆ. ಕಾನೂನುಬದ್ಧವಾಗಿ ಮಹಿಳೆಯರ ಮೇಲಾಗುತ್ತಿರುವ - ಕೌಟುಂಬಿಕ ನೆಲೆಯನ್ನು ಒಳಗೊಂಡಂತೆ - ಎಲ್ಲಾ ಕ್ಷೇತ್ರದಲ್ಲಿಯೂ ಮಹಿಳೆಯ ಹಿತರಕ್ಷಣೆಯ ನೀರಿಲ್ಲದ ರಕ್ಷಾಕವಚಗಳನ್ನಿಟ್ಟು ದಹಿಸುತ್ತಿರುವ ವಾಸ್ತವವೂ ಮಹಿಳೆಯರಿಗೆ ಅರ್ಥವಾಗಿದೆ. ಕರ್ನಾಟಕದಲ್ಲಿಯು ಇಂಥದೊಂದು ರಾಜಕೀಯ ಪ್ರಹಸನ ನಡೆದಿದೆ ಎಂಬ ಗುಮಾನಿ ಬುದ್ಧಿವಂತ ಮಹಿಳೆಯರ ಲೋಕದಲ್ಲಿ ಚರ್ಚೆ ಗೊಳ್ಳುತ್ತಿದೆ. ಇದು ಸಂಘರ್ಷದ ಕಾಲ. ಗಂಡು ಹೆಣ್ಣು ಎಂಬ ಭೇದವಿಲ್ಲದ ಹಾಗೇ ಅಸ್ತಿತ್ವಕ್ಕಾಗಿ, ಬದುಕುವ ಸಲುವಾಗಿ ಬಲಿಷ್ಠರಾಗುವ ದಾವಂತ ಇಂದು ಎಲ್ಲೆಡೆಗೂ ಕಾಣಿಸಿ ಕೊಳ್ಳುತ್ತಿದೆ. ಸಮಾನತೆ, ಅವಕಾಶ, ಅನುಭೋಗ, ಸ್ವಾತಂತ್ರ್ಯ, ಸ್ವಾಭಿಮಾನ ಮುಂತಾದ ವಿಚಾರಗಳೆಲ್ಲಾ ಇಂದು ಬಯಕೆಗಳಲ್ಲಿ ಅನುಭವಿಸುವ ಸಂಗತಿಗಳು. ಹೀಗಾಗಿ ಎಲ್ಲಾ ರಂಗಗಳಲ್ಲಿಯೂ ಶೀತಲವಾಗಿದ್ದ ಸಮರ ಸ್ಫೋಟಗೊಳ್ಳುತ್ತಿದೆ.

ಕರ್ನಾಟಕ ಸರಕಾರ ಮಹಿಳಾ ವಿಶ್ವವಿದ್ಯಾಲಯವೊಂದನ್ನು ಸ್ಥಾಪಿಸುತ್ತಿರುವುದು ಸ್ತ್ರೀ ಸಮುದಾಯದಲ್ಲಿ ಅಂತಹ ಅಗಾಧವಾದ ಗುಣಾತ್ಮಕ ಬದಲಾವಣೆಯನ್ನುಂಟು ಮಾಡುತ್ತದೆ ಎಂಬ ಭ್ರಮೆ ಮಹಿಳೆಯರಲ್ಲೇನು ಇಲ್ಲ. ಈ ಹಿಂದೆ ಕನ್ನಡ ವಿಶ್ವವಿದ್ಯಾಲಯ ಸ್ಥಾಪನೆ ಆದಾಗ ಕರ್ನಾಟಕದ ಪ್ರಜ್ಞಾವಂತ ಮಹಿಳೆಯರನ್ನೊಳಗೊಂಡ ಹಾಗೇ ಕನ್ನಡ ಮನಸ್ಸುಗಳು ಅದರ ಕುರಿತ ಹಾಗೇ ಮುಕ್ತವಾಗಿ ಚರ್ಚಿಸಿ ಚಿಂತಿಸಿ, ಅದಕ್ಕೊಂದು ಆಕಾರ ನೀಡಿದ್ದವು. ಅಷ್ಟೇ ಅಲ್ಲ ಸರಕಾರ ಸ್ವತಃ ಹಿರಿಯ ಸಾಹಿತಿ, ಸಂಶೋಧಕರನ್ನೊಳಗೊಂಡ ಹಾಗೆ ಸಮಿತಿ

ಮಾಡಿ ಸಾಹಿತಿಯೊಬ್ಬರನ್ನು ಕುಲಪತಿ ಮಾಡುವುದರ ಮೂಲಕ ಅದಕ್ಕೆ ನಡಿಗೆ ಕಲಿಸಿದ್ದರು. ಆದರೆ ಮಹಿಳಾ ವಿಶ್ವವಿದ್ಯಾಲಯದ ಬಗ್ಗೆ ಯಾವ ಸಮಿತಿ ನೇಮಕಗೊಳ್ಳುವುದಿರಲಿ ಪ್ರಜ್ಞಾವಂತ ಯಾವ ವ್ಯಕ್ತಿಯು ಗಂಭೀರವಾಗಿ ಇದರ ಕುರಿತ ಹಾಗೇ ತುಟಿ ಪಿಟಿಕ್ಕನ್ನದೆ ಕುಳಿತಿರುವುದನ್ನು ಕಂಡು ಕನಿಕರವಾಗುತ್ತಿದೆ. ಮಹಿಳಾ ವಿಶ್ವವಿದ್ಯಾಯವೆಂಬುದರ ಬಗ್ಗೆ ಮಹಿಳೆಯರೇ ಮಾತನಾಡಬೇಕು, ಅವರ ಲೋಕದಲ್ಲಿ ನನ್ನದೇನು ಕೆಲಸವೆಂಬ ಊಳಿಗ ಮಾನ್ಯತೆಯ ಅಸಡ್ಡೆ, ತಾತ್ಸಾರ, ಉದಾಸೀನತೆ ಕಂಡು ಆಶ್ಚರ್ಯವಾಗುತ್ತಿದೆ. ಒಂದು ಉನ್ನತ ಶೈಕ್ಷಣಿಕ ಸಂಸ್ಥೆಯೊಂದು ತಲೆ ಎತ್ತುತ್ತದೆಂದರೆ ಪ್ರತಿಯೊಬ್ಬನಲ್ಲಿಯೂ ಅದರ ಬಗ್ಗೆ ಕನಸುಗಳು ಚಿಗುರೊಡೆದು ಅವುಗಳ ಸಾಕಾರಕ್ಕಾಗಿ ಸಹೃದಯತೆಯಿಂದ ಸಹಾಯ ಸಹಕಾರ ನೀಡಿದರೆ ಮಾತ್ರ ಅದು ಸಾಮಾಜಿಕ ಕಾಳಜಿ, ಕಳಕಳಿ, ಜವಾಬ್ದಾರಿಯ ಆಸ್ತಿಭಾರದಲ್ಲಿ ಭದ್ರಗೊಳ್ಳಲು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಬಲಿಷ್ಠ ಮನಸ್ಸುಗಳು ಸ್ವಾರ್ಥ ದುರಾಸೆಯ ರೋಗಕ್ಕೊಳಗಾಗಿ ಉಗುಳುವ ಉಗುಳು ಕುಡಿಕೆಯಾಗುತ್ತದೆ. ಹೀಗೆ ಸಾರ್ವಜನಿಕರ ದುಡ್ಡು ಸಮಯವೆಲ್ಲ ನಿರರ್ಥಕವಾಗುತ್ತದೆ.

ಮಹಿಳಾ ವಿಶ್ವವಿದ್ಯಾಲಯವೊಂದು ರಾಜ್ಯದ ಅತ್ಯಂತ ತುತ್ತ ತುದಿಯ ಬರಗಾಲದ ದವಡೆಗೆ ಸಿಕ್ಕು ನಿರಂತರ ಜರ್ಜರಿತಗೊಂಡಿರುವ ಮತ್ತು ಸಾಂಸ್ಕೃತಿಕವಾಗಿ ಸಂಪೂರ್ಣವಾಗಿ ಜಮೀನ್ದಾರಿಕೆಯನ್ನು ಉಳಿಸಿಕೊಂಡಿರುವ ವಿಜಾಪುರ ಜಿಲ್ಲೆಯಲ್ಲಿ ಸ್ಥಾಪಿಸಿರುವುದು ಹೆಮ್ಮೆ ಪಡುವ ಸಂಗತಿಯೂ ಹೌದು. ಮಹಿಳಾ ವಿಶ್ವವಿದ್ಯಾಲಯ ಮಾಡುತ್ತಾರೆ ಎಂದ ತಕ್ಷಣ ಅದಕ್ಕೆ ಹೆಸರಿಡುವ ಬಗ್ಗೆ ಕಾಣಿಸಿಕೊಂಡ ಕಾಳಜಿ ಅದರ ಸ್ವರೂಪದ ಬಗ್ಗೆ ಕಾಣಿಸಿಕೊಳ್ಳದೆ ಹೋಗುತ್ತಿರುವ ಬಗ್ಗೆ ಆಶ್ಚರ್ಯವೆನಿಸುತ್ತದೆ. ಇಂದು ಮಾನವ ಸಮಾಜವೆಂಬ ಪ್ರಜ್ಞೆ ಅರ್ಥ ಮರೆಯಾಗಿ ಜಾತಿ ಸಮಾಜಗಳು ತಮ್ಮ ತಮ್ಮ ಮೇಲಾಟವನ್ನು ವ್ಯಕ್ತಿ ಕೇಂದ್ರಿತ ಹಿತಕ್ಕಾಗಿ ನಡೆಸುತ್ತಿವೆ. ಹೀಗಿರುವಾಗ ಚರಿತ್ರೆಯಲ್ಲಿ ಮಾಸದ, ಅಳುಕದ ಹೆಜ್ಜೆ ಉಳಿಸಿದ ಸ್ತ್ರೀ ಚೇತನಗಳು ಇಡೀ ಸ್ತ್ರೀ ಸಮುದಾಯದ ಪ್ರಜ್ಞೆ, ಆದರ್ಶದ ಸಂಕೇತವಾಗಿ ಉಳಿಯುತ್ತಿಲ್ಲ. ಜಾತಿ ಕುಲಗೋತ್ರದ ಹೆಸರಿನಲ್ಲಿ ಮಹಿಳೆಯರನ್ನು ಒಡೆದು ಆಳುತ್ತಿರುವ ಪುರುಷ ಪ್ರಧಾನ ಸಮಾಜ, ಸಂಸ್ಕೃತಿ ಬಲಿಷ್ಠ ಗಂಡಸಿನ ಹಿತವನ್ನು ಒಪ್ಪಂದದಲ್ಲಿ ಗುರುತಿಸುವ ವಿವೇಕ ನಮ್ಮಲ್ಲಿ ಇಲ್ಲದೆ ಹೋಗಿರುವುದೊಂದು ದುರಂತ. ಸ್ತ್ರೀ ಸಮುದಾಯ ಕೂಡದ ಹಾಗೇ ವ್ಯವಸ್ಥಿತವಾಗಿ ಸಂಚು ಎಲ್ಲಾ ಕಾಲದಲ್ಲಿಯೂ ನಡೆಯುತ್ತಲೇ ಇದೆ.

ಜನತಾಂತ್ರಿಕ ವ್ಯವಸ್ಥೆಯಲ್ಲಿ ತಲೆ ಎಣಿಕೆಯ ಮಹಿಳೆಯ ಮತಕ್ಕೆ ಬೆಲೆ ಸಿಕ್ಕಿದೆಯೇ ಹೊರತು ಅಧಿಕಾರ ಅನುಭವಿಸುವುದಕ್ಕಾಗಿಯಲ್ಲವೆಂಬುದು ಹಗಲು ಸತ್ಯ. ಕೇಂದ್ರ ಸರಕಾರ ರಾಜ್ಯ ಸರಕಾರಗಳೂ ಇತ್ತೀಚಿನ ದಿನಗಳಲ್ಲಿ ಮಹಿಳೆ, ಮಕ್ಕಳಿಗೆ ಸಂಬಂಧಿಸಿದಂತೆ ಹಲವು ಹತ್ತು ಯೋಜನೆಗಳನ್ನು, ಹಣವನ್ನು ಕಾಯ್ದಿರಿಸುತ್ತಿದೆ. ಆದರೆ ವಾಸ್ತವ ಎಂದರೆ ಈ ಯೋಜನೆಗಳ ಫಲಾನುಭವಿಗಳಾದ ಮಹಿಳೆಯರಿಗೆ ಮತ್ತು ಮಕ್ಕಳಿಗೆ ಎಷ್ಟರಮಟ್ಟಿಗೆ ತಲುಪಿದೆ ಎಂಬ ಪ್ರಶ್ನೆಗೆ ಉತ್ತರವೇ ಇಲ್ಲ. ಉದ್ಯೋಗಸ್ಥ ಮಹಿಳೆಯರಿಗೆ ರಕ್ಷಣೆ ನೀಡುವ

ಮಹತ್ತಾದ ಕಾರಣದಿಂದ ಆಯಾ ನೆಲೆಯಲ್ಲಿ ಕಾನೂನುಬದ್ಧವಾಗಿ ರಚನೆಗೊಳ್ಳಬೇಕಾದ ಸಮಿತಿಗಳಲ್ಲಿ ಬಲಿಷ್ಠ ಗಂಡಸರೇ ಅಂಡೂರಿರುವುದು ಮತ್ತು ಭಾರತೀಯ ಸಂಪ್ರದಾಯಸ್ಥ ಕೋಲೆತ್ತಿನ ಹಾಗೆ ತಲೆಹಾಕುವ ನಾರಿಯರನ್ನು ನಾಮಕಾವಸ್ಥೆಯಾಗಿ ಕೂರಿಸುವ, ಇಲ್ಲವೆ ಎಲ್ಲಾ ರೀತಿಯಿಂದಲೂ ಸಹಕರಿಸಬಹುದಾದ ಮುಖವಿಲ್ಲದ ಮುಖಗೇಡಿಗಳನ್ನು ಮುಂದಿಟ್ಟುಕೊಂಡು ನಡೆಸುವ ಕಾರ್ಯಗಳಿಗೆ, ಸಮಿತಿಗಳಿಗೆ ಉದ್ದೇಶಿತ ಗುರಿ ಮುಟ್ಟುವ ಕ್ರಿಯಾಶೀಲತೆ ದಕ್ಕಿತೆ? ಯೋಜನೆಯ ಉದ್ದೇಶ ಸಾರ್ಥಕಗೊಳ್ಳದಿದ್ದರೆ ಇಂತಹ ನಾಟಕ ಯಾವ ಪುರುಷಾರ್ಥಕ್ಕೆ ನಡೆಯುತ್ತದೆ.

ನಮ್ಮ ಸರಕಾರಗಳು, ಸಮಾಜ ಸಂಘ ಸಂಸ್ಥೆಗಳು ನಿಸರ್ಗ ಸಹಜವಾಗಿ ಮಹಿಳೆಯರಿಗೆ ಸಾರ್ವಜನಿಕ ಸ್ಥಳಗಳಲ್ಲಿ ಮಲಮೂತ್ರ ವಿಸರ್ಜಿಸಲು ಒಂದು ಗೌರವದ, ಮರ್ಯಾದೆಯ ಶೌಚಾಲಯಗಳನ್ನು ಕಟ್ಟುವುದರ ಬಗ್ಗೆಯು ರಾಜಕೀಯ ಮಾಡುವಷ್ಟು ಕೀಳುತನ ಕಂಡು ಆಶ್ಚರ್ಯವಾಗುತ್ತಿದೆ. ಇಂತಹದ್ದನ್ನು ಹೇಳಿಸಿಕೊಳ್ಳದಷ್ಟು ನಮ್ಮ ಜನರು ಜಡಗೊಂಡಿರುವ ಬಗ್ಗೆ ನಾಚಿಕೆಪಡಬೇಕಾಗಿದೆ. ಇಂದು ಉದ್ಯೋಗಸ್ಥ ಮಹಿಳೆಯರು ಮೊದಲಿಗಿಂತಲೂ ಮನೆಯಿಂದ ಹೊರಗೆ ಹೆಚ್ಚು ಕಾಲ ಕಳೆಯುವುದು ಅನಿವಾರ್ಯವಾಗಿದೆ. ಇಂತಹ ಪ್ರಸಂಗದಲ್ಲಿ ಮಲಮೂತ್ರ ವಿಸರ್ಜನೆಯನ್ನು ಒಂದು ಸಮಸ್ಯೆಯಾಗಿಸಿಕೊಂಡು ಬಳಲುವುದನ್ನು ಯಾರಿಗೆ ಹೇಳುವುದು. ಈ ನಿಸರ್ಗ ಸಹಜತೆಯನ್ನು ಕಷ್ಟಪಟ್ಟು ನಿಯಂತ್ರಣದಲ್ಲಿಟ್ಟುಕೊಳ್ಳಲು ಎಷ್ಟೋ ಮಹಿಳೆಯರು ಅಗತ್ಯಕ್ಕಿಂತಲೂ ತುಂಬಾ ಕಡಿಮೆ ನೀರು ಆಹಾರ ಸೇವಿಸುತ್ತಲೇ ಹಲವಾರು ರೋಗಗಳಿಗೆ ಒಳಾಗಾಗುತ್ತಿರುವ ಬಗ್ಗೆ ಸಮೀಕ್ಷೆ ನಡೆಸಿದ ಸಂಸ್ಥೆಯೊಂದು ವರದಿ ಸಲ್ಲಿಸಿದೆ. ಇಂತಹ ಸಮಸ್ಯೆಗಳ ಬಗ್ಗೆ ಯಾರಲ್ಲಿ ದೂರಬೇಕು. ಇದು ಮನುಷ್ಯನ ಸೂಕ್ಷ್ಮತೆಗಳಿಗೆ ದಕ್ಕಬೇಕಾದ ಸಂಗತಿ ಅಥವಾ ಸಾಮಾನ್ಯ ಜ್ಞಾನಕ್ಕೆ ನಿಲುಕಬೇಕಾದ ಸತ್ಯ, ಸೂಕ್ಷ್ಮತೆಯಿಲ್ಲದೆ ಹೊಣಗೇಡಿ ಗಂಡಸರು ಹೆಂಗಸರು ಸೇರಿಯೇ ಇಂತಹ ಸಮಸ್ಯೆಯ ಬಗ್ಗೆ, ಉಡಾಫೆಯಿಂದ ಮಾತನಾಡುವುದು ಇದೆ.

ಇಂದು ಮೊದಲಿಗಿಂತಲೂ ಎಲ್ಲ ಸರಕಾರಗಳೂ ತಮ್ಮ ಬಜೆಟ್ಟಿನಲ್ಲಿ ಹೆಚ್ಚು ಹೆಚ್ಚು ಹಣವನ್ನು ಮಹಿಳೆಯ ಬದುಕಿನ ಉತ್ತಮಿಕೆಗಾಗಿ ಎತ್ತಿ ಇಡುತ್ತಿದೆ. ಆದರೆ ಅದರ ಉಪಯೋಗದ ಸಂದರ್ಭದಲ್ಲಿ ದುರ್ಬಳಕೆಗೊಂಡು ಸ್ತ್ರೀ ಸಶಕ್ತೀಕರಣದ ಆಶಯವೇ ಮಾಯವಾಗುತ್ತಿದೆ. ಉದ್ಯೋಗಸ್ಥ ಮಹಿಳೆಯರಿಗಾಗಿ ಸುರಕ್ಷಿತ ಸ್ಥಳವೆಂದೂ ಕರೆಯುವಲ್ಲಿ ವಸತಿ ಸಮುಚ್ಚಯವನ್ನು ನಿರ್ಮಿಸಲು ಕೋಟಿಗಟ್ಟಲೇ ಹಣವನ್ನು ಸರಕಾರಗಳು ಬಿಡುಗಡೆಗೊಳಿಸುತ್ತಿವೆ. ತಾಲೂಕು ಮತ್ತು ಜಿಲ್ಲಾ ಕೇಂದ್ರಗಳಲ್ಲಿ ಉದ್ಯೋಗ ಅವಕಾಶಗಳಿರುವ ಕಡೆಗಳಲ್ಲಿ ಇಂತವುಗಳನ್ನು ಕಟ್ಟಬೇಕೆಂಬ ಸಾಮಾನ್ಯ ಜ್ಞಾನವು ನಮ್ಮ ಅಧಿಕಾರಸ್ಥ ಗಂಡಸರಿಗೆ ಇಲ್ಲದೆ ಹೋಗಿರುವುದರಿಂದ ಇಂತಹ ನಿಲಯಗಳು ಸಂಘ ಸಂಸ್ಥೆಯ, ಬಲಿಷ್ಠ ವ್ಯಕ್ತಿಗಳ ಭ್ರಷ್ಟಾಚಾರಕ್ಕೆ ಸುಗ್ರಾಸ ಭೋಜನ ಒದಗಿಸುತ್ತಿದೆ. ಮಹಿಳೆಯರಿಗೆ ಅಂಗವಿಕಲರಿಗೆ, ವೃದ್ಧರಿಗೆ ಬಸ್ಸಿನಲ್ಲಿ ಸ್ಥಳ ಕಾಯ್ದಿರಿಸುವುದು ಸಹ ನಗೆಪಾಟಲಿಗೆ

ಒಳಗಾಗಿರುವುದನ್ನು ನೋಡಿದಾಗ ಯಾವುದೇ ಮೀಸಲಾತಿಯ ಅವಕಾಶಗಳು ನಿಜವಾದ ಫಲಾನುಭವಿಗಳಿಗೆ ಮುಟ್ಟಿಸುವ ಕ್ರಿಯಾವಂತಿಕೆ ಸರಕಾರ ಸಮಾಜದಲ್ಲಿ ಇಲ್ಲದೆ ಇರುವುದರಿಂದ ಅದೆಲ್ಲವೂ ಕಾಗದದ ಮೇಲಿನ ಭರವಸೆಯಾಗಿಯೇ ಉಳಿದಿದೆ.

ಪ್ರಸ್ತುತ ನಮ್ಮ ಸರಕಾರ ಇದೇ ಶೈಕ್ಷಣಿಕ ವರ್ಷದಿಂದ ಮಹಿಳಾ ವಿಶ್ವವಿದ್ಯಾಲಯ ಪ್ರಾರಂಭಗೊಳ್ಳುವ ಹಾಗೆ ಕಾರ್ಯ ಮಾಡಿದೆ. ಅದಕ್ಕೆ ಹಣ ಒದಗಿಸುವುದು ಎಷ್ಟೊಂದು ಗಂಭೀರವು ಮತ್ತು ಪ್ರಮುಖವೋ ಹಾಗೇನೆ ಅದರ ಆಶಯವನ್ನು ಅರ್ಥಮಾಡಿಕೊಳ್ಳುವುದು ಅಷ್ಟೇ ಗಂಭೀರವಾಗಿರಬೇಕು. ಆದರೆ ಆಗುತ್ತಿರುವುದೇನೆಂದರೆ ಈಗಿರುವ ಸಂಪ್ರದಾಯಿಕ ವಿಶ್ವವಿದ್ಯಾಲಯಗಳ ತದ್ರೂಪವೇ ಕಟ್ಟಬೇಕೆಂಬ ಧೋರಣೆಯಿಂದ ನಡೆದಿರುವ ಕಾರ್ಯ ನಿಜವಾಗಿಯೂ ಮಹಿಳಾ ವಿಶ್ವವಿದ್ಯಾಲಯದ ಆಶಯ ಸಾಕಾರಗೊಳ್ಳದಂತಿದೆ. ಈ ವಿಶ್ವವಿದ್ಯಾಲಯದ ಸ್ವರೂಪ ಧೋರಣೆಗಳ ಬಗ್ಗೆ ಸರಕಾರ ಬೇರೆ ಬೇರೆ ಕ್ಷೇತ್ರದಲ್ಲಿ ಕ್ರಿಯಾಶೀಲರಾಗಿರುವ ಸ್ವಂತ ಬುದ್ಧಿ, ವ್ಯಕ್ತಿತ್ವವಿರುವ ಮಹಿಳೆಯರ ಒಂದು ಸಮಿತಿ ರಚಿಸಬೇಕು. ಅದರಲ್ಲಿ ಸ್ತ್ರೀಪರಧೋರಣೆಯನ್ನು ಗಂಭೀರವಾಗಿ ತೆಗೆದುಕೊಂಡಿರುವ ಪ್ರಗತಿಪರ ಗಂಡಸರನ್ನು ಸೇರಿಸಬೇಕು. ಅವರ ವಿಚಾರ, ಅಭಿಪ್ರಾಯಗಳನ್ನು ಮತ್ತು ಸಾರ್ವಜನಿಕ ಅಭಿಪ್ರಾಯಗಳನ್ನು ಆಹ್ವಾನಿಸಿ ಅವೆಲ್ಲವುಗಳನ್ನು ಚಿಂತನ-ಮಂಥನಕ್ಕೆ ಒಳಪಡಿಸಿ ಅದರ ಸ್ವರೂಪವನ್ನು ನಿರ್ಧರಿಸಿದರೆ ಸಮಸ್ತ ಮಹಿಳಾ ಲೋಕದ ಉದ್ಧಾರಕ್ಕೆ ವಿಶ್ವವಿದ್ಯಾಲಯ ಸ್ಪಂದಿಸಬೇಕಾದ ರೀತಿಯನ್ನು, ಕಾರ್ಯಸೂಚಿಯನ್ನು ಸಿದ್ಧಪಡಿಸಲು ಸಾಧ್ಯವಾಗಬಹುದು. ಸದ್ಯದ ಧೋರಣೆ ನೋಡಿದರೆ ಅದು ಅಧಿಕಾರಸ್ಥರ ಹಮ್ಮಿಕೆಯಿಂದ ಹೆಣ್ಣಿಗೆ ನೀಡಿದ ಭಿಕ್ಷೆಯಂತೆ ಕರ್ನಾಟದ ತಟ್ಟೆಯಲ್ಲಿ ಕಾಣಿಸುತ್ತಿದೆ.

ಈ ವಿಶ್ವವಿದ್ಯಾಲಯದ ಬಗ್ಗೆ (ಹೆಸರಿಡುವಂತೆ) ಅಭಿಪ್ರಾಯ ಪ್ರತಿ ಅಭಿಪ್ರಾಯ ವ್ಯಕ್ತವಾಗಿದೆ. ಇದರ ಕುರಿತ ಹಾಗೆ ಸಂಘ ಸಂಸ್ಥೆ ಜಾತಿ ವ್ಯಕ್ತಿಗಳು ಬೇರೆ ಬೇರೆ ಹೇಳಿಕೆಗಳನ್ನು ನೀಡಿದ್ದನ್ನು ನೋಡಿದರೆ ಇಂದು ಯಾವುದೇ ಚರಿತ್ರಾರ್ಹ ಮಹಿಳೆಯರ ಹೆಸರನ್ನು ಇಡಬೇಕು ಎಂದು ಹೇಳುತ್ತಿರುವ ಧ್ವನಿಯ ಹಿಂದೆ ಜಾತಿ, ಮತಧರ್ಮದ ಒತ್ತಾಸೆ ವ್ಯಾಮೋಹಗಳು ಕೆಲಸ ಮಾಡುತ್ತಿವೆಯೇ ಹೊರತು ಹೆಣ್ಣಿನ ಕುರಿತ ಹಾಗೆ ವೈಚಾರಿಕ ನೆಲೆಗಟ್ಟಿನಲ್ಲಿ ವೈಜ್ಞಾನಿಕ ತಿಳುವಳಿಕೆಯ ಇತ್ಯಾತ್ಮಕ ಹೇಳಿಕೆಗಳು ಹೊರಬರಲು ಸಾಧ್ಯವಾಗದ ಕುಬ್ಜವಾದ ಸಾಮಾಜಿಕ ಬದುಕು ನಮ್ಮನ್ನು ಸುತ್ತುವರಿದಿದೆ. ಇದು ಬರೀ ಮಹಿಳಾ ವಿಶ್ವವಿದ್ಯಾಲಯಕ್ಕೆ ಹೆಸರಿಡುವ ತೊಡಕಲ್ಲ. ಇಡೀ ಸಮಾಜದ ಅನಾರೋಗ್ಯದ ಸ್ಥಿತಿಯು ಹೌದು. ಇದರ ಅರಿವು ಮಹಿಳಾ ಲೋಕಕ್ಕೆ ದಕ್ಕಿದಾಗ ಮಾತ್ರ ಆರೋಗ್ಯಕರ ಸಾಮಾಜಿಕ ಬದುಕನ್ನು ಕಟ್ಟಿಕೊಳ್ಳಲು ಸಾಧ್ಯವಾಗಬಹುದು. ಈ ಎಲ್ಲಾ ಕಾರಣಗಳಿಗಾಗಿ ಅಕ್ಕ ಲಿಂಗಾಯತರ ಬಂಧಿಖಾನೆಯಿಂದಲೂ ಅತ್ತಿಮಬ್ಬೆ ಜೈನರ ಬಸದಿಗಳಿಂದಲೂ ಬಿಡುಗಡೆಗೊಂಡು ಸಕಲ ಸ್ತ್ರೀ ಸಮುದಾಯದ ಅರಿವಿನ ಆಳಕ್ಕೆ ಬೇರಿಳಿಸಬೇಕಾಗಿದೆ. ಹೀಗೆ ಹೆಸರಿಡಬೇಕೆಂಬುವವರು ನಿಜವಾದ ಅಕ್ಕನ ಆದರ್ಶ ಮತ್ತು ದಾನ ಚಿಂತಾವಣಿ ಅತ್ತಿಮಬ್ಬೆಯ ದಾನಧರ್ಮದ ಮೌಲ್ಯಕ್ಕಾಗಿ

ಅಲ್ಲವೆಂಬುದನ್ನು ಜಗತ್ತು ಅರಿಯುವಂತಾಗಬೇಕು. ಒಂದು ಆಶ್ಚರ್ಯದ ಸಂಗತಿಯೆಂದರೆ ಯಾರು ಪಂಚ ಪತಿವ್ರತೆಯರ ಹೆಸರನ್ನು ಇಡಬೇಕೆಂದು ಕೇಳದಿರುವುದು.

ಮಹಿಳಾ ವಿಶ್ವವಿದ್ಯಾಲಯ ಹೇಗಿರಬೇಕೆಂದರೆ ಜಗತ್ತಿನ ಮಹಿಳೆಯರ ಸಮಸ್ಯೆಯನ್ನು ಒಳಗೊಂಡ ಒಂದು ಜಾಗತಿಕ ಪ್ರಜ್ಞೆಯ ಆಧಾರದಿಂದ ವಿವಿಧ ಕ್ಷೇತ್ರಗಳ ಬಗ್ಗೆ ವೈಜ್ಞಾನಿಕ ನೆಲೆಯಲ್ಲಿ ಅಧ್ಯಯನ ನಡೆದು ಇಂತಹ ಸಮಸ್ಯೆಗಳಿಗೆ ಶಾಶ್ವತ ಪರಿಹಾರಗಳನ್ನು ಕಂಡು ಕೊಳ್ಳುವ ಅರ್ಥಪೂರ್ಣ ಫಲಿತಗಳನ್ನು ಹೊರಹಾಕುವಂತಿರಬೇಕು. ಇಂತಹ ಆಶಯದ, ಜ್ಞಾನದ ಒಂದು ಜಗತ್ಪ್ರಸಿದ್ಧ ಕೇಂದ್ರವಾಗಬೇಕೆಂದು ನಮ್ಮಂತವರ ಬಯಕೆ. ಸ್ತ್ರೀವಾದಿ ಸಿದ್ಧಾಂತವೆಂಬುದು ಎಲ್ಲಾ ಅನ್ಯಜ್ಞಾನ ಶಿಸ್ತುಗಳ ಹಾಗೆ ಒಂದು ಜ್ಞಾನ ಶಾಖೆ. ಅರಿವುಗೇಡಿ ಜವಾಬ್ದಾರಿಯಿಲ್ಲದ ಬುದ್ಧಿವಂತರ ಕೈಯಲ್ಲಿ ಸಿಕ್ಕು ಈ ವಿಷಯ ಪುರುಷ ದ್ವೇಷಕ್ಕೆ ಕಾರಣವಾಗಿದೆ. ಅಂತಿಮವಾಗಿ ಎಲ್ಲಾ ಸಿದ್ಧಾಂತಗಳು ಬಯಸುವಂತೆ ಮಾನವ ಕುಲಕೋಟಿಯ ಉದ್ಧಾರವನ್ನೇ, ನೆಮ್ಮದಿಯನ್ನು ಸ್ತ್ರೀವಾದವು ಬಯಸುತ್ತದೆ. ಮಹಿಳಾ ವಿಶ್ವವಿದ್ಯಾಲಯ ವೆಂಬುದು ಹುಟ್ಟಿಕೊಂಡಾಗಲೇ ಈ ತರಹದ ಬಾಲಗ್ರಹಗಳ ಕಾಟದಿಂದ ನಾನು ರೀತಿಯ ಸಂದೇಹಗಳು ಹುಟ್ಟಿಕೊಳ್ಳುತ್ತಿವೆ. ಇದು ಆರೋಕ್ಯಕರ ಲಕ್ಷಣವಲ್ಲ. ವಿಶೇಷ ಆಸಕ್ತಿಯಿಂದ ಕಳಕಳಿ, ಕಾಳಜಿಯಿಂದ ಈ ವಿಶ್ವವಿದ್ಯಾಲಯದಲ್ಲಿ ಎಲ್ಲಾ ವಿಷಯ (ಕ್ಷೇತ್ರಗಳನ್ನು)ವನ್ನು ಸ್ತ್ರೀ ಸಂಬಂಧಿ ಜ್ಞಾನಶಾಖೆಯಿಂದ ಅಧ್ಯಯನ ನಡೆದು ಚರಿತ್ರೆಯಲ್ಲಿ ಕಳಚಿ ಹೋಗಿರುವ ಉಭಯಲಿಂಗಿ ಸಮಾಜದ ಕೊಂಡಿಯನ್ನು ಬೆಸೆಯುವ ಧ್ಯೇಯ ಇದರದಾಗಬೇಕು. ಇಲ್ಲಿಂದ ಹೊರ ಬರುವ ಫಲಿತಗಳು ನೆಲದ ಮೇಲಿನ ಸ್ತ್ರೀಲಿಂಗಿಯಾಗಿ ಹುಟ್ಟುವ ಮನುಷ್ಯ ಮತ್ತು ಪ್ರಾಣಿಯ ಬದುಕು ಸಹ ಹಸನುಗೊಳ್ಳುವಂತಾಗಬೇಕು. ಈಗಾಗಲೇ ಯಾವ ಯಾವ ವಿಷಯಗಳನ್ನು ಬೋಧಿಸಬೇಕೆಂಬುದರ ಬಗ್ಗೆ ತೀರ್ಮಾನ ಮಾಡಲಾಗಿದೆ. ಆ ಎಲ್ಲಾ ವಿಷಯ ಗಳಲ್ಲಿಯೂ ಆಯಾ ಕ್ಷೇತ್ರಕ್ಕೆ ಅನುಗುಣವಾಗಿ ಸ್ತ್ರೀ ಪ್ರಜ್ಞೆಯನ್ನು ಕೇಂದ್ರವಾಗಿಟ್ಟುಕೊಂಡು ಒಂದು ಪತ್ರಿಕೆಯನ್ನು ಕಡ್ಡಾಯಗೊಳಿಸುವಂತಾಗಬೇಕು. ಹೀಗೆ ಮಾಡುವುದರಿಂದ ಮಹಿಳಾ ವಿಶ್ವವಿದ್ಯಾಲಯದ ಪರಿಕಲ್ಪನೆ ಸಾರ್ಥಕಗೊಳ್ಳಬಹುದೆ ಹೊರತು ಬರೀ ಮಹಿಳೆಯರು ಓದುವುದರಿಂದ ಬರೆಯುವುದರಿಂದ ಅಲ್ಲ.

ಹಿಂದೆ ಕನ್ನಡ ವಿಶ್ವವಿದ್ಯಾಲಯವನ್ನು ಕಟ್ಟುವಾಗ ಕನಸುಗಾರ ಡಾ. ಚಂದ್ರಶೇಖರ ಕಂಬಾರ ಅವರು ನಾಡಿನಾದ್ಯಂತ ಇರುವ ವಿದ್ವಾಂಸರನ್ನು ವಿಚಾರವಂತರನ್ನು ಬುದ್ಧಿ ಜೀವಿಗಳು, ರಾಜಕಾರಣಿಗಳನ್ನು ಒಳಗೊಂಡ ಹಾಗೆ ಎಲ್ಲರ ಅಭಿಪ್ರಾಯ ಅನಿಸಿಕೆಗಳನ್ನು ಸಂಗ್ರಹಿಸಿ ಅದರ ಆಸ್ತಿ ಭಾರ ಹಾಕಿದ್ದರು. ಜೊತೆಗೆ ಪ್ರಾರಂಭದಲ್ಲಿ ವಿಶ್ವವಿದ್ಯಾಲಯದ ಅತ್ಯಂತ ಗಂಭೀರವಾದ ಅಧ್ಯಾಪಕ ವರ್ಗವನ್ನು ಡಾ. ಕಂಬಾರ ಅವರ ವಿವೇಚನೆಗೆ ಸರಕಾರ ಬಿಟ್ಟಿತ್ತು. ನಾಡಿನಾದ್ಯಂತ ಇದ್ದ ಬುದ್ಧಿವಂತ, ಶ್ರದ್ಧಾವಂತ ಅಧ್ಯಾಪಕರನ್ನು ಗುರುತಿಸಿ ಅವರಿಗೆ ಹೆಚ್ಚಿನ ಸ್ಥಾನಮಾನದ ಸೌಲಭ್ಯ ನೀಡಿ ಕರೆ ತಂದು ಕೆಲಸ ಪ್ರಾರಂಭಿಸಿದರು. ಆದರೆ ಮಹಿಳಾ ವಿಶ್ವವಿದ್ಯಾಲಯಕ್ಕೆ ಇಂತಹ ಅವಕಾಶವನ್ನು ಬೇಡುವ, ಪಡೆಯುವ

ಶಕ್ತಿವಂತರನ್ನು ಅಧಿಕಾರಕ್ಕೇರಿಸುವ ಮಹತ್ವಕಾಂಕ್ಷೆ ಸರಕಾರಕ್ಕೆ ಇಲ್ಲದೆ ಇರುವುದರಿಂದ ಅದು ಓಟಿನ (ಮತದ) ಲೆಕ್ಕಚಾರದಲ್ಲಿ ಜಾತಿ ಕುಲಗೋತ್ರದ ಹಂಗಿಗೆ ಕಟ್ಟು ಬಿದ್ದಿವೆ. ಮಹಿಳಾ ವಿಶ್ವವಿದ್ಯಾಲಯ ಕರ್ನಾಟಕದ ಅಷ್ಟೇ ಅಲ್ಲ ವಿಶ್ವದ ಮಹಿಳಾ ವರ್ಗದ ಬದುಕಿನ ತೊಡಕನ್ನು ಬಿಡಿಸುವ ಜವಾಬ್ದಾರಿಯನ್ನು ಹೊರಬೇಕೆಂಬ ಇಚ್ಛಾಶಕ್ತಿಯನ್ನು ನಾಡಿನ ಪ್ರಜ್ಞಾವಂತರು ತುಂಬುಬೇಕು. ಈಗಾಗಲೇ ವಿಶ್ವವಿದ್ಯಾಲಯ ವಿದ್ಯುಕ್ತವಾಗಿ ತನ್ನ ಕಾರ್ಯಕಲಾಪಗಳನ್ನು ಪ್ರಾರಂಭಿಸಿದೆ. ಕರ್ನಾಟಕದ ಎಲ್ಲಾ ವಿಶ್ವವಿದ್ಯಾಲಯಗಳಿಗೆ, ಕಾಲೇಜುಗಳಿಗೆ ಸುತ್ತೋಲೆಯನ್ನುಕಳಿಸಿ ಅಲ್ಲಿಂದ ಬರಲು ಇಚ್ಛಿಸುವವರನ್ನು ಕರೆತರಲಾಗಿದೆ. ನಿಜವಾಗಿಯೂ ಸರಕಾರಕ್ಕೆ ಇದರ ಬಗ್ಗೆ ಕಾಳಜಿ ಇದ್ದರೆ ನಾಡಿನ ಬೇರೆ ಬೇರೆ ಭಾಗದಲ್ಲಿರುವ ಸ್ತ್ರೀ ಸಂವೇದನೆಯ ವಿಚಾರವಂತೆ, ಬುದ್ಧಿವಂತೆ ವ್ಯಕ್ತಿಗಳನ್ನು ವಿಶೇಷ ಸೌಲಭ್ಯ ಸ್ಥಾನ ನೀಡಿ ಕರೆತಂದು ಅಸ್ತಿಭಾರ ಹಾಕಿಸುವಂತಾಗಬೇಕು.

ಕರ್ನಾಟಕದ ಬಹುತೇಕ ವಿಶ್ವವಿದ್ಯಾಲಯಗಳು ಇನ್ನೂರು ಮುನ್ನೂರು ಎಕರೆಯಲ್ಲಿ ತಲೆ ಎತ್ತಿವೆ. ನಗರದ ಅಬ್ಬರದಿಂದ ದೂರವಿರುವ ಈ ಜ್ಞಾನ ಕೇಂದ್ರಗಳಲ್ಲಿ ನೀಲಗಿರಿ, ಜಾಲಿ, ಬಾರಿ, ಸುಬಾಹುಲದಂತ ಗಿಡಗಳನ್ನು ಬೆಳೆಸುವುದಕ್ಕಿಂತಲೂ ತೇಗ ಮತ್ತು ಬೇವು ಗಂಧ, ಹುಣಸೆ, ಮಾವು, ಗುಲಾಬಿ ಬೆಳೆಸಿದರೆ ಖಾಸಗೀಕರಣದ ತೂಗುಕತ್ತಿಯ ಭಯದಿಂದ ಮುಕ್ತರಾಗಲು ಅಲ್ಪಸ್ವಲ್ಪ ಸಹಾಯವಾದೀತು. ಇದರಿಂದ ದಲಿತರಿಗೆ, ಮಹಿಳೆಯರಿಗೆ, ಬಡವರಿಗೆ ಉನ್ನತ ಶಿಕ್ಷಣ ದುಬಾರಿಯಾಗುವ ದುರಂತವನ್ನು ಮುಂದಿನ ದಿನಗಳಲ್ಲಿ ತಪ್ಪಿಸಬಹುದು. ವಿಶ್ವವಿದ್ಯಾಲಯ ಸರಕಾರ ಮತ್ತು ಯು.ಜಿ.ಸಿ. ನೀಡುವ ಧನಸಹಾಯಕ್ಕಾಗಿ ಕಣ್ಣಿಟ್ಟುಕೊಂಡು ಕುಳಿತುಕೊಳ್ಳುವುದಕ್ಕಿಂತಲೂ ಇಂತಹ ಸಣ್ಣ ಪ್ರಮಾಣದ ಪ್ರಯೋಗಗಳನ್ನು ಮಾಡುವಂತಾಗಬೇಕು.

ಆದಾಗ್ಯೂ ಒಂದು ಅನುಮಾನ ಕಾಡುತ್ತಿದೆ. ಮಹಿಳಾ ವಿಶ್ವವಿದ್ಯಾಲಯ ಅಖಂಡ ಕರ್ನಾಟಕವನ್ನು ಬೆಸೆಯುವ ಕೇಂದ್ರವಾಗಬಲ್ಲುದೆ ಎಂದು. ವರ ಬರುವವರೆಗೂ ಅಥವಾ ವಿದ್ಯಾವಂತ ಯುವಕರು ಉದ್ಯೋಗದಲ್ಲಿ ಮಹಿಳೆಯರಿಗೆ ಮೀಸಲಾಯಿರುವುದರಿಂದ ಪದವಿ ಪಡೆದ ಕನ್ಯೆಯರನ್ನು ಬಯಸುತ್ತಿರುವುದರಿಂದ ಮಧ್ಯಮ ವರ್ಗದವರು ಮಗಳಿಗೆ ಶಿಕ್ಷಣ ನೀಡುತ್ತಿರುವರೇ ವಿನಃ ಮಗಳು ತನ್ನ ಕಾಲ ಮೇಲೆ ನಿಲ್ಲಲಿ ಎಂಬ ಕಾರಣಕ್ಕಾಗಿಯಲ್ಲ. ಪರಿಸ್ಥಿತಿ ಹೀಗಿರುವಾಗ ದೂರದ ಮೈಸೂರಿನಿಂದ, ಮಡಿಕೇರಿಯಿಂದ, ಮಂಗಳೂರಿನಿಂದ ತಂದೆ ತಾಯಿಗಳು ತಮ್ಮ ಹೆಣ್ಣು ಮಕ್ಕಳನ್ನು ಓದಲು ಈ ವಿಶ್ವವಿದ್ಯಾಲಯಕ್ಕೆ ಕಳುಹಿಸಬಲ್ಲರೆ? ಇಂತಹ ಸಮಸ್ಯೆಗೆ ಉತ್ತರ, ಈ ವಿಶ್ವವಿದ್ಯಾಲಯದ ಪದವಿಗಳಿಂದ ಉದ್ಯೋಗ ಪಡೆದುಕೊಳ್ಳುವ ಭರವಸೆ ನೀಡುವಂತಾಗಬೇಕು. ಒಂದು ವೇಳೆ ಇಡೀ ಕರ್ನಾಟಕವನ್ನು ಕೈಬೀಸಿ ಕರೆಯುವ ಶಕ್ತಿ ಇದಕ್ಕೆ ಇಲ್ಲದೆ ಹೋದರೆ ಇದು ವಿಜಾಪುರ ಜಿಲ್ಲೆಯ ಹಿರಿಯ ಬಾಲಕಿಯರ ಪ್ರೌಢಶಾಲೆಯಾಗಿ ಉಳಿಯುವ ಅಪಾಯವೂ ಇದೆ. (ಇಲ್ಲಿ ಪರಿಚಯಿಸಿರುವ ಬಿ.ಎಡ್, ಎಂ.ಎಡ್‌ಗಳಿಗೆ ಈ ಮಾತು ಅನ್ವಯಿಸಲಿಕ್ಕಿಲ್ಲ)

ಆಡಳಿತಾತ್ಮಕವಾಗಿಯಾದರೂ ಈ ವಿಶ್ವವಿದ್ಯಾಲಯ ಕರ್ನಾಟಕದ ನೆಲ ಜಲವನ್ನು ಆವರಿಸಿಕೊಳ್ಳಬೇಕಾದರೆ ಕರ್ನಾಟಕದ ಎಲ್ಲಾ ಮಹಿಳಾ ವಿದ್ಯಾಲಯಗಳನ್ನು ಇದರಲ್ಲಿ ಸಲಗ್ನಗೊಳಿಸಬೇಕು. ಅಂದಾಗ ವ್ಯವಹಾರದ ಕಾರಣಕ್ಕಾದರೂ ದೂರದ ವಿಜಾಪುರಕ್ಕೆ ಕೊಡಗಿನ ಕಾವೇರಿಯರು ಬಂದ ಹೋಗುವಂತಾಗುವುದರಿಂದ ಸಾಂಸ್ಕೃತಿಕ ಸಂಚಲನ ವುಂಟಾದೀತು. ಮತ ಬ್ಯಾಂಕಿನ ಲೆಕ್ಕಚಾರದಲ್ಲಿ ಹುಟ್ಟಿಕೊಂಡಿರುವ ಮಹಿಳಾ ವಿಶ್ವವಿದ್ಯಾಲಯದಲ್ಲಿ ಇಷ್ಟೆಲ್ಲಾ ಕನಸು ತುಂಬಿಕೊಳ್ಳುವಂತಾಗಬೇಕೆಂಬ ಹಂಬಲ ನನ್ನದು.

●

## ಮಹಿಳಾ ವಿಶ್ವವಿದ್ಯಾಲಯ : ಆಶಯ

ಎಸ್.ಎಸ್. ಹಿರೇಮಠ

**ಕ**ಲಿಯುವವರು ಮಹಿಳೆಯರು ಮಾತ್ರ ಎಂಬ ಕಾರಣಕ್ಕೆ ಇದು ಮಹಿಳಾ ವಿಶ್ವವಿದ್ಯಾಲಯವಾಗಬಹುದು. ಕಲಿಸುವವರು ಬರಿ ಮಹಿಳೆಯರೇ ಇರುತ್ತಾರೆಂದು ನನಗೇನೂ ಅನಿಸುವುದಿಲ್ಲ. 'ಸ್ತ್ರೀವಾದಿ' ಪುರುಷ ಅಧ್ಯಾಪಕರನ್ನು ಈ ವಿಶ್ವವಿದ್ಯಾಲಯ ಒಳಗೊಳ್ಳಬಹುದು. ಈಗಾಗಲೇ ಪುರುಷ ಮತ್ತು ಮಹಿಳೆಯರಿಗೆ ನೀಡಲಾಗುತ್ತಿರುವ ಸಂಪ್ರದಾಯಿಕ ಶಿಕ್ಷಣ ಮಹಿಳಾ ವಿಶ್ವವಿದ್ಯಾಲಯದಲ್ಲೂ ಇರುವುದಾದರೆ ಅದಕ್ಕೆ ಮಹಿಳಾ ವಿಶ್ವವಿದ್ಯಾಲಯ ಎಂಬ ಹೆಸರು ಅನ್ವರ್ಥಕವಾಗದು. ಜಾಗತಿಕ ಮಟ್ಟದಲ್ಲಿ ಪ್ರಾರಂಭ ವಾಗಿರುವ "ಸ್ತ್ರೀವಾದಿ" ಎಂಬ ನೆಲೆಯ ಶಿಕ್ಷಣ ಸಂಸ್ಕೃತಿಯನ್ನು ಈ ವಿಶ್ವವಿದ್ಯಾಲಯ ಬಿತ್ತಲಿದೆ ಎಂದರೆ ಅಲ್ಲಿಯೂ ಒಮ್ಮತ ಮೂಡುವ ಸಂಭವ ಕಡಿಮೆ. ಏಕೆಂದರೆ ಸ್ತ್ರೀವಾದಕ್ಕೆ ಏಕಮುಖ ಆಶಯವೇನಿಲ್ಲ. ಒಂದೊಂದು ದೇಶ, ಕಾಲ ಸಂದರ್ಭಕ್ಕೆ ತಕ್ಕಂತೆ ಅಭಿಪ್ರಾಯ ಭೇದಗಳಿವೆ. ಅವನ್ನೆಲ್ಲ ಅಧ್ಯಯನ ಪಠ್ಯವಾಗಿ ಮಹಿಳಾ ವಿಶ್ವವಿದ್ಯಾಲಯ ಇಟ್ಟುಕೊಳ್ಳ ಬಹುದೇನೋ.

ಮಹಿಳಾ ವಿಶ್ವವಿದ್ಯಾಲಯ ಪ್ರಾರಂಭಿಸಲಿರುವ ಸರಕಾರ ಅದರ ಆಶಯದ ಕುರಿತು ಸ್ಪಷ್ಟವಾಗಿ ಏನೂ ಹೇಳಿಲ್ಲ. ಅದು ಗೊತ್ತಾಗಿದ್ದಿದ್ದರೆ ಅದರ ಸಾಧಕ-ಬಾಧಕಗಳನ್ನು ಆಲೋಚಿಸಲು ಬರುತ್ತಿತ್ತು. ಸಂಪ್ರದಾಯಿಕ ಶಿಕ್ಷಣ ಕ್ರಮದಿಂದ ಹೊರತಿರುವಂತೆ ಮಹಿಳಾ ವಿಶ್ವವಿದ್ಯಾಲಯದ ಆಶಯಗಳೇನಿರಬೇಕು ಎಂದು ಆಲೋಚಿಸುವುದು ಕಾಲ್ಪನಿಕವಾಗ ಬಹುದೇನೋ. ಅದು ನಮ್ಮ ನಮ್ಮ ದೃಷ್ಟಿ ಧೋರಣೆ ಮತ್ತು ಕನಸುಗಳಾಗಿರಬಹುದು. ಹಾಗಿದ್ದರೂ ಸರಿಯೇ ಅಂಥ ಕನಸು ಇಲ್ಲಿದೆ -

ಈಗಿನ ಮಹಿಳಾ ಸಂಘಟನೆಗಳು ಸರ್ವೇಸಾಮಾನ್ಯವಾಗಿ ತಿಳಿದಿರುವಂತೆ ಜಗತ್ತಿನ ಪ್ರಥಮ ಶೋಷಿತೆಯರು ಮಹಿಳೆಯರು. ವರ್ಗಗಳನ್ನು ಮೀರಿ (ಮೇಲ್ವರ್ಗ-ಕೆಳವರ್ಗ) ಲಿಂಗ ಶೋಷಣೆ ಚರಿತ್ರೆಯುದ್ದಕ್ಕೂ ಸಾಮಾನ್ಯ ವಾಸ್ತವ. ಸ್ತ್ರೀ ಶೋಷಕರು ಆಕಸ್ಮಿಕ ಅಥವಾ ಅಪವಾದಗಳು. ಇದೆಲ್ಲ ನಿಜ. ಆದರೆ ಭಾರತದ ನಿಜವಾದ ನೆಲೆಗಟ್ಟೇ ಬೇರೆ ಇದೆ. ಅದು ಸ್ತ್ರೀವಾದಿಗಳ ಗ್ರಹಿಕೆ ಎಷ್ಟು ಸೀಮಿತ. ಸಂಕುಚಿತ ಎಂಬುದನ್ನು ಖಚಿತಪಡಿಸುತ್ತದೆ. ದೀರ್ಘಕಾಲದವರೆಗೆ ಮತ್ತು ದೇಶವ್ಯಾಪಿಯಾಗಿದ್ದ (ಈಗಿನ ವಿದೇಶಿವ್ಯಾಪ್ತಿಯೂ ಹೌದು)

ಮಾತೃಪ್ರಧಾನ ಸಮಾಜದ ಒಡಲೊಳಗಿಂದ ಹುಟ್ಟಿದ್ದ ಜ್ಞಾನ ವಿಜ್ಞಾನ ಪರಂಪರೆ ನಮ್ಮಲ್ಲಿ ತುಂಬ ಅಗಾಧವಾಗಿದೆ. ಅದು ಇಂದಿಗೂ ಕೂಡ ಅಷ್ಟಿಷ್ಟು ಉಳಿದಿರುವುದು ಆಶ್ಚರ್ಯವೇನಲ್ಲ. ಅಳಿಯ ಸಂತಾನ ಪದ್ಧತಿ ಒಂದು ನಿದರ್ಶನ. ಗ್ರಾಮದೈವಗಳಲ್ಲಿ ಸ್ತ್ರೀ ದೈವಗಳು ಪ್ರಬಲ ವಾಗಿರುವುದು ಇನ್ನೊಂದು ಉದಾಹರಣೆ.

ಧಾರ್ಮಿಕ, ತಾತ್ವಿಕ, ಸಾಹಿತ್ಯಿಕ, ಸಾಂಸ್ಕೃತಿಕ ಕ್ಷೇತ್ರದಲ್ಲಿ ತಂತ್ರ, ಯೋಗ, ಸಾಂಖ್ಯಗಳು ತುಂಬ ಗಮನಾರ್ಹವಾದ ಉಳಿಕೆಗಳು. ತಾಂತ್ರಿಕ ಪಂಥದ ಮೂಲಕ ಭಾರತೀಯ ಮಹಿಳೆಯ ಸಾಧನೆಯನ್ನು ಗುರುತಿಸಲಾಗಿಲ್ಲ. ತಂತ್ರದಿಂದಾಗಿರುವ ಪ್ರಭಾವ, ಪರಿಣಾಮಗಳ ಅಂದಾಜು ಮಾಡಲಾಗಿಲ್ಲ. ಮಹಿಳೆಯರ ಸೃಷ್ಟಿಯಾದ 'ತಂತ್ರ' ಪುರುಷರ ಪಾಲಾದ ನಂತರವೂ ಸ್ತ್ರೀ ಮಹತ್ವವನ್ನು ತೆಗೆದು ಹಾಕಲು ಸಾಧ್ಯವಾಗಲಿಲ್ಲ. ಇಂದಿಗೂ ಆ ಪರಂಪರೆ ತಳಮಟ್ಟದ ಜನಸಮೂಹಗಳಲ್ಲಿ ಜೀವಂತವಿರುವುದನ್ನು 'ಶಿಷ್ಟ ಶಿಕ್ಷಣ ಪರಂಪರೆ' ಗುರುತಿಸಲಿಕ್ಕೂ ಕೂಡ ಹಿಂಜರಿಯುತ್ತದೆ, ಮುಜುಗರಿಸುತ್ತದೆ.

ಇದೆಲ್ಲವನ್ನು ಹೇಳಬೇಕಾಗಿ ಬಂದಿರುವ ಕಾರಣ ಸ್ಪಷ್ಟವಿದೆ - ಮಹಿಳಾ ವಿಶ್ವವಿದ್ಯಾನಿಲಯಕ್ಕೆ ಈ ಭಾರತೀಯ ನೆಲೆಗಟ್ಟಿಲ್ಲದಿದ್ದಾಗ ಅದರಿಂದ ಪ್ರಯೋಜನ ವಾದರೂ ಏನು? ತಂತ್ರ ಗ್ರಂಥಗಳು, ಟಿಬೇಟ್ ನೇಪಾಳದಂಥ ಪಕ್ಕದ ದೇಶ ಗಳಲ್ಲಿ ವಿಪುಲವಾಗಿವೆ. ಆಧುನಿಕ ಸಂವೇದನೆ, ಆದಿಮ ಸಂವೇದನೆಯ ಜತೆ ಬೆಸಗೊಳ್ಳದೆ ಫಲಪ್ರದವಾದ ಶೋಧನೆಗಳನ್ನು ಮಾಡಲಿಕ್ಕಾಗದು. ಮೇಲಿನ ವಿಷಯದ ಪ್ರಾಮುಖ್ಯತೆಯನ್ನು ಮತ್ತು ಪ್ರಸ್ತುತತೆಯನ್ನು ಕುರಿತು ಈ ಸಣ್ಣ ಬರಹದಲ್ಲಿ ಖಂಡಿತ ಹೆಚ್ಚಿಗೆ ಹೇಳಲು ಸಾಧ್ಯವಿಲ್ಲ.

ಮಹಿಳಾ ವಿಶ್ವವಿದ್ಯಾಲಯದ ತಾತ್ವಿಕ ಅಡಿಪಾಯವಾಗಬೇಕಾದದ್ದು ಇದು. ಚರಿತ್ರೆಯುದ್ದಕ್ಕೂ ಮತ್ತು ಸಮಕಾಲೀನ ಸಂದರ್ಭದಲ್ಲೂ ಮಹಿಳೆಯರ ಸ್ಥಿತಿಗತಿ, ಸಾಧನೆ, ಸಿದ್ಧಿಗಳ ಕುರಿತ ಶೋಧನೆಗಳು ಪಠ್ಯಕ್ರಮದ ಭಾಗವಾಗಿರಬೇಕು. ಮಹಿಳಾ ಸಬಲೀಕರಣ ಮತ್ತು ಸಮಾನತೆಗಾಗಿನ ಹೋರಾಟ ಪುರುಷರ ಜತೆ ಜತೆಗೆ ಸಾಗಬೇಕಾದುದು ಅನಿವಾರ್ಯ. ಇದು ಇಡೀ ಶೋಷಿತ ಸಮೂಹದ ವಿಮೋಚನೆಯ ಪ್ರಶ್ನೆಗೆ ತಳಕುಹಾಕಿಕೊಂಡಿದೆ. ಈ ಗ್ರಹಿಕೆ ಮೂಲಭೂತವಾಗಿರಬೇಕು. ಏಕೆಂದರೆ ಮಹಿಳೆಯರೇ ಪ್ರತ್ಯೇಕವಾಗಿ ಹೋರಾಡುವ ಸಂಘಟಿತರಾಗುವ ಉದ್ದೇಶಕ್ಕೂ ಶೋಷಿತ ಪುರುಷ ಲೋಕದ ಪ್ರಶ್ನೆಗಳಿಗೂ ಅಂತರವೇ ಇಲ್ಲ. ಇದು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ನೆಲೆಗಳಲ್ಲಿನ ಸಮಾನತೆಗೆ ಸಂಬಂಧಿಸಿದೆ. ನಿಜ, 'ಲಿಂಗತಾರತಮ್ಯ'ದ ಪ್ರಶ್ನೆ ತುಂಬ ಗಹನವಾದುದು. ಅದರ ಕುರಿತ ಪಠ್ಯ ಕಡ್ಡಾಯ ವಾಗಿರಬೇಕು. ಇದಕ್ಕೆ ಜೈವಿಕವಷ್ಟೇ ಅಲ್ಲ ಬಹುಮುಖಿ ಆಯಾಮಗಳಿವೆ.

ಇದು ಶೋಷಿತರ ನಡುವಿನ ಪ್ರಶ್ನೆಯೂ ಕೂಡ. ಅಂದರೆ ಶೋಷಿತರಲ್ಲೇ ಇರುವ ಲಿಂಗತಾರತಮ್ಯದ ಪ್ರಶ್ನೆ. ಶೋಷಿತರ ಒಟ್ಟು ಹೋರಾಟದ ಭಾಗವಾಗಿ ಮಾತ್ರ ಲಿಂಗತಾರತಮ್ಯದ ಪ್ರಶ್ನೆಯೂ ಚರ್ಚಿತವಾಗುವುದಾದರೆ ಮಾತ್ರ ಆರೋಗ್ಯಕರವಾದ ಪರಿಹಾರ

ಸಾಧ್ಯ. ಇಲ್ಲದಿದ್ದರೆ ಇನ್ನೊಂದು ಬಗೆಯ ಅತಿರೇಕಗಳಿಗೆ ಹೋಗುವ ಅಪಾಯವಿದೆ. ಜನಸಂಖ್ಯೆಯ ಅರ್ಧಭಾಗವಾಗಿರುವ ಮಹಿಳೆಯರ ಪ್ರಧಾನ ಪ್ರಶ್ನೆಗಳು 'ಗೃಹಿಣಿ'ತನಕ್ಕೆ ಸಂಬಂಧಿಸಿವೆ. ಆಧುನಿಕ ವಿಜ್ಞಾನ, ತಂತ್ರಜ್ಞಾನ ಗೃಹಿಣಿತನದ ಸಮಸ್ಯೆಗಳಿಗೆ ಪರಿಹಾರ ಒದಗಿಸಿದರೂ ಬಡರಾಷ್ಟ್ರಗಳಲ್ಲಿ ಅದು ಸುಲಭ ಲಭ್ಯವಿಲ್ಲ. ಗೃಹಸಂಬಂಧೀ ಪಠ್ಯಕ್ರಮದ ಕುರಿತು ಮಹಿಳಾ ವಿಶ್ವವಿದ್ಯಾಲಯ ಗಂಭೀರವಾಗಿ ಆಲೋಚಿಸಬೇಕು. ಮಕ್ಕಳ ಉತ್ಪಾದನೆಯ ಪ್ರಶ್ನೆಯೂ ಇದಕ್ಕೆ ತಳಕು ಬಿದ್ದಿದೆ. ಸಂಬಳವಿಲ್ಲದ ಈ ಬಿಟ್ಟಿ ದುಡಿಮೆಗೆ ಗೌರವವೂ ಇಲ್ಲ. ಮಿತಿಯೂ ಇಲ್ಲ.

ಶ್ರಮಿಕ ವರ್ಗದ ಮಹಿಳಾ ಸಮಸ್ಯೆ ಅತ್ಯಂತ ಗಂಭೀರ. ಮಹಿಳಾ ವಿಶ್ವವಿದ್ಯಾಲಯ ಇದರ ಕುರಿತು ಏನು ಯೋಚಿಸುತ್ತಿದೆಯೋ? ಆರ್ಥಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹೀಗೆ ಎಲ್ಲ ಕ್ಷೇತ್ರಗಳಲ್ಲಿ ಮಹಿಳೆಯರು ಎದುರಿಸುತ್ತಿರುವ ಕಷ್ಟ-ಸುಖಗಳ ಕುರಿತು ವೈಜ್ಞಾನಿಕ ತಿಳುವಳಿಕೆ ಮೂಡುವಂತೆ, ಸಮರ್ಪಕ ಪರಿಹಾರೋಪಾಯಗಳ ಕಲ್ಪನೆ ಬರುವಂತೆ ಹೊಸ ಪಠ್ಯಕ್ರಮ ರೂಢಿಸುವ ಜರೂರಿದೆ.



## ಅಭಿವ್ಯಕ್ತಿ : ಅಂದು

ಪ್ರಿಯಂವದಾ ದಿ. ಆರ್. ಕಲ್ಯಾಮ್ಮನವರು ೧೯೨೨ ರಲ್ಲಿ ಹೊರತಂದಿರುವ ಕೃತಿ. 'ವರದಕ್ಷಿಣೆ' ಸಮಸ್ಯೆಯನ್ನು ಕುರಿತಿರುವ ಈ ಕೃತಿ ಮಹಿಳಾ ವಿಷಯಗಳನ್ನು ಅಂದಿನ ಲೇಖಕಿಯರು ಪರಿಭಾವಿಸುತ್ತಿದ್ದ ರೀತಿಯನ್ನು ತೋರಿಸಿ ಕೊಡುತ್ತದೆ.

- ಸಂ.

# ಪ್ರಿಯಂವದಾ

**ದಿ. ಆರ್. ಕಲ್ಯಾಣಮ್ಮ**

(ವರದಕ್ಷಿಣೆಯಿಂದಾಗುವ ಕಷ್ಟನಷ್ಟಗಳು)

೧ನೆಯ ಅಧ್ಯಾಯ

### ಮಾತೃವಾತ್ಸಲ್ಯ

**ಸುಂ**ದರವಾದ ಭವನ. ಅದರಲ್ಲಿ ಮಧ್ಯ ವಯಸ್ಕಳಾದ ತರುಣಿಯೊಬ್ಬಳು ಒಂದು ಕಡೆ ಗೋಡೆಗೊರಗಿ ಕುಳಿತುಕೊಂಡು ಎದುರಿನಲ್ಲಿ ಪುಸ್ತಕವನ್ನೋದುತ್ತಾ ಕುಳಿತಿದ್ದ ಪುತ್ರಿಯನ್ನು ವಾತ್ಸಲ್ಯದಿಂದ ನೋಡುತ್ತಿದ್ದಳು. ತಾಯಿಯು ತನ್ನನ್ನೇ ದೃಷ್ಟಿಸಿ ನೋಡುತ್ತಿರುವುದನ್ನು ಕಂಡು ಪುತ್ರಿಯು "ತಾಯೇ! ನನ್ನನ್ನೀ ರೀತಿಯಾಗಿ ಎವೆಯಿಕ್ಕದೆ ಯಾತಕ್ಕೆ ನೋಡುತ್ತಿರುವಿರಿ" ಎಂದು ಕೇಳಿದಳು.

**ತಾಯಿ :** ಪ್ರಿಯಂವದೆ! ನಿನ್ನ "ಭವಿಷ್ಯತ್ತುಸುಖಗಳನ್ನುದ್ದೇಶಿಸಿಯೇ ಹೀಗೆ ನೋಡುತ್ತಿರುವೆನು" ಎಂದು ನಿಟ್ಟುಸುರುಬಿಡುತ್ತಾ ಹೇಳಿದಳು.

**ಪುತ್ರಿ :** ತಾಯೇ! ಸುಮ್ಮನೆ ಈ ರೀತಿ ಕೊರಗುವುದರಿಂದ ಆಗುವ ಪ್ರಯೋಜನವೇನು? ನಾನೇನಪರಾಧವನ್ನು ಮಾಡಿರುವೆನು? ನನ್ನ ಮೇಲೆ ತಪ್ಪಿದ್ದರೆ ಅದನ್ನು ತಿದ್ದುವುದನ್ನು ಬಿಟ್ಟು ಈ ರೀತಿ ಕೊರಗುವುದೇತಕ್ಕೆ? ಎಂದು ಅಂಗನಾಮಣಿಯು ಪಶ್ಚಾತ್ತಾಪ ಪಡುತ್ತಾ ಹೇಳಿದಳು.

**ತಾಯಿ :** ವತ್ಸೇ! ಏನೂ ಇಲ್ಲವು. ಎಲ್ಲಾ ಭಗವಂತನ ಲೀಲೆಯು. ನನ್ನಿಂದಲೂ ನಿನ್ನಿಂದಲೂ ಏನು ತಾನೇ ಆಗುವುದು? ನಮ್ಮಿಂದಾಗುವುದೆಂದು ಹೇಳುವುದು ವ್ಯರ್ಥವಾದ ಮಾತು, ಎಂದು ಹೇಳಿ ಕಣ್ಣೀರು ಸುರಿಯತೊಡಗಿದಳು.

ಆ ಮೇಲೆ ಬಹಳ ಹೊತ್ತು ತಾಯಿಯಾಗಲಿ, ಮಗಳಾಗಲಿ ಮಾತನಾಡಲಿಲ್ಲ. ಇವರ ಮೌನವನ್ನು ಕಂಡ ಪಂಜರದಲ್ಲಿದ್ದ ಗಿಳಿಯು "ಪ್ರಿಯಂವದಾ! ಬೆಕ್ಕು ಬಂತು ಓಡಿಬಾ" ಎಂದು ಕೂಗಿತು. ರಮಣಿ ಗಾಬರಿಪಟ್ಟು ತಿರುಗಿ ನೋಡಿದಳು. ಬೆಕ್ಕನ್ನು ಕಾಣದೆ ಮುದ್ದುರಾಮಾ! ನೀನು ಸುಳ್ಳು ಹೇಳಲು ಕಲಿತುಕೊಂಡೆಯಲ್ಲವೆ? ಸಾರ್ಥಕವಾಯಿತು; ಎಂದು ತನ್ನ ದುಃಖವನ್ನು ಮರೆತು ಗಿಳಿಯನ್ನು ಮುದ್ದಾಡಲಾರಂಭಿಸಿದಳು. ತಾಯಿಯು ಗೋಡೆಗೊರಗಿಕೊಂಡು ಬಹಳ ಹೊತ್ತು ಅತ್ತಳು. ಅತ್ತು ಅತ್ತು ಬೇಜಾರಾಗಿ ಕೊನೆಗೆ ಹಾಗೆಯೇ ಕೆಳಗೆ ಮಲಗಿಬಿಟ್ಟಳು.

ಇವರ ದುಃಖಕ್ಕೆ ಕಾರಣವೇನಿರಬಹುದೆನ್ನುವುದನ್ನು ಅರಿಯಲು ವಾಚಕರು ಕುತೂಹಲವುಳ್ಳವರಾಗಿರಬಹುದು. ಪ್ರಿಯಂವದೆಗೆ ತಂದೆ ಇರಲಿಲ್ಲ. ವಿಧವೆಯಾದ ತಾಯಿಯೊಬ್ಬಳಿದ್ದಳು. ಸ್ವಲ್ಪಮಟ್ಟಿಗೆ ಆಸ್ತಿಪಾಸ್ತಿಗಳು ಇದ್ದುದರಿಂದ ಶ್ರಮವಿಲ್ಲದೆ ಜೀವಿಸುತ್ತಿದ್ದರು. ಪ್ರಿಯಂವದೆಯನ್ನು ವಿಪ್ರಕುಲಾಚಾರದಂತೆ (ಪ್ರವೇಶ ಪರೀಕ್ಷೆಗೆ ಓದುತ್ತಿದ್ದ) ಬ್ರಹ್ಮಚಾರಿಯೊಬ್ಬನಿಗೆ ಕೊಟ್ಟು ಅವಳ ಒಂಭತ್ತನೆಯ ವಯಸ್ಸಿನಲ್ಲಿಯೇ ವಿವಾಹವಾಗಿದ್ದಿತು. ಧನಪಿಶಾಚಿಯಿಂದಾವರಿಸಲ್ಪಟ್ಟಿದ್ದ ಪ್ರಿಯಂವದೆಯ ಅತ್ತೆಯು, ಪದೇ ಪದೇ ಹಣವನ್ನು ಕೊಡಹೇಳಿ ಬೀಗತಿಯನ್ನು ಪೀಡಿಸುತ್ತಿದ್ದಳು. ಹಾಗೂ ಹೀಗೂ ಇದ್ದುದನ್ನೆಲ್ಲಾ ಮುಂದೆ ಮಗಳು ಸುಖಪಡುವಳೆನ್ನುವಾಸೆಯಿಂದ ಧಾರೆಯೆರೆದಳು. ಹಣವು ಸಾಲದರಿಂದ ಸೊಸೆಯನ್ನು ಮನೆಗೆ ಕರೆದುಕೊಳ್ಳುವುದು ಅಸಾಧ್ಯವೆಂದು ಅತ್ತೆಯಾದ ಅನ್ನಪೂರ್ಣೆಯು ಹೇಳಿ ಕಳುಹಿಸಿದಳು. ವಿಧವೆಯಾದ ಮಗಳನ್ನೂ ಮನೆಯಲ್ಲಿಟ್ಟು ಕೊಳ್ಳುವುದಕ್ಕೆ ಎಷ್ಟೋ ವ್ಯಸನಪಡುವಂಥ ತಾಯಿ ಅಳಿಯನು ಜೀವಿಸಿರುವಾಗ ಅವನ ಸಹವಾಸದಿಂದ ವಂಚಿತಳಾದ ಕನ್ಯೆಯನ್ನು ಕಣ್ಣೆದುರಿಗಿಟ್ಟುಕೊಂಡು ಸಂಕಟಪಡುವುದನ್ನು ನೋಡಿ ನೋಡಿ ಸಹಿಸಿಯಾಳೇ? ಮಗಳ ದುರಾವಸ್ಥೆಯನ್ನು ಕಂಡು ತಾಯಿಯು ಕರಗಿ ನೀರಾಗುತ್ತಿದ್ದಳು. ಮುಂದೆ ನಡೆಯುವ ತಾಯಿ ಮಕ್ಕಳ ಸಂಭಾಷಣೆಯಿಂದ ಮಿಕ್ಕ ವಿಷಯ ಗಳು ವ್ಯಕ್ತವಾಗುವುವು. ಈ ಸಂಭಾಷಣೆ ನಡೆಯುವ ಕಾಲದಲ್ಲಿ ಪ್ರಿಯಂವದೆಗೆ ವಿವಾಹವಾಗಿ ಆರು ವರ್ಷಗಳು ಕಳೆದುಹೋಗಿದ್ದವು.

**ಮಗಳು :** ಅಮ್ಮಾ, ಬಾಯಿಬಿಟ್ಟು ಹೇಳಬಾರದೇ. ಉತ್ತಮ ಜನನಿಯಾದ ನಿಮ್ಮ ಮನಸ್ಸು ನೋಯಲು ನಾನೇನು ಮಾಡಿದೆ?

**ತಾಯಿ :** ವತ್ಸೇ! ನಾನೇನು ಹೇಳಲಿ? ನೀನೇನೂ ಅಪರಾಧ ಮಾಡಲಿಲ್ಲ. ಪಾಪಿಯಾದ ನಾನಲ್ಲವೇ ನಿನಗೆ ಶತೃವು. ವಿಪ್ರಕುಲಾಚಾರದಂತೆ ನಿನ್ನ ಒಂಭತ್ತನೆಯ ವಯುಸ್ಸಿನಲ್ಲಿಯೇ ನಿನ್ನನ್ನೊಬ್ಬ ಬಡ ಬ್ರಹ್ಮಚಾರಿಗೆ ಕೊಟ್ಟು ವಿವಾಹ ಬೆಳೆಸಿದೆನು. ಹುಡುಗನು ಆಗ ಪ್ರವೇಶ ಪರೀಕ್ಷೆ (Entrance Examination)ಗೆ ಓದುತ್ತಿದ್ದನು. ಸುಂದರನು - ಆದರೆ ಕೇವಲ ದರಿದ್ರನು. ನಾನು ಅವನ ಬುದ್ಧಿಗೆ ಮೆಚ್ಚಿ ನಿನ್ನನ್ನು ಧಾರೆಯೆರದನೇ ಹೊರತು ಅವನ ದಾರಿದ್ರ್ಯವನ್ನಾಗಲೀ ಮತ್ತೇನನ್ನಾಗಲಿ ಎಣಿಸದೆ ಹೋದೆನು. ಓದಿ ಪರೀಕ್ಷೆ ಮಾಡಿ ಮುಂದೆ ಸಂಪಾದಿಸುವನೆಂಬ ಆಸೆಯಿಂದ ೧,೫೦೦ ರೂಪಾಯಿ ವರದಕ್ಷಿಣೆಯನ್ನೂ ಮತ್ತು ೧,೦೦೦

ರೂಪಾಯಿಗಳಿಗೆ ಆಭರಣ, ಪಾತ್ರೆ, ಧೋತ್ರ ಮೊದಲಾದುವುಗಳನ್ನು ಕೊಟ್ಟೆನು. ನಿನ್ನ ತಂದೆಯು ಗತಿಸಿದ ವರ್ಷದಲ್ಲಿ ಕನ್ಯಾದಾನ ಮಾಡಿದರೆ ಅವರಿಗೆ ಸ್ವರ್ಗ ಪ್ರಾಪ್ತಿಯುಂಟಾಗುವುದೆಂದು ವಿಪ್ರೋತ್ತಮರು ಹೇಳಿದ್ದರಿಂದ ಅವರ ಮಾತುಗಳನ್ನು ನಂಬಿ ಚೆನ್ನಾಗಿ ವಿಚಾರಿಸದೆ ವಿವಾಹ ಮಾಡಿಕೊಟ್ಟೆನು. ಈಗ ಕೊಟ್ಟ ೨,೫೦೦ ರೂಪಾಯಿಗಳು ಸಾಲವೆಂದು ಯುಗಾದಿ ಹಬ್ಬ, ಗಣೇಶನ ಹಬ್ಬ, ದೀವಳಿಗೆಹಬ್ಬ, ಆಹಬ್ಬ, ಈಹಬ್ಬ ಎಂದು, ಹೊತ್ತು ಹೋಗದೆ ಕಾರಣಗಳನ್ನು ಹೇಳಿ ನನ್ನಿಂದ ಮತ್ತೊಂದು ಸಾವಿರ ರೂಪಾಯಿಗಳನ್ನೂ ಕಿತ್ತುಕೊಂಡರು. ಇದೂ ನಮ್ಮ ದೇಶಪದ್ಧತಿಯೆಂದು ತಿಳಿದು ನಿನ್ನ ಮುಂದಿನ ಸುಖವನ್ನುದ್ದೇಶಿಸಿಯೂ ಕೊಟ್ಟೆನು. ವತ್ಸೇ! ನಿನ್ನ ತಂದೆಯು ಮರಣ ಹೊಂದುವಾಗ ಅವರಿಟ್ಟು ಹೋದ ಧನವು ಸುಮಾರು ಹತ್ತು ಸಾವಿರ ರೂಪಾಯಿಗಳಿರಬಹುದು. ಮದುವೆ, ಹಬ್ಬ, ಸಾಲ, ಇವುಗಳಿಗಾಗಿ ೩,೫೦೦ ರೂಪಾಯಿಗಳು ಖರ್ಚಾದವು. ಉಳಿದಿದ್ದ ಹಣವನ್ನಿಟ್ಟುಕೊಂಡು ಕಾಲ ಕಳೆಯುತ್ತಿರುವಾಗ ಅದು "ಕೊಂಡು ತಿನ್ನುವ ಕೋಳಿಗೆ ಕಾಲು ಮುರಿದುಹೋಯಿತು" ಎಂಬಂತೆ ನಾವು ಹಣವನ್ನು ಬಡ್ಡಿಗೆ ಕೊಟ್ಟಿದ್ದ "ಆರ್ಬತ್‌ನಾಟ್" (Arbuthnot) ಬ್ಯಾಂಕು ಮುಳುಗಿ ಹೋಯಿತು. ನನಗಿದ್ದ ಅಲ್ಪಸ್ವಲ್ಪ ಆಸ್ತಿಯೂ ಅದರಲ್ಲಿ ನಾಶವಾಯಿತು. ಈಗ ನನ್ನಲ್ಲಿರುವ ಹಣದಿಂದ ನಾವಿಬ್ಬರೂ ಜೀವಿಸುವುದೇ ಬಹಳ ಕಷ್ಟವಾಗಿರುವುದು. ನಮ್ಮ ಗತಿ ಹೀಗಿರುವಾಗ ೨,೦೦೦ ರೂಪಾಯಿಗಳನ್ನು ಕೊಟ್ಟರಲ್ಲದೇ ನಿಮ್ಮತ್ತೆಯ ಮನೆಯವರು ನಿನ್ನ ನಿಷೇಕ ಪ್ರಸ್ತವನ್ನು ನಡೆಸುವುದಿಲ್ಲವೆಂದು ಅನೇಕ ವೇಳೆ ಪತ್ರ ಮುಖಾಂತರ ತಿಳಿಸುವುದಲ್ಲದೆ ಅವರಿವರ ಕೈಲಿ ಹೇಳಿಯೂ ಕಳುಹಿಸುತ್ತಿರುವರು. ವತ್ಸೆ! ನಾನೇನು ಮಾಡಲಿ? ಪತಿ ಸುಖವಿಹೀನಳಾದ ನಿನ್ನನ್ನು ನೋಡಿ ಕೊರಗದೆ ನಾನೇನು ಮಾಡಲಿ? ನಿನಗೋಸ್ಕರ ಪ್ರಾಣವನ್ನಾದರೂ ಕೊಡಬಲ್ಲೆನು. ಆದರೆ ಹಣವನ್ನೆಲ್ಲಿಂದ ತರಲಿ? ನಿನ್ನ ಅತ್ತೆ ಮಾವಂದಿರಲ್ಲಿ ನನ್ನ ಪರಿತಾಪಸ್ಥಿತಿಯನ್ನು ಮೊರೆಯಿಟ್ಟೆನು. ಅವರನ್ನು ಬೇಡಿದೆನು. ಅವರ ಕಾಲಿಗೆ ಬಿದ್ದೆನು. ಆದರೂ ಹಣ ಕೊಡದಿದ್ದರೆ ಕೆಲಸವಾಗದೆಂದು ಗದರಿಸಿ ಓಡಿಸಿದರು. ನಿನಗೋ ಈಗ ೧೬ ವಯಸ್ಸಾಗಿರುವುದು. ನೀನು ಪತಿಗೃಹಕ್ಕೆ ಹೋಗದಿರುವುದನ್ನು ಕುರಿತು ಜನರು ನಾನಾ ವಿಧವಾಗಿ ಆಡಿಕೊಳ್ಳುತ್ತಿರುವರು. ಯಾವದೂ ತೋರದೆ ನನಗೆ ಬಹಳ ದುಃಖ ಉಂಟಾದುದರಿಂದ ಅತ್ತೆನು. ಈ ವಿಷಯವನ್ನು ನಿನಗೆ ತಿಳಿಸಿ ನಿನ್ನನ್ನೂ ದುಃಖಕ್ಕೀಡು ಮಾಡದಿರಬೇಕೆಂದೇ ನಿನಗೆ ಹೇಳದಿದ್ದೆನು. ಈ ದಿನ ನೀನು ಬಹಳವಾಗಿ ಕೇಳಿಕೊಂಡದ್ದರಿಂದ ಹೇಳಬೇಕಾಯಿತು.

**ಪುತ್ರಿ :** ಅಮ್ಮಾ! ನಿನ್ನ ಅಳಿಯನು ಬಿ.ಎ. (B.A.) ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ನ್ಯಾಯವಾದಿ ಪರೀಕ್ಷೆಗೆ ವ್ಯಾಸಂಗ ಮಾಡುತ್ತಿರುವರಲ್ಲಾ! ಅವರೊಂದಿಗೆ ನೀನು ಮಾತನಾಡಬಾರದೇ? ನಮ್ಮ ಜಾತಿಪದ್ಧತಿಗಳು ಅವರಿಗೆ ತಿಳಿದಿರಬಹುದಲ್ಲಾ. ಓದಿದ ವಿದ್ಯಾವಂತರು ಕೂಡ ಹಣಕ್ಕಾಸೆಪಡುವರೇ?

**ತಾಯಿ :** ನಮ್ಮ ಜಾತಿಯಲ್ಲಿ ಅಳಿಯನ ಸಂಗಡ ಮಾತನಾಡಕೂಡದು. ಯಾವ

ಕೆಲಸವನ್ನಾಗಲಿ ಹೆತ್ತವರ ಅನುಮತಿಯಂತೆಯೇ ಮಾಡಬೇಕು. ಆದ್ದರಿಂದ ಅವರೊಂದಿಗೆ ಮಾತಾಡುವುದರಿಂದ ಪ್ರಯೋಜನವೇನು ಇಲ್ಲ.

**ಪುತ್ರಿ :** ಅಮ್ಮಾ! ಹಾಗಾದರೇನು ಮಾಡುವೆ

**ತಾಯಿ :** ಮಾಡುವುದೇನು? ನಾನು ಪ್ರಾಣತ್ಯಾಗ ಮಾಡಲು ತೀರ್ಮಾನಿಸಿರುವೆನು. ಅದಕ್ಕೆ ಮುಂಚೆ ನಿನ್ನನ್ನು ಅವರ ಬಳಿ ಸೇರಿಸಬೇಕು. ಅಕಸ್ಮಾತ್ತಾಗಿ ಒಬ್ಬರ ಮನೆಯನ್ನು ಪ್ರವೇಶಿಸಲು ನನ್ನ ಮನಸ್ಸೊಪ್ಪಲಿಲ್ಲ. ನಿನ್ನನ್ನು ಪ್ರೀತಿಯಿಂದ ಆದರಿಸುವರೋ ಇಲ್ಲವೋ? ನಮಗೀ ಕನ್ಯೆಯು ಅವಶ್ಯಕವಿಲ್ಲವೆಂದು ನಿರಾಕರಿಸಿದರೆ ನಿನ್ನಗತಿಯೇನು? ನನ್ನನ್ನೂ ತ್ಯಜಿಸಿ ಅವರಿಂದಲೂ ನಿರಾಕರಿಸಲ್ಪಟ್ಟ ನೀನು, ಆದರಿಸುವರಿಲ್ಲದೇ ಏನು ಮಾಡುವೆ? ಇಬ್ಬರೂ ಮಡಿಯೋಣವೆಂದರೆ ಅದಕ್ಕೂ ಮನಸ್ಸೊಪ್ಪಲಿಲ್ಲ. ಈ ಸಂಕಟವು ನನ್ನನ್ನು ಬಾಧಿಸುತ್ತಿರುವುದು, ಎಂದು ಹೇಳಿ ರೋಧಿಸಲಾರಂಭಿಸಿದಳು.

ಪ್ರಿಯಂವದೆಯ ಮಾತನಾಡಲಿಲ್ಲ. ಅವಳ ಮಂದಹಾಸವದನವು ಬಾಡಿತು. ಕಣ್ಣಿನಿಂದ ಮುತ್ತಿನಂತೆ ನೀರು ಸುರಿಯಲಾರಂಭಿಸಿತು. ದುಃಖವನ್ನು ತಡೆಯಲು ಪ್ರಯತ್ನಿಸಿದಳು, ಸಾಧ್ಯವಾಗಲಿಲ್ಲ. ತಾಯಿಯ ಮಡಲಿನಲ್ಲಿ ಮಲಗಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು. ಮಗಳ ದುಃಖವನ್ನು ನೋಡಿದ ತಾಯಿಯು "ಪ್ರಿಯಂವದೇ! ಇದನ್ನೆಲ್ಲಾ ಯೋಚಿಸಿಯೇ ನಾನು ನಿನಗೀವಿಷಯವನ್ನು ತಿಳಿಸದಿದ್ದುದು. ನೀನು ಬುದ್ಧಿವಂತಳಾಗಿದ್ದೂ ಹೀಗೆ ವ್ಯಸನ ಪಡಬಹುದೇ" ಎಂದಳು.

**ಪ್ರಿಯಂವದೆ :** ತಾಯೇ, ನಾನು ಯಾತಕ್ಕಳುವೆನೆನ್ನುವುದು ನಿಮಗೆ ಗೊತ್ತುಂಟೇ? ಹೇಳುವೆನು ಕೇಳಿ. ಅವಿವೇಕಿಗಳು ಹಣದಾಸೆಯಿಂದ ಅನೇಕ ವಿಧವಾಗಿ ವರ್ತಿಸುವರು. ನನ್ನ ಪತಿಯಾದರೋ ಅತಿ ವಿದ್ಯಾವಂತರು. ಧರ್ಮಶಾಸ್ತ್ರಗಳನ್ನೋದಿರುವರು. ಈಗ ಅವರು ಅಭ್ಯಾಸ ಮಾಡುತ್ತಿರುವ ನ್ಯಾಯಶಾಸ್ತ್ರವು ಅವರಿಗೆ ಚೆನ್ನಾಗಿ ಪ್ರಪಂಚ ವ್ಯವಹಾರಗಳನ್ನು ತಿಳಿಸುವುದು. ಯಾವ ಕಾರಣದಿಂದ ನನ್ನನ್ನು ನಿರಾಕರಿಸುವರೋ ಕಾಣೆನು. ನಾನು ಹೇಳುವಂತೆ ಕೇಳಿದರೆ ನಮ್ಮಿಬ್ಬರ ಕಷ್ಟವೂ ನೀಗುವುದು.

**ತಾಯಿ :** ವತ್ಸೇ! ಅದೇನು ಹೇಳು. ಅದರಂತೆ ನಡೆಯಲು ಸಿದ್ಧಳಾಗಿರುವೆನು.

**ಪ್ರಿಯಂವದೆ :** ನೀವು ಪ್ರಾಣ ಬಿಡುವುದಿಲ್ಲವೆಂದು ಶಪಥ ಮಾಡಿ ಈ ದಿನವೇ ನನ್ನನ್ನು ಕರೆದುಕೊಂಡು ಹೋಗಿ ಅತ್ತೆಯ ಮನೆಯಲ್ಲಿ ಬಿಟ್ಟು ನೀವು ತಿರಿಗಿ ಈ ಊರಿಗೆ ಬಂದು ಬಿಡಬೇಕು. ಅವರು ದೂಷಿಸಲೂ ಭೂಷಿಸಲೂ ನೀವು ಅವಕಾಶ ಕೊಡಬೇಡಿ. ನನ್ನ ಅಗಲಿಕೆಗಾಗಿ ದುಃಖಿಸದೆ ಮನಸ್ಸು ಹಿಡಿದುಕೊಂಡು ಈಶ್ವರನನ್ನು ಪ್ರಾರ್ಥಿಸುತ್ತಾ ಇದ್ದರೆ ಶೀಘ್ರದಲ್ಲಿಯೇ ಶುಭ ವರ್ತಮಾನವನ್ನು ಕೇಳುವಿರಿ.

**ತಾಯಿ :** ನೀನು ಹೇಳಿದಂತೆಯೇ ಆಗಲಿ. ಅವರು ನಿನ್ನನ್ನು ನಿರಾಕರಿಸಿದರೆ ನೀನೆಲ್ಲಿಗೆ ಹೋಗುವೆ?

**ಪ್ರಿಯಂವದೆ :** ಅಮ್ಮಾ! ಅಂಜಬೇಡಿ. ಅವರು ನನ್ನನ್ನು ನಿರಾಕರಿಸಿದರೂ ನಾನು

ಅವರನ್ನು ತ್ಯಜಿಸುವುದಿಲ್ಲ. ಎಲ್ಲಾ ಕಷ್ಟಗಳನ್ನೂ ಸಹಿಸಿಕೊಂಡು ತಾಳ್ಮೆಯಿಂದಿರಲು ಅಭ್ಯಾಸ ಮಾಡುತ್ತೇನೆ. ಧರ್ಮಕ್ಕೆಲ್ಲಿಯೂ ಜಯವುಂಟು. ಏಳಿ, ಧೈರ್ಯವಾಗಿರಿ, ನನ್ನ ಸಾಮರ್ಥ್ಯ ವನ್ನು ನೋಡುವಿರಂತೆ, ಎಂದಳು.

ಮಗಳ ಈ ವಿಧವಾದ ಮಾತನ್ನು ಕೇಳಿದ ತಾಯಿಯು ಸರಿಯೆಂದು ಒಪ್ಪಿಕೊಂಡಳು. ಪ್ರಿಯಂವದೆಯ ಆಭರಣ, ಸೀರೆ ಮುಂತಾದವುಗಳನ್ನು ಪೆಟ್ಟಿಗೆಯಲ್ಲಿ ತೆಗೆದಿಟ್ಟುಕೊಂಡು ಪುತ್ರೀ ಸಹಿತಳಾಗಿ ಬೀಗರ ಮನೆಗೆ ಹೊರಟಳು.

ವಾಚಕ ಮಹಾಶಯರೇ! ಪ್ರಿಯಂವದೆಯ ತಾಯಿಯು ವಿಧವೆಯು. ಇವಳ ಬೀಗತಿಯ ಹೆಸರು ಅನ್ನಪೂರ್ಣೆ. ಅವಳು ಧನಪಿಶಾಚಗ್ರಸ್ಥಳು. ಅಂತಹ ಬೀಗತಿಯನ್ನು ಹೇಗೆತಾನೆ ಸಂತೋಷಪಡಿಸಿಯಾಳು. ಹಣದಾಸೆಯೊಂದು ಬಂದರೆ ಮಕ್ಕಳಲ್ಲಿರುವ ವಾತ್ಸಲ್ಯವೂ ಕೂಡ ಮಾಯವಾಗುವುದು. ಈ ವರದಕ್ಷಿಣೆ ಎಂಬ ಕೆಟ್ಟವಾಡಿಕೆಯಿಂದ ನಮ್ಮೀ ಭರತಖಂಡ ದಲ್ಲಿರುವ ಅನೇಕ ಬಡ ಕುಟುಂಬಗಳು ತಪಿಸುತ್ತಿರುವವು. ಇದ್ದ ಮನೆ ಮಠಗಳನ್ನು ಮಾರಿ ಅಳಿಯನಿಗೆ ವರದಕ್ಷಿಣೆಯನ್ನು ಕೊಟ್ಟು ತಾವು ಭಿಕ್ಷಾರ್ತಿಗಳಾಗಿ ಹೊರಡುವ ಕನ್ಯಾಪಿತೃಗಳೆಷ್ಟು ಮಂದಿ ಇರಲಿಲ್ಲ! ವಿವಾಹ ಕಾಲದಲ್ಲಿ ಕೊಟ್ಟ ದಕ್ಷಿಣೆಯು ಸಾಲದೆಂದು ಹಬ್ಬ ಹುಣ್ಣಿಮೆಗಳಿಗೂ, ತರುವಾಯ ನಿಷೇಕ ಪ್ರಸ್ತಕ್ಕೂ ಪುನಃ ಹಣ ಕೇಳುವ ದುರಾತ್ಮರೆಷ್ಟು ಮಂದಿ ಇರಲಿಲ್ಲ! ಅದನ್ನು ಕೊಡಲು ಸಾಧ್ಯವಿಲ್ಲದಿದ್ದರೆ ಕನ್ಯೆಯನ್ನು ತ್ಯಜಿಸಿ ಬೇರೆ ಮದುವೆ ಮಾಡಿಕೊಳ್ಳುವರು. ಪತಿಪ್ರೇಮದಿಂದ ವರ್ಜಿತಳಾದ ಹೆಣ್ಣುಮಕ್ಕಳನ್ನು ಮನೆಯಲ್ಲಿಟ್ಟು ಕೊಂಡು ನೋಡಿ ನೋಡಿ ಕೊರಗುವವರೆಷ್ಟು ಮಂದಿ ಇರಲಿಲ್ಲ! ಈ ವರದಕ್ಷಿಣೆಯ ನಿಮಿತ್ತವೇ ಸ್ನೇಹಲತಾ, ಸರಳಬಾಲಾ, ಮೊದಲಾದ ವಂಗ ಕನ್ಯೆಯರು ವರದಕ್ಷಿಣೆಯೆನ್ನುವ ಜ್ವಾಲೆಗೆ ತನ್ನ ಪ್ರಾಣಗಳನ್ನೇ ಆಹುತಿಯಾಗಿ ಇತ್ತಿರುವರು. ಈ ಕೆಟ್ಟ ಪದ್ಧತಿಯು ಇಷ್ಟೊಂದು ನಾಗರೀಕತೆ ಹೆಚ್ಚಿರುವ ಕಾಲದಲ್ಲಿಯೂ ನಿರ್ಮೂಲವಾಗಿಲ್ಲ; ಅನೇಕ ಕಡೆ ಇನ್ನೂ ಪ್ರಚಾರದಲ್ಲಿರುವುದು. ಐದಾರುಮಂದಿ ಹೆಣ್ಣುಮಕ್ಕಳನ್ನು ಪಡೆದ ಕನ್ಯಾಪಿತೃವು ಈ ಅಳಿಯಂದಿರಿಗೆ ಎಲ್ಲಿಂದ ವರದಕ್ಷಿಣೆಯನ್ನು ಒದಗಿಸಿಯಾನು? ಅನೇಕ ಕುಟುಂಬಗಳು ಈ ವರದಕ್ಷಿಣೆಯೆಂಬ ಪಿಶಾಚಗ್ರಸ್ಥವಾಗಿ ಕಣ್ಣೀರಿನಿಂದ ಕೈತೊಳೆಯುತ್ತಿರುವುವು. ಈ ಧನಪಿಶಾಚವು ಎಂದಿನವರೆಗೆ ನಮ್ಮೀ ಭಾರತ ಪುತ್ರರನ್ನು ಬಿಟ್ಟು ನೀಗುವುದಿಲ್ಲವೋ ಅಂದಿನವರೆಗೂ ನಮ್ಮ ದೇಶವು ಅಭಿವೃದ್ಧಿಗೆ ಬರಲಾರದು ಮತ್ತು ಹಣ ಕೊಡಲು ಗತಿಯಿಲ್ಲದೆ ಅಂಗಹೀನರಿಗೂ, ವೃದ್ಧರಿಗೂ, ವಿದ್ಯೆ ಇಲ್ಲದವರಿಗೂ ಹಾಳು ಭಾವಿಯಲ್ಲಿ ತಳ್ಳುವಂತೆ ಹೆಣ್ಣುಮಕ್ಕಳನ್ನು ತಳ್ಳುವುದರಿಂದ ಅವರು ಸಂತೋಷವಿಲ್ಲದೆ ಜೀವಮಾನ ಪರ್ಯಂತವೂ ಕಣ್ಣೀರಿನಲ್ಲಿ ಕೈ ತೊಳೆಯಬೇಕಾಗುವುದು. ಈ ಕಷ್ಟನಿಷ್ಠೂರಗಳನ್ನು ಜೀವ ದಯಾಪರನಾದ ಭಗವಂತನೇ ನಿವಾರಿಸಬೇಕು.

## ೨ನೆಯ ಅಧ್ಯಾಯ

## ಅತ್ತೆಯ ದೌರ್ಜನ್ಯ

ಪ್ರಿಯಂವದೆಯೂ, ಅವಳ ತಾಯಿಯೂ ಅತ್ತೆಯ ಮನೆಗೆ ಹೊರಟರೆಂದು ಹಿಂದಿನ

ಅಧ್ಯಾಯದಲ್ಲಿ ಹೇಳಿದೆವಷ್ಟೆ. ಪ್ರಿಯಂವದೆಯ ಪತಿಯಾದ ಸತ್ಯೇಂದ್ರನು ಬೊಂಬಾಯಿ ಲಾ ಶಾಲೆಯಲ್ಲಿ ನ್ಯಾಯಪರೀಕ್ಷೆ (B.L.) ವ್ಯಾಸಂಗ ಮಾಡುತ್ತಿದ್ದನು. ಇವನ ಮಾತಾಪಿತೃಗಳಾದ ಅನ್ನಪೂರ್ಣೆಯೂ, ಮಹದೇವನೂ ತಮ್ಮ ಮಕ್ಕಳೊಂದಿಗೆ ಧಾರವಾಡ ದಲ್ಲಿ ವಾಸಮಾಡುತ್ತಿದ್ದರು. ಸತ್ಯೇಂದ್ರನಿಗೆ ಮೂವರು ಸಹೋದರಿಯರೂ ಒಬ್ಬ ಸಹೋದರನೂ ಇದ್ದರು. ಮಹದೇವನಿಗೆ ಯಾವ ಉದ್ಯೋಗವೂ ಇಲ್ಲದೆ ಇದ್ದುದರಿಂದ ಸತ್ಯೇಂದ್ರನೇ ಅನ್ನಬಟ್ಟೆಗಳಿಗೆ ಕೊಡಬೇಕಾಗಿದ್ದಿತು. ಎಂದಿನಂತೆ ಸತ್ಯೇಂದ್ರನು ಬೇಸಿಗೆಯ ರಜವನ್ನು ಕಳೆಯಲು ಧಾರವಾಡಕ್ಕೆ ಬಂದನು. ಎದಿರು ನೋಡಿದಂತೆಯೇ ಪ್ರಿಯಂವದೆಯೂ ಅವಳ ತಾಯಿಯೂ ತನ್ನ ಮನೆಗೆ ಬಂದದ್ದನ್ನು ಕಂಡ ಅನ್ನಪೂರ್ಣೆಯ ಕೋಪಕ್ಕೆ ಎಣೆಯಿಲ್ಲದಂತಾಯಿತು. ಬೀಗತಿಯನ್ನು ಕಂಡ ಮಹದೇವನು ಮುಖವನ್ನು ಮತ್ತೊಂದು ಕಡೆಗೆ ತಿರುಗಿಸಿಕೊಂಡನು. ಆ ಸಮಯದಲ್ಲಿ ಸತ್ಯೇಂದ್ರನು ಮನೆಯಲ್ಲಿರಲಿಲ್ಲ. ಪೂರ್ವ ಸಂಕೇತದಿಂದ ತನ್ನಲ್ಲಿಯೇ ಬಿಟ್ಟು ತಾಯಿಯನ್ನು ಊರಿಗೆ ಹೋಗುವಂತೆ ಹೇಳಿದಳು. ಪ್ರಿಯಂವದೆಯು ತಾಯಿಯನ್ನು ಕಳುಹಿಸಿ, ಬಂದು ಅತ್ತೆಮಾವಂದಿರಿಗೆ ನಮಸ್ಕರಿಸಿದಳು. ಒಬ್ಬರಾದರೂ ಆರ್ಶೀವದಿಸಲಿಲ್ಲ. ಸೊಸೆಯನ್ನು ಕಣ್ಣೆತ್ತಿ ನೋಡಲು ಕೂಡ ಮನಸ್ಸಿರಲಿಲ್ಲ. ರಮಣಿಯು ಇದನ್ನು ಲಕ್ಷಿಸದೆ ಊಟ ಮಾಡಿದ ಮಕ್ಕಳಿಗೆ ಕೈಬಾಯಿಗಳನ್ನು ತೊಳೆದು ಊಟ ಮಾಡಿದ ಎಲೆಗಳನ್ನು ತೆಗೆದು ಶುದ್ಧಿ ಮಾಡತೊಡಗಿದಳು. ಇದನ್ನು ಕಂಡ ಅತ್ತೆ ಮಾವಂದಿರುಗಳು ಗೊಣಗುಟ್ಟಲಾರಂಭಿಸಿದರು.

ಸತ್ಯೇಂದ್ರನು ನಾಲ್ಕು ವರ್ಷಗಳಿಂದ ಬೊಂಬಾಯಿನ ಕಲಾಶಾಲೆಯಲ್ಲಿ ಓದುತ್ತಿದ್ದನು. ಅವನ ಮನಸ್ಸೆಲ್ಲವೂ ವ್ಯಾಸಂಗದಲ್ಲೇ ಇದ್ದಿತಾದುದರಿಂದ ಹೆಂಡತಿಯ ವಿಷಯದಲ್ಲಿ ಅಷ್ಟು ಜ್ಞಾಪಕವಿರಲಿಲ್ಲ. ಭಾಗ್ಯಹೀನನಾಗಿದ್ದರೂ ಗುಣಹೀನನಾಗಿರಲಿಲ್ಲ. ಶ್ರೀಮಂತರ ಮನೆಯ ಮಕ್ಕಳಿಗೆ ಇಂಗ್ಲೀಷ್, ಸಂಸ್ಕೃತ, ದೇಶಭಾಷೆಗಳನ್ನು ಬೋಧಿಸುತ್ತಿದ್ದನು. ಅವರು ಇವನ ಬುದ್ಧಿ ಸಾಮರ್ಥ್ಯಕ್ಕೆ ಮೆಚ್ಚಿ ವಾಡಿಕೆಯಾಗಿ ಕೊಡುವುದಕ್ಕಿಂತಲೂ ಹೆಚ್ಚಾಗಿಯೇ ವೇತನವನ್ನು ಕೊಡುತ್ತಿದ್ದರು. ಲಾ ಪರೀಕ್ಷೆಗೆ ಸಾಕಾದಷ್ಟು ಹಣವನ್ನು ತಾನಿಟ್ಟುಕೊಂಡು ಮಿಕ್ಕ ಭಾಗವನ್ನು ಮಾತಾಪಿತೃ ಸಹೋದರರ ಜೀವನಕ್ಕೆ ಕಳುಹಿಸುತ್ತಿದ್ದನು. ಇವನು ಕಳುಹಿಸುತ್ತಿದ್ದ ಹಣದಿಂದ ಸಂಸಾರವು ಸುಖವಾಗಿ ಕಳೆಯುತ್ತಿದ್ದಿತು. ಈ ಸಂದರ್ಭದಲ್ಲಿ ಇವನಿಗೆ ಪ್ರಿಯಂವದೆಯ ವಿಷಯವೇ ಜ್ಞಾಪಕಕ್ಕೆ ಬರಲಿಲ್ಲ. ಕಾರಣವು ಅವನನ್ನು ಕೇಳಿದರೆ ವ್ಯಕ್ತವಾಗುವುದು. ಅವನನ್ನು ಕೇಳುವರು ಯಾರು?

ಸೊಸೆಯು ಮನೆಗೆ ಬರುತ್ತಲೂ ಗಂಡ ಹೆಂಡತಿಯರಿಗೆ ಆಡಬೇಕಾದ ಮಾತುಗಳು ಹೆಚ್ಚಿದವು. ಮನೆಯಲ್ಲಿ ಮಾತನಾಡುವುದು ಯುಕ್ತವಲ್ಲವೆಂದರಿತು ಅನ್ನಪೂರ್ಣೆಯೂ ಮಹದೇವನೂ ದೇವಸ್ಥಾನದ ಪಡಶಾಲೆಗೆ ಹೊರಟು ಹೋದರು.

ಪ್ರಿಯಂವದೆಯು ಬಾಗಿಲನ್ನು ಮುಚ್ಚಿ ಒಳಗೆ ಕಾರ್ಯಾರ್ಥವಾಗಿ ಹೋದಳು. "ಅಮ್ಮಾ ಬಾಗಿಲು" ಎಂದು ಯಾರೋ ಕೂಗಿದಂತಾಯಿತು. ಮೆಲ್ಲನೆ ಹೋಗಿ ಬಾಗಿಲು ತೆರೆದಳು.

ಪ್ರಿಯಂವದೆಯನ್ನು ನೋಡಿ ಸತ್ಯೇಂದ್ರನು ಸ್ಥಂಭಿತನಾದನು. "ದೇವಲೋಕದ ಅಪ್ಸರಸ್ತ್ರೀ" ಯಂತಿರುವ ಈ ಕನ್ಯೆ ಯಾರು? ಎಂದು ತನ್ನನ್ನು ತಾನೇ ಕೇಳಿಕೊಂಡನು. ಇವನೀರೀತಿ ಚಿಂತಿಸುತ್ತಿರುವಷ್ಟರಲ್ಲಿಯೇ ಪ್ರಿಯಂವದೆಯು ಹೊರಟು ಹೋದಳು. ಸತ್ಯೇಂದ್ರನು ಬಂದದ್ದನ್ನು ಕಂಡ ಅವನ ತಂಗಿಯರು ಮಲೆಗೊಬ್ಬೊಬ್ಬರಾಗಿ ಓಡಲಾರಂಭಿಸಿದರು. ಆಮೇಲೆ ಎಲ್ಲೆಲ್ಲಿಯೂ ಹುಡುಕಿ ಸತಿಯನ್ನು ಕಾಣದೆ ಅಡಿಗೆ ಮನೆಯಲ್ಲಿ ಮುಸುರೆಯ ಪಾತ್ರೆಗಳನ್ನು ಉಜ್ಜುತ್ತಿದ್ದವಳನ್ನು ಕಂಡನು. ಸತ್ಯೇಂದ್ರನು ಬಂದುದನ್ನು ಕಂಡ ರಮಣಿಯು ಮನೆಯ ಹಿತ್ತಲ ಕಡೆಗೆ ಹೋದಳು. ಸತ್ಯೇಂದ್ರನು ಅವಳನ್ನು ಹಿಂಬಾಲಿಸಿದನು. ಇಷ್ಟರಲ್ಲಿ ಬಾಗಿಲನ್ನು ಯಾರೋ ಎಡಬಿಡದೆ ಹೊಡೆಯಲಾರಂಭಿಸಿದರು. ತನ್ನ ತಾಯಿ ತಂದೆಯ ರೆಂದರಿತು ಬಾಗಿಲನ್ನು ತೆರೆದು ತಾನು ಒಳಗೆ ಹೋಗದೆ ಬೀದಿ ಜಗಲಿಯ ಮೇಲೆ ಕುಳಿತುಕೊಂಡನು. ಮಕ್ಕಳೊಬ್ಬರೂ ಇಲ್ಲದೆ ಬರೀ ಮನೆಯಾಗಿರುವುದನ್ನರಿತ ಅನ್ನಪೂರ್ಣೆಗೆ ಬಹಳ ಕೋಪವುಂಟಾಯಿತು. ಮಗನೂ ಸೊಸೆಯೂ ಮಾತನಾಡಿರಬೇಕೆಂದು ನಿಶ್ಚೈಸಿದಳು. ಆ ಮಾಯಗಾತಿಯೊಂದಿಗೆ ಸಿಕ್ಕಿಕೊಳ್ಳದಂತೆ ಏರ್ಪಾಡು ಮಾಡಬೇಕೆಂದಿದ್ದೆವು. ಅವನು ಬರುವುದಕ್ಕೆ ಮುಂಚೆಯೇ ಇವಳನ್ನು ಅಟ್ಟೋಣವೆಂದಿದ್ದೆವಲ್ಲಾ? ಅಷ್ಟರಲ್ಲೇ ಏನೋ ಮಂತ್ರ ಮಾಡಿದಳಲ್ಲಾ? ಮನೆಯಲ್ಲಿದ್ದ ಮಕ್ಕಳನ್ನು ಹ್ಯಾಗೋ ಹೊಡದೋಡಿಸಿಬಿಟ್ಟಳು. ಒಳ್ಳೇದಿರಲಿ. ನನ್ನ ಸಾಮರ್ಥ್ಯದಿಂದ ಒಂದಾಟವನ್ನು ಆಡಿಸುವೆನು; ಎಂದು ತನ್ನಷ್ಟಕ್ಕೆ ತಾನೇ ತೀರ್ಮಾನಿಸಿದಳು. ಲಾಯರ್ ಪರೀಕ್ಷೆಗೆ ಓದುತ್ತಿರುವುದರಿಂದ ತನ್ನ ಮಗನಿಗೆ ೨,೦೦೦ ರೂಪಾಯಿಗಳು ಬೇಕಾಗಿರುವುದೆಂತಲೂ, ಅದು ಕೊಡದಿದ್ದರೆ ಮಗನಿಗೆ ಮತ್ತೊಂದು ವಿವಾಹ ಮಾಡಲ್ಪಡುವುದೆಂತಲೂ ಪ್ರಿಯಂವದೆಯ ತಾಯಿಯನ್ನು ಬೆದರಿಸುತ್ತಿದ್ದರು. ಈ ದಿನ ಅವಳೇ ಬಂದದ್ದರಿಂದ ಅವರಿಗುಂಟಾದ ಕೋಪತಾಪಗಳನ್ನು ಅಷ್ಟಿಷ್ಟೆಂದು ಹೇಳತೀರದು. ಇಷ್ಟೇ ಇಲ್ಲದೆ ಮಗನೂ ಸೊಸೆಯೂ ಮನೆಯಲ್ಲಿ ಏಕಾಂತವಾಗಿದ್ದುದನ್ನು ನೋಡಿದ ಅನ್ನಪೂರ್ಣೆಗೆ ಬಹಳ ಆಗ್ರಹ ಉಂಟಾಯಿತು. ತಡೆಯಲಾರದೆ ಮಗನನ್ನು ಕರೆದಳು. ಸತ್ಯೇಂದ್ರನು ಒಳಗೆ ಬಂದನು. ತಾಯಿಯು ಅಪ್ಪಾ! ಮಗನೇ? ನನ್ನ ವಾಕ್ಯವನ್ನು ನೀನು ಪರಿಪಾಲಿಸಬೇಕಲ್ಲವೇ? ಎಂದಳು. ಕುಮಾರನು "ಅಮ್ಮಾ, ನ್ಯಾಯವಾದ ವಿಷಯದಲ್ಲೆಲ್ಲಾ ನಾನು ತಮ್ಮ ವಾಕ್ಯವನ್ನು ಅಂಗೀಕರಿಸತಕ್ಕವನೇ ಅಹುದು! ಎಂದನು."

ಅನ್ನಪೂರ್ಣೆಯು - ಕುಮಾರಾ! ಇಲ್ಲಿ ನೋಡು!! ನಿನ್ನ ಹೆಂಡತಿಯಾದವಳು ನಾವಾಗಿ ಕರೆಯದಿರುವಾಗ ತಾನಾಗಿಯೇ ಬಂದಿರುವಳು. ಅವಳು ಪ್ರೌಢೆಯಾಗಿ ಮೂರು ವರ್ಷಗಳಾದವು. "ತಾಯಿಯಂತೆ ಮಗಳು ನೂಲಿನಂತೆ ಶಾಲೆ" ಎಂಬಂತೆ ನಿಮ್ಮತ್ತೆಯು ನಡತೆಯಲ್ಲಿ ಕೆಟ್ಟವಳು; ಅವಳೂ ನಡತೆಯಲ್ಲಿ ಕೆಟ್ಟವಳೇ. ಆದ್ದರಿಂದಲ್ಲವೇ ಅವಳನ್ನು ಇಷ್ಟು ದಿನ ಕರೆಯದಿದ್ದುದು. ಯಾಕಂದರೆ ನಿನ್ನ ವ್ಯಾಸಂಗವನ್ನುದ್ದೇಶಿಸಿ ಈ ವಿಷಯವನ್ನು ನಿನ್ನ ಕಿವಿಗೆ ಬೀಳದಂತೆ ರಹಸ್ಯವಾಗಿಟ್ಟಿದ್ದೆವು. ಈ ದಿನ ಅವಳೇ ಬಂದು ಬಿಟ್ಟಳು. ನಮಗೆ ಅವಮಾನವೂ ಭಯವೂ ಉಂಟಾಗಿರುವುದು. ಎಲ್ಲಾದರೂ ವ್ಯಭಿಚಾರಮಾಡಿ ಅದನ್ನು

ದಕ್ಕಿಸಿಕೊಳ್ಳಲು ಇಲ್ಲಿಗೆ ಬಂದಿರಬಹುದು. ನೆರೆಹೊರೆಯವರರಿಯದಂತೆ ಅವಳನ್ನು ಈಗಲೇ ಹೊರಡಿಸಿಬಿಡು. ಇಲ್ಲದಿದ್ದರೆ ನಾವೆಲ್ಲಿಯಾದರೂ ಕೆರೆ ಭಾವಿಗಳಲ್ಲಿ ಬಿದ್ದು ಸಾಯುವೆವು. ನಮ್ಮ ಮರ್ಯಾದೆಯನ್ನುಳಿಸಲು ನೀನುಹುಟ್ಟಿದ್ದೆಯಾದರೆ ಈ ಕೆಲಸವನ್ನು ಮಾಡು ಇಲ್ಲದಿದ್ದರೆ ನಾವು ಪ್ರಾಣತ್ಯಾಗ ಮಾಡುವೆವು ಎಂದು ದೊಡ್ಡ ಉಪನ್ಯಾಸ ಮಾಡಿದಳು.

ಸತ್ಯೇಂದ್ರನು ತಾಯಿಯ ವಾಕ್ಯಕ್ಕೆ ಜವಾಬು ಹೇಳಲಿಲ್ಲ : ನ್ಯಾಯವಂತನು. ಈ ಸಮಯ ದಲ್ಲಿ ತಾಯಿಯೊಂದಿಗೆ ವಾದಿಸಿದರೆ ಹೆಂಡತಿಯ ಮೋಹದಿಂದ ಹೇಳಿದುದಾಗಿ ಹಾಸ್ಯ ಮಾಡುವರು. ಕೊನೆಗೆ ಒಂದು ಯೋಚನೆಯು ಥಟ್ಟನೆ ಹೊಳೆಯಲು ತಾಯೇ, ಇಗೋ ನಿಮ್ಮಿಷ್ಟದಂತೆಯೇ ನಡೆಸುವೆನು. ಚಿಂತಿಸಿಬೇಡಿ. ಮಾಡತಕ್ಕ ಕಾರ್ಯಗಳನ್ನು ದಯವಿಟ್ಟು ತಿಳಿಸಿ, ಎಂದನು.

ಅನ್ನಪೂರ್ಣೆಗುಂಟಾದ ಆನಂದಕ್ಕೆ ಆಳವಿಲ್ಲ. ಕುಮಾರಾ, ಧರ್ಮಪುತ್ರನೆಂದರೆ ನಿನಗೇ ಸಲ್ಲುವುದು. ಆ ಶನಿಯು ಬಂದುದೂ ಹೋದದೂ ಯಾರಿಗೂ ತಿಳಿಯಬಾರದು. ಅವಳ ತಾಯಿ ಇರುವ ಸ್ಥಳವನ್ನು ಕಂಡು ಹಿಡಿದು ಅವಳನ್ನು ಸೇರಿಸಿಬಿಡು. ಕತ್ತಲಾಗುತ್ತಲೂ ರೈಲ್ವೆ ಸ್ಟೇಷನ್ನಿಗೆ ಹೋಗು. ಅವಳ ತಾಯಿಗೆ ರಾತ್ರಿ ರೈಲಲ್ಲದೆ ಬೇರೆ ಗಾಡಿಯಿಲ್ಲ. ಈ ಮೂದೇವಿಯನ್ನು ತ್ಯಜಿಸಿಬಂದರೆ ನಾಳೆಯ ದಿನವೇ ನಿನಗೆ ಶ್ರೀದೇವಿಯಂಥಾ ಬೇರೊಬ್ಬ ಕನ್ಯೆಯನ್ನು ವಿವಾಹ ಮಾಡುವೆನು ಎಂದಳು. ಹಾಗೆಯೇ ಆಗಲೆಂದು ಸತ್ಯೇಂದ್ರನು ಹೇಳಿದನು. ರಾತ್ರಿಯಾಗುವವರೆಗೂ ತರುಣಿಗೆ ಮೂದೇವಿ, ಮೂಳಿ, ಕಾಳಿ, ಶನಿ ಮೊದಲಾದ ಅನೇಕ ಬಿರುದುಗಳು ದೊರಕಿದುವು. ಶಾಂತಳಾದ ಕನ್ಯೆಯು ಮರುಮಾತಾಡಲಿಲ್ಲ. ಕೊನೆಗೆ ತನ್ನಗತಿ ಏನಾಗುವುದೋ ಎನ್ನುವ ಚಿಂತೆಯು ಅವಳನ್ನು ಬಾಧಿಸತೊಡಗಿತು. ರಾತ್ರಿಯೂ ಆಯಿತು. ೮<sup></sup>½ ಘಂಟೆಗೆ ಸರಿಯಾಗಿ ಗಾಡಿಯೊಂದು ಬಂದು ಬಾಗಿಲಿನಲ್ಲಿ ನಿಂತಿತು. ''ಶನಿಯೇ, ಮೂರ್ಖಳೇ, ಬಾಯಿ ತೆರೆಯದೆ ಗಾಡಿಯನ್ನು ಹತ್ತಿದರೆ ಬದುಕಿದೆ : ಇಲ್ಲದಿದ್ದರೆ ಒಂದೇ ಏಟಿಗೆ ಕೊಂದು ಬಿಡುವೆನು; ಎಂದು ಅನ್ನಪೂರ್ಣೆಯು ಘರ್ಜಿಸಿದಳು. ಅಮ್ಮನವರೇ! ನಾನು ನಿರಾಪರಾಧಿ, ಎಂದು ಪ್ರಿಯಂವದೆಯು ಕಠಿಣಚಿತ್ತಳಾದ ಅತ್ತೆಯ ಪಾದಗಳೆರಡನ್ನೂ ಹಿಡಿದುಕೊಂಡಳು. ಅತ್ತೆಯು ಸ್ವಲ್ಪವೂ ಕರುಣವಿಲ್ಲದೆ ಸೊಸೆಯನ್ನು ಒಡೆದು ಛೀ, ಏಳು, ಶ್ವಾನವೇ ಓಡಿಹೋಗು! ಎಂದು ದರದರನೆ ಎಳೆದು ಬೀದಿಯಲ್ಲಿ ಬಿಟ್ಟು ಬಾಗಿಲನ್ನು ತಠಾರನೆ ಹಾಕಿಕೊಂಡಳು.

ಗಾಡಿಯ ಬಳಿಯಲ್ಲಿ ಸತ್ಯೇಂದ್ರನು ನಿಂತಿದ್ದುದನ್ನು ಕಂಡ ಕನ್ಯೆಗೆ ಸ್ವಲ್ಪಮಟ್ಟಿಗೆ ಧೈರ್ಯವುಂಟಾಯಿತು. ಗಾಡಿಯನ್ನು ಹತ್ತು ಎನ್ನುವ ಮಾತು ಕಿವಿಗೆ ಬೀಳುತ್ತಲೇ ತನ್ನ ಪತಿಯ ವಾಕ್ಯವೆಂದರುತು ಗಾಡಿಯನ್ನು ಏರಿದಳು. ಸತ್ಯೇಂದ್ರನೂ ಹಿಂದುಗಡೆಯಲ್ಲಿ ಕುಳಿತುಕೊಂಡನು. ಪ್ರಿಯಂವದೆಯು ತಾನು ಹೋಗುವ ಸ್ಥಳವೆಲ್ಲಿದೆಯೋ ಎಂದು ಚಿಂತಿಸಲಾರಂಭಿಸಿದಳು. ಸತ್ಯೇಂದ್ರನು ಮೌನವ್ರತವನ್ನು ಧರಿಸಿದ್ದನು. ಕುಮಾರಾ! ಬೇ ಗ ಬಂದು ಬಿಡೆಂದು ತಾಯಿತಂದೆಗಳು ಹೇಳಲು, ಹಾಗೆಯೇ ಆಗಲೆಂದು ಹೇಳಿ ಗಾಡಿಯನ್ನು

ಓಡಿಸುವಂತೆ ಹೇಳಿದನು. ತರುವಾಯ ತನ್ನ ಅತ್ತೆ ಇದ್ದ ಊರಿಗೆ ಹೋಗಿ, ಅಲ್ಲಿ ತನ್ನ ಪತ್ನಿಯನ್ನು ಬಿಟ್ಟು ಅತ್ತೆಯನ್ನು ಕಂಡು, ತನ್ನ ತಾಯಿತಂದೆಗಳು ಮನೆಯಲ್ಲಿ ಪ್ರಿಯಂವದೆಗೆ ಮಾಡಿದ ಮರ್ಯಾದೆಯನ್ನೆಲ್ಲಾ ವಿವರವಾಗಿ ಹೇಳಿದನು. ತರುವಾಯ ಅತ್ತೆಯನ್ನೂ ಹೆಂಡತಿಯನ್ನೂ ಕರೆದುಕೊಂಡು ಮೈಸೂರಿಗೆ ಬಂದು ಅಲ್ಲಿನ ಶ್ರೀಮನ್ಮಹಾರಾಣಿಯವರ ಕಾಲೇಜಿನಲ್ಲಿ ಹೆಂಡತಿಯ ವ್ಯಾಸಂಗಕ್ಕೇರ್ಪಾಡು ಮಾಡಿ, ಅವಳಿಗೆ ಧೈರ್ಯವನ್ನು ಹೇಳಿ, ಅತ್ತೆಯಿಂದ ಆಶೀರ್ವಾದವನ್ನು ಪಡೆದು ಪುನಃ ಧಾರವಾಡಕ್ಕೆ ಹಿಂದಿರುಗಿದನು.

## ೩ನೆಯ ಅಧ್ಯಾಯ

## ಶಾಂತಿಯ ಮಹಿಮೆ

ಪ್ರಿಯಂವದೆಯನ್ನು ಬಿಟ್ಟು ಸತ್ಯೇಂದ್ರನು ಧಾರವಾಡಕ್ಕೆ ಬಂದನಷ್ಟೆ? ಬರಲು ನಾಲ್ಕೈದು ದಿನಗಳಾದುದರಿಂದ ಸಾವಕಾಶವಾದ ಕಾರಣವನ್ನು ಅನ್ನಪೂರ್ಣೆಯು ಕೇಳಿದಳು. ಅತ್ತೆಯನ್ನು ಕಾಣದಿದ್ದುದರಿಂದ ಅವಳ ಊರಿನವರೆಗೂ ಕರೆದುಕೊಂಡು ಹೋಗಿ ಬಿಡಬೇಕಾಗಿ ಬಂದಿತು. ಆದುದರಿಂದ ಸಾವಕಾಶವಾಯಿತೆಂದು ಹೇಳಿದನು. ಅವನ ಮಾತಿನಲ್ಲಿ ತಾಯಿಗೆ ಸಂಶಯವುಂಟಾಗಲಿಲ್ಲ. ರಜ ಮುಗಿಯುವುದರೊಳಗೆ ಮಗನಿಗೆ ದ್ವಿತೀಯ ವಿವಾಹವನ್ನು ಮಾಡಿಬಿಡಬೇಕೆಂದು ಅನ್ನಪೂರ್ಣೆಯು ಅವಸರಪಟ್ಟಳು. ಸತ್ಯೇಂದ್ರನು ಇನ್ನು ವಿವಾಹವ್ಯಾತಕ್ಕೆಂದನು. ಸಂತಾನವೃದ್ಧಿಗೂ, ಸುಖಸಂತೋಷಗಳಿಗೂ ಎಂದು ತಾಯಿಯು ಬಹು ವೈಯ್ಯಾರದಿಂದ ಹೇಳಿದಳು. ಅದಕ್ಕೆ ಸತ್ಯೇಂದ್ರನು ಅಂತಹ ಸುಖವು ತನಗವಶ್ಯಕವಿಲ್ಲವೆಂದೂ ತನ್ನ ತಮ್ಮನಾದ ಉಪೇಂದ್ರನಿಗೆ ಮಾಡುವುದು ಉತ್ತಮವೆಂದೂ ಹೇಳಿದನು. ಉಪೇಂದ್ರನು ವಿದ್ಯಾವಿಹೀನನಾದುದರಿಂದ ಅವನಿಗೆ ಹೆಣ್ಣು ಕೊಡುವವರು ವರದಕ್ಷಿಣೆ ಕೊಡಲಾರರೆಂದು ತಾಯಿಯು ಹೇಳಲು ಹಣವು ಯಾತಕ್ಕೆಂದು ಮಗನು ಕೇಳಿದನು. ಅದಕ್ಕೆ ತಾಯಿಯು ಕುಮಾರಾ! ಇಲ್ಲಿ ನೋಡು ಮಿಕ್ಕ ಮಕ್ಕಳ ಕ್ಷೇಮಾರ್ಥವಾಗಿ ಹೇಳುತ್ತೇನೆ. ನಿನಗೆ ಹೆಣ್ಣು ಕೊಡುವವರು ೨,೦೦೦ ರೂಪಾಯಿ ವರದಕ್ಷಿಣೆ ಕೊಡುವುದಾಗಿ ಹೇಳುವರು. ಮಾಂಗಲ್ಯ ಧಾರಣ ಮಾಡಿದ ಮಾತ್ರಕ್ಕೆ ಯಾವ ಕಷ್ಟವೂ ಇಲ್ಲದೇ ದೊಡ್ಡಗಂಡು ಸಿಕ್ಕುವುದು. ನೀನ್ಯಾತಕ್ಕೆ ಬೇಡವೆನ್ನುವೆ? ಎಷ್ಟೋ ಮನೆಗಳಲ್ಲಿ ಈ ರೀತಿ ನಡೆದಿದೆ ಎಂದಳು. ಇದಕ್ಕೆ ಕುಮಾರನು ಯಾವ ಉತ್ತರವನ್ನೂ ಕೊಡಲಿಲ್ಲ. ಇದನ್ನರಿತ ತಾಯಿಯು "ವತ್ಸಾ" ಹುಡುಗಿಯು ಬಹು ಸುಂದರಿಯು. ಎಷ್ಟು ತಪಸ್ಸು ಮಾಡಿದರೂ ಅಂತಹ ಹೆಣ್ಣು ಸಿಕ್ಕುವುದು ದುರ್ಲಭವು. ಕರೆದುಕೊಂಡು ಬರುತ್ತೇನೆಂದು ಹೇಳಿ ಎದ್ದಳು. ಸ್ವಲ್ಪ ಹೊತ್ತಿಗೆಲ್ಲಾ ಕೊಬ್ಬಿದ ದೇಹವೂ, ಕೃಷ್ಣವರ್ಣವೂ, ಉಳ್ಳ ಒಂದು ಸ್ತ್ರೀ ವಿಗ್ರಹವು ಬುಲಾಕಿನ ಮುತ್ತನ್ನು ನಾಲಿಗೆ ತುದಿಯಿಂದ ಮುಟ್ಟಿಕೊಂಡು, ನಾನಾ ವಿಧವಾದ ಅಂಗಚೇಷ್ಟೆಗಳನ್ನು ಮಾಡುತ್ತಾ ಸತ್ಯೇಂದ್ರನ ಪಕ್ಕದಲ್ಲಿ ನಿಂತು ಸೆರಗಿನಿಂದ ಬಾಯನ್ನು ಮುಚ್ಚಿಕೊಂಡಳು. ಈ ಅವಲಕ್ಷಣವನ್ನು ಸತ್ಯೇಂದ್ರನು ಕಣ್ಣೆತ್ತಿಯೂ ನೋಡಲಿಲ್ಲ. ಅನ್ನಪೂರ್ಣೆಯು ಆ ಹುಡುಗಿಯನ್ನು ಹೋಗ ಹೇಳಿ ತರುವಾಯ

ಸತ್ಯೇಂದ್ರನನ್ನು ಕಂಡು "ಸತ್ಯೇಂದ್ರಾ, ನೋಡಿದೆಯಾ? ನಾಳೆಯೇ ದೊಡ್ಡವಳಾಗುವಳು. ನನ್ನ ಮಾತನ್ನುಲ್ಲಂಘಿಸಬೇಡ ಎಂದಳು. ಅದಕ್ಕೆ ಪುತ್ರನು, ಅಮ್ಮಾ, ನಾಳೆ ನಾನು ಬೊಂಬಾಯಿಗೆ ಹೋಗಿ ಪರೀಕ್ಷೆ ಫಲಿತಾಂಶವನ್ನರಿತ ಮೇಲೆ ಪತ್ರ ಬರೆಯುವೆನು ಎಂದನು.

ಮಗನು ತನ್ನ ಮಾತನ್ನು ಮೀರಲಾರನೆಂದು ಅನ್ನಪೂರ್ಣೆಯು ಬಲ್ಲಳು. ಸತ್ಯೇಂದ್ರನು ಮಾತಾಪಿತೃಗಳಿಗೆ ನಮಸ್ಕರಿಸಿ ಸಹೋದರ ಸಹೋದರಿಯರಿಗೆ ಆಶೀರ್ವಾದ ಮಾಡಿ ಬೊಂಬಾಯಿಗೆ ಪ್ರಯಾಣವಾದನು. ಅನ್ನಪೂರ್ಣೆಯು ರಾತ್ರಿ ಹಗಲೂ ೨,೦೦೦ ರೂಪಾಯಿಗಳು ದೊರೆಯಬೇಕಲ್ಲಾ ಎಂದು ಎಲ್ಲಾ ದೈವಗಳನ್ನೂ ಪ್ರಾರ್ಥಿಸುತ್ತಿದ್ದಳು.

ಆಹಾ! ಧನಪಿಶಾಚಿಯು ಮನುಷ್ಯರ ಯುಕ್ತಾಯುಕ್ತ ಜ್ಞಾನವನ್ನು ಹೋಗಲಾಡಿಸಿ ಬಿಡುವುದಿಲ್ಲವೇ? ಸ್ವರ್ಗಲೋಕ ಸುಂದರಿಯಂತಿದ್ದ ಪ್ರಿಯಂವದೆಯನ್ನು ಹಣವಿಲ್ಲದ ತಪ್ಪಿಗೋಸ್ಕರ ನಿರಾಕರಿಸಿ ಪುತ್ರನಿಗಿಷ್ಟವಿಲ್ಲದಿದ್ದರೂ ಪುನಃ ೨,೦೦೦ ರೂಪಾಯಿಗಳು ದೊರೆಯುವುದೆಂಬಾಸೆಯಿಂದ ಕುರೂಪಿಯಾದ ಕನ್ಯೆಯನ್ನು ನಿಶ್ಚೈಸಿದ ಅನ್ನಪೂರ್ಣೆಗೆ ಹಣದಾಸೆಯು ಎಷ್ಟಿರಬೇಕು? ಹಣ ಕೊಡದ ತಪ್ಪಿಗಾಗಿ ಪ್ರಿಯಂವದೆಯು ಜೀವಾವಧಿ ದುಃಖವನ್ನನುಭವಿಸಬೇಕೇ? ಇದು ಯಾವ ನ್ಯಾಯ? ಆದರೆ ಅನ್ನಪೂರ್ಣೆಯ ಮನಸ್ಸಿನಲ್ಲಿ ಹೀಗಿತ್ತೇ ಹೊರತು ಸತ್ಯೇಂದ್ರನಿಗೆ ತಾಯಿಯ ನಡತೆಯೊಂದೂ ಸರಿಬೀಳಲಿಲ್ಲ. ಅವಳಿಗೆ ತಾನು ತನ್ನ ಹೆಂಡತಿಯ ವಿಷಯವಾಗಿ ನಡೆಸಿದ ಏರ್ಪಾಡುಗಳೊಂದನ್ನೂ ತಿಳಿಸದೆ ಅವಳು ಹೇಳಿದುದನ್ನೆಲ್ಲಾ ಸಾವಧಾನವಾಗಿ ಕೇಳಿಕೊಂಡಿದ್ದನು. ಸತ್ಯೇಂದ್ರನಿಗೆ ನ್ಯಾಯ ಪರೀಕ್ಷೆಯು ಮೊದಲನೆಯ ಸ್ಥಾನದಲ್ಲಿ ತೇರ್ಗಡೆಯಾಯಿತೆಂದೂ, ಬಹುಮಾನವು ಲಭಿಸಿರುವುದೆಂದೂ, ಪತ್ರಿಕಾದ್ವಾರ ತಿಳಿಯಬಂದಿತು. ಆತನು ತಾಯಿತಂದೆಯರಿಗೆ ಈ ವಿಷಯವನ್ನು ಬರೆದನು. ಅದಕ್ಕೆ ಹಿಂದೆ ೨,೦೦೦ ರೂಪಾಯಿ ವರದಕ್ಷಿಣೆ ಕೊಡುತ್ತೇವೆಂದು ಹೇಳಿದವರು ಈಗ ೩,೦೦೦ ರೂಪಾಯಿ ಕೊಡುವುದಾಗಿ ಹೇಳುವುದಾಗಿಯೂ ಆದ್ದರಿಂದ ವಿವಾಹವನ್ನು ತ್ವರಿತಪಡಿಸಬೇಕೆಂತಲೂ ಬರೆದರು. ಇದಕ್ಕೆ ಸತ್ಯೇಂದ್ರನು ಬೊಂಬಾಯಿನಲ್ಲಿರುವ ಶ್ರೀಮಂತನೊಬ್ಬನು ತನ್ನ ಬುದ್ಧಿ ಚಾತುರ್ಯವನ್ನು ಕಂಡು ತನ್ನ ಮಗಳನ್ನು ೪,೦೦೦ ರೂಪಾಯಿ ವರದಕ್ಷಿಣೆಯೊಡನೆ ಕನ್ಯಾದಾನ ಮಾಡುವರೆಂದೂ, ಹೆಣ್ಣು ದೇವಲೋಕದ ರಂಭೆಯನ್ನು ಸೋಲಿಸುವಳೆಂದೂ ವಯಸ್ಸು ಸುಮಾರು ೧೪ ಇರಬಹುದೆಂದೂ ಸಮಾಧಾನ ವಾಗಿ ಬರೆದನು. ಪತ್ರದಲ್ಲಿ ಬರೆದಂತೆ ಸತ್ಯೇಂದ್ರನು ಮರುವಿವಾಹಕ್ಕೆ ಸಮ್ಮತಿಸಲೂ ಇಲ್ಲ. ತಾಯಿಯ ಮನಸ್ಸನ್ನು ತೃಪ್ತಿಪಡಿಸಲೂ ಅವಳಿಗೆ ಹಿಡಿದಿರುವ ಧನಪಿಶಾಚಿಯನ್ನು ಹೋಗಲಾಡಿಸಲೂ, ಅವಳಿಗೆ ಚೆನ್ನಾಗಿ ಬುದ್ಧಿ ಕಲಿಸಲೂ ಹೀಗೆ ಬರದನೇ ಹೊರತು ಅವನು ಕಾಗದದಲ್ಲಿ ಬರೆದಿದ್ದ ವರ್ತಮಾನಗಳೊಂದೂ ನಿಜವಲ್ಲ. ಮಗನ ಪತ್ರವನ್ನು ಕಂಡ ಮಾತಾಪಿತೃಗಳು ಸಂತೋಷಪಟ್ಟರೂ ಕೂಡ ಹಣವು ಲಭಿಸತಕ್ಕ ವಿವಾಹದ ಕಾಲವೂ ತಿಳಿಯದೇ ಬಹಳ ಅವಸ್ಥೆಪಟ್ಟರು. ಇಷ್ಟರೊಳಗೆ ಕಾರ್ತೀಕಮಾಸವೂ ಸಮೀಪಿಸಿತು. ಇನ್ನು ಮಗನು ಬೊಂಬಾಯಿನಲ್ಲಿ ಏನೂ ಮಾಡುತ್ತಿರುವೆನೆಂದು ಬರೆಯಲು ಮೊದಲು ಮಾಡಿದರು.

ತಾನು ಮದುವೆ ಪ್ರಯತ್ನದಲ್ಲಿರುವುದಾಗಿ ಹೇಳಿ ೫,೦೦೦ ರೂಪಾಯಿಗಳನ್ನು ಕಳುಹಿಸಿದನು. ಧನವನ್ನು ಕಂಡ ತಾಯಿ ತಂದೆಗಳು ಆನಂದ ಸಾಗರದಲ್ಲಿ ಮುಳುಗಿದರು. ಮದುವೆಯಾಯಿತೇ ಇಲ್ಲವೇ ಎಂದು ಕೇಳುವುದನ್ನು ಕೂಡ ಮರೆತುಬಿಟ್ಟರು. ಇದಲ್ಲದೆ ಮನೆ ಖರ್ಚಿಗೆ ಹಿಂದಿ ನಂತೆ ೧೦೦ ರೂಪಾಯಿಗಳನ್ನು ಕಳುಹಿಸಿಕೊಡುತ್ತಿದ್ದನು. ತಂದೆತಾಯಿಗಳಿಗುಂಟಾದ ಆನಂದಕ್ಕೆ ಮೇರೆಯೇ ಇರಲಿಲ್ಲ. ಇನ್ನು ಮಗನನ್ನು ಒಂಟಿಯಾಗಿ ಬೊಂಬಾಯಿ ಪಟ್ಟಣದಲ್ಲಿ ಬಿಟ್ಟರೆ ಅನರ್ಥ ಉಂಟಾಗುವುದೆಂದು ತಿಳಿದು ತಾವೂ ಅಲ್ಲಿಗೆ ಹೋಗಿ ಸೇರಿಕೊಳ್ಳಲು ತಕ್ಕ ಪ್ರಯತ್ನಗಳನ್ನು ಮಾಡಹತ್ತಿದರು. ಪಟ್ಟಣವಾಸದಲ್ಲಿ ವಾಸ ಮಾಡುವ ಹುಡುಗರನ್ನು ವೇಶ್ಯೆಯರು ತಮ್ಮ ಬಲೆಗೆ ಸೆಳೆದುಕೊಳ್ಳುವರೆಂಬ ಭಯವು ತಮಗುಂಟಾಗಿರುವುದರಿಂದ ಎಲ್ಲರೂ ಒಂದೇ ಕಡೆ ವಾಸಮಾಡುವುದು ಉಚಿತವೆಂದೂ ಸತ್ಯೇಂದ್ರನಿಗೆ ಹೇಳಿ ಎಲ್ಲರೂ ಬೊಂಬಾಯಿಗೆ ಬಂದು ಅಲ್ಲಿ ನೆಲೆಯಾಗಿ ನಿಂತರು. ಸತ್ಪುತ್ರನಾದ ಸತ್ಯೇಂದ್ರನು ಅವರಿಷ್ಟಕ್ಕೆ ಪ್ರತಿಹೇಳಲಿಲ್ಲ. ತಾಯಿ ತಂದೆಯರೂ ಸಹೋದರ ಸಹೋದರಿಯರೂ ವಾಸಮಾಡಲು ತಕ್ಕದಾಗಿ ದೊಡ್ಡ ಬಂಗಲೆಯೊಂದನ್ನು ಬಾಡಿಗೆಗೆ ತೆಗೆದುಕೊಂಡನು. ಇಷ್ಟಾದರೂ ಅನ್ನಪೂರ್ಣೆಯ ದರಿದ್ರಾವಸ್ಥೆ ಮಾತ್ರ ನೀಗಲಿಲ್ಲ. ಮುಂಚಿನಂತೆಯೇ ಬೇಳೆಯಿಲ್ಲದ ಸಾರು, ಕಾಯಿಪಲ್ಯಗಳಿಲ್ಲದ ಅಡಿಗೆ, ಹಾಲುತುಪ್ಪವಿಲ್ಲದ ಊಟ ಮುಂತಾದವುಗಳೇ ಮನೆಯವರಿಗೆ ದೊರಕುತ್ತಿದ್ದುವು. ಮಕ್ಕಳು ಕ್ಷಯರೋಗ ಬಂದವರಂತೆ ದಿನೇ ದಿನೇ ಕೃಶವಾಗಹತ್ತಿದರು. ವೃದ್ಧನಾದ ಮಹದೇವನು ಚಿಂದೀ ಬಟ್ಟೆಯನ್ನು ಧರಿಸಿ ಸದಾ ಬೀದಿ ಜಗಲಿಯ ಮೇಲೆ ಕುಳಿತಿರುತ್ತಿದ್ದನು. ಸತ್ಯೇಂದ್ರನಿಗೆ ಇವರ ವೇಷವು ಸರಿಬೀಳಲಿಲ್ಲ. ಆ ದಿನವೇ ಅಂಗಡಿಗೆ ಹೋಗಿ ಶುದ್ಧವಾದ ಬಟ್ಟೆ ಬರೆಗಳನ್ನು ತಂದುಕೊಟ್ಟು ತಂದೆಯನ್ನೂ ಸಹೋದರ ಸಹೋದರಿಯನ್ನೂ ಉಟ್ಟುಕೊಳ್ಳುವಂತೆ ಹೇಳಿದನು. ಅವನು ಮನೆಗೆ ಖರ್ಚಿಗೆ ಕೊಡುವ ಹಣವನ್ನು ಅನ್ನಪೂರ್ಣೆಯು ಭದ್ರಪಡಿಸುತ್ತಲೇ ಇದ್ದಳು.

ಈ ರೀತಿಯಾಗಿ ಎರಡು ಮೂರು ವರ್ಷಗಳು ಕಳೆದವು. ಸತ್ಯೇಂದ್ರನ ಸಹೋದರಿ ಯರೆಲ್ಲರೂ ವಿವಾಹಕ್ಕೆ ಸಿದ್ಧರಾದರು. ಅನ್ನಪೂರ್ಣೆಗೆ ಹಣದ ಯೋಚನೆಯು ತಲೆಗೆ ಹತ್ತಿತು. ಅಪ್ಪಾ! ಕುಮಾರಾ! ನಮ್ಮ ಪ್ರಿಯಪುತ್ರಿಯರಿಗೆ ಒಳ್ಳೆಯ ವರನನ್ನು ಹುಡುಕಿಕೊಡು; ಹಣ ಹೋದರೂ ಚಿಂತೆಯಿಲ್ಲ. ಮಕ್ಕಳು ಕಷ್ಟಪಡದಿರುವ ಮಾರ್ಗವನ್ನು ನೋಡು. ಕೂಡಿದ ಮಟ್ಟಿಗೂ ಅತ್ತೆಯೂ ಅತ್ತಿಗೆ ನಾದಿನಿಯರೂ ಇಲ್ಲದ ಕಡೆಗೆ ಕೊಡೋಣ ವರನು ವಿದ್ಯಾವಂತ ನಾಗಿರಲಿ. ನಮ್ಮ ಮನೆಯಲ್ಲಿಯೇ ವಿದ್ಯೆ ಹೇಳಿಸಿ ಇಟ್ಟುಕೊಳ್ಳೋಣ ಎಂದಳು. ತನ್ನ ಮಕ್ಕಳ ಸುಖದಂತೆಯೇ ಕಂಡವರ ಮನೆಯ ಹೆಣ್ಣನ್ನೂ ಆದರಿಸಬೇಕೆಂಬುದು ಮಾತ್ರ ಇವಳ ಮನಸ್ಸಿಗೆ ಹೊಳೆಯಲಿಲ್ಲ. ತನ್ನ ಮಕ್ಕಳನ್ನು ಅತ್ತೆ ಇಲ್ಲದ ಕಡೆಗೆ ಕೊಡಲು ಏರ್ಪಾಡು ಮಾಡೆಂದು ಹೇಳಿದವಳು ತನ್ನ ಸೊಸೆಯ ವಿಷಯದಲ್ಲಿ ತಾನು ತೋರಿಸಿದ ನಿರ್ದಯವನ್ನು ಸಂಪೂರ್ಣವಾಗಿ ಮರೆತಳು. ಇದನ್ನು ಸತ್ಯೇಂದ್ರನು ತಿಳಿದುಕೊಂಡರೂ ಏನೂ ಪ್ರತ್ಯುತ್ತರ ಕೊಡದೆ ಸ್ವಲ್ಪ ಹೊತ್ತು ಮೌನವಾಗಿದ್ದು ತರುವಾಯ ಅಮ್ಮಾ! ಹೆಣ್ಣು ಮಕ್ಕಳು

ವಿದ್ಯಾವಂತರಾಗಿದ್ದರೆ ವಿದ್ಯಾವಂತರಾದವರನ್ನು ಹಣ ಕೊಟ್ಟುಕೊಂಡು ಕೊಳ್ಳಬಹುದು. ನಮ್ಮ ಮಕ್ಕಳು ವಿದ್ಯಾಗಂಧನನ್ನರಿಯದ ಮೂಢ ಶಿಖಾಮಣಿಗಳು: ಇದಕ್ಕೇನು ಮಾಡುವುದು? ಎಂದನು. ನಾಳೆಯಿಂದ ಯಾರಾದರೊಬ್ಬ ಉಪಾಧ್ಯಾಯನನ್ನೇರ್ಪಡಿಸಿ ವಿದ್ಯೆ ಕಲಿಸುವಂತೆ ಮಗನಿಗೆ ಹೇಳಿದಳು. "ಅಮ್ಮಾ! ವಿದ್ಯೆಯೊಂದೇ ಸಾಲದು. ಸಂಗೀತ, ಚಿತ್ರ ಕೆಲಸ, ಹೊಲಿಗೆ ಕೆಲಸಗಳೆಲ್ಲಾ ತಿಳಿದಿರಬೇಕು. ಇವುಗಳನ್ನು ಕಲಿಸಿಕೊಡಲು ತಕ್ಕ ಉಪಾಧ್ಯಾಯಿನಿಯರು ಸಿಕ್ಕುವುದು ದುರ್ಲಭವು. ಪ್ರಾಪ್ತವಯಸ್ಕರಾದ ಹುಡುಗಿಯರಿಗೆ ಪುರುಷರಿಂದ ಹೇಳುವುದು ಉಚಿತವಲ್ಲ. ಏನು ಮಾಡಲಿ?" ಎಂದನು. ಅದಕ್ಕೆ ತಾಯಿಯು, "ಸತ್ಯೇಂದ್ರಾ! ನಾನಿರುವೆನು. ಅರಿಯದ ಮಕ್ಕಳನ್ನು ನಾನು ನೋಡಿಕೊಳ್ಳುವೆನು. ನೀನು ಏರ್ಪಾಡುಮಾಡು" ಎಂದಳು.

ತಾಯಿಯ ಮಾತನ್ನು ಕೇಳಿ ಅವಳಿಷ್ಟದಂತೆಯೇ ಸಕಲವನ್ನೂ ಏರ್ಪಾಡು ಮಾಡಿದನು. ತನ್ನ ಪತ್ನಿಯ ವಿಷಯದಲ್ಲಿ ತಾಯಿಯು ನಡೆಸಿದ್ದ ದೌರಾತ್ಮ್ಯವು ಇವನನ್ನು ಬಾಧಿಸಿದರೂ ತಾನು ಅವಳ ಸೌಖ್ಯಕ್ಕೆ ತಕ್ಕಷ್ಟು ಏರ್ಪಾಡು ಮಾಡಿದ್ದರಿಂದ ಅವಳ ವಿಷಯದಲ್ಲಿ ಇವನಿಗೆ ಸ್ವಲ್ಪವೂ ಚಿಂತೆ ಇರಲಿಲ್ಲ.

## ೪ನೆಯ ಅಧ್ಯಾಯ

## ಅನ್ನಪೂರ್ಣೆಯ ಪರಿಣಾಮ

ಅನ್ನಪೂರ್ಣೆಯು ಕನ್ಯಾರ್ಥಿಯಾಗಿ ಬಂದವರನ್ನೆಲ್ಲಾ ದರಿದ್ರರೆಂದೂ ಮೂದೇವಿಯರೆಂದೂ ಹೇಳಿ ನಿರಾಕರಿಸುತ್ತಿದ್ದಳು. ಡೆಪ್ಯೂಟಿ ಕಮೀಷನರ್ (Deputy Commissioner), ಬ್ಯಾರಿಸ್ಟರ್ (Barrister), ಡಿಸ್ಟ್ರಿಕ್ ಜಡ್ಜ್ (District Judge) ಇಂತಹ ವರನನ್ನು ಹುಡುಕಲು ಮಗನಿಗೆ ಹೇಳುತ್ತಿದ್ದಳು. ಸತ್ಯೇಂದ್ರನು ಅದು ಅಸಾಧ್ಯವೆಂದನು. ಹುಡುಗಿಯರು ಪ್ರೌಢರಾದುದನ್ನು ಎಷ್ಟು ದಿನತಾನೇ ಮುಚ್ಚಿಡಲಾದೀತು. ಪ್ರತಿಯೊಬ್ಬ ಹೆಣ್ಣಿಗೂ ೨,೦೦೦-೩,೦೦೦ ರೂಪಾಯಿಗಳನ್ನು ಕೊಟ್ಟು ಮದ್ರಾಸ್, ಹೈದರಾಬಾದ್, ಪಂಜಾಬ್ ಮೊದಲಾದ ಕಡೆಗಳಲ್ಲಿರುವ ವರನನ್ನು ಕೊಂಡು ಧಾರೆ ಎರೆದರು. ಮದುವೆಯಾದ ತಿಂಗಳಿಗೆಲ್ಲಾ ಪುಷ್ಪವತಿಯಾದರೆಂಬ ವರ್ತಮಾನವು ಬೀಗರಿಗೆ ತಿಳುಹಿಸಲ್ಪಟ್ಟಿತು. ಹಣ ಕೊಟ್ಟ ಹೊರತು ನಿಷೇಕಪ್ರಸ್ತವನ್ನು ಮಾಡಿಕೊಳ್ಳುವುದಿಲ್ಲವೆಂದು ಗಂಡಿನ ಮನೆಯವರು ಮುಷ್ಕರ ಹಿಡಿದರು. ಅನ್ನಪೂರ್ಣೆಯಂತೆ ಅವಳ ಬೀಗರೂ ಧನಪಿಶಾಚಗ್ರಸ್ಥರೆಂದು ವಾಚಕರು ಊಹಿಸಬಹುದು. ಅವರಿಗೆ ಇವಳಂತೆ ಹಣದಾಸೆ ಇರಲಿಲ್ಲ. ಶ್ರೀಮಂತ ಪದವಿಯಲ್ಲಿದ್ದರಲ್ಲದೆ ಮಾನಮರ್ಯಾದೆಗೆ ಹೆದರುತ್ತಿದ್ದರು. ಇವಳು ಸತ್ಯೇಂದ್ರನ ಪತ್ನಿಯ ವಿಷಯದಲ್ಲಿ ನಡೆಸಿದ ಅತ್ಯಾಚಾರವು ಅವರಿಗೆಲ್ಲಾ ತಿಳಿದಿತ್ತು. ಅವರೂ ಸತ್ಯೇಂದ್ರನೂ ಹಣಪಿಶಾಚಿಯನ್ನು ಅನ್ನಪೂರ್ಣೆಯಿಂದ ತೊಲಗಿಸಬೇಕೆಂದೇ ಈ ಉಪಾಯವನ್ನು ಮಾಡಿದರು.

ಇಲ್ಲಿಯವರೆಗೆ ಕೂಡಿಟ್ಟಿದ್ದ ಹಣವು ಮದುವೆಗೆ ಖರ್ಚಾಯಿತು. ಇನ್ನು ಮೇಲೆ ಸಂಪಾದಿಸಿದರೇನೆ ಹಣ. ಸತ್ಯೇಂದ್ರನು ಎಂದಿನಂತೆ ತಿಂಗಳಿಗೆ ೧೦೦ ರೂಪಾಯಿಗಳಿಗೆ ಹೆಚ್ಚಾಗಿ

ಕೊಡುತ್ತಿರಲಿಲ್ಲ. ನಿಷೇಕ ಪ್ರಸ್ತಕ್ಕೆ ಹಣವನ್ನೆಲ್ಲಿಂದ ಒದಗಿಸಬೇಕು? ಅನ್ನಪೂರ್ಣೆಯು ಏನು ಮಾಡಿಯಾಳು! ಬೀಗರ ಕಾಲಿಗೆ ಬಿದ್ದಳು. ಅಳಿಯಂದಿರನ್ನು ಬೇಡಿಕೊಂಡಳು. ಕೆಲಸವಾಗದ್ದನ್ನು ಕಂಡು ಬೈಯಲು ಮೊದಲು ಮಾಡಿದಳು. ಕೆಲಸವಾಗಬೇಕೆಂದು ಅವಳು ಪಟ್ಟ ಪ್ರಯಾಸಕ್ಕೆ ಅಳವಿಲ್ಲ. ಹಣ, ಹಣ, ಎನ್ನುವ ಪದವೇ ಅವಳಿಗೆ ಗಾಯತ್ರೀ ಜಪವಾಗಿತ್ತು. ಉತ್ಸಾಹವು ಕಮ್ಮಿಯಾಯಿತು ಗರ್ವವಡಗಿತು. ಏನೇನೋ ಯೋಚನೆ ಮಾಡಿದಳು. ಸುಖದಿಂದ ವಂಚಿತರಾದ ಕನ್ಯೆಯರನ್ನು ನೋಡಲಾರನೆಂದು ಮಗನಕಾಲಿಗೆ ಬಿದ್ದಳು. ಮಹದೇವನನ್ನು ಕಂಡು ರೇಗಿದಳು. ಅಪ್ಪಪ್ಪಾ! ಅವಳ ಅವಸ್ಥೆಯು ಹುಚ್ಚು ಹಿಡಿದ ಕೋತಿಯು ಸುರಾಪಾನ ಮಾಡಿದ ಮೇಲೆ ಅದು ಇರುವ ಸ್ಥಿತಿಯಂತಿತ್ತು. ಇಷ್ಟಾದರೂ ಅವಳಿಗೆ ಪ್ರಿಯಂವದೆಯ ಜ್ಞಾಪಕವೇ ಬರಲಿಲ್ಲ. ತನ್ನ ಬೀಗತಿಯು ಬಂದು ಕಾಲಿಗೆ ಬಿದ್ದಾಗ ಅವಳನ್ನು ತಾನು ನಿರಾಕರಿಸಿದ್ದೂ, ಪ್ರಿಯಂವದೆಯು ಕಾಲಿಗೆ ಬಿದ್ದಾಗ ಅವಳನ್ನು ಮನೆ ಬಿಟ್ಟೋಡಿಸಿದ್ದೂ, ಇದೊಂದು ಜ್ಞಾಪಕವೇ ಇರಲಿಲ್ಲ. ತನ್ನ ಮಕ್ಕಳಿಗೆ ಸುಖವಿಲ್ಲದಿದ್ದರೆ ತನ್ನ ಹೊಟ್ಟೆಯುರಿಯುವಂತೆ ತನ್ನ ಸೊಸೆಯ ತಾಯಿಗೂ ಇರುವುದೆಂದು ಅವಳು ತಿಳಿಯಲೇ ಇಲ್ಲ. ಇಷ್ಟೆಲ್ಲಾ ನಡೆದರೂ ಅವಳಿಗೆ ಪ್ರಿಯಂವದೆಯ ಕಷ್ಟವೇ ಮನಸ್ಸಿಗೆ ಹೊಳೆಯಲಿಲ್ಲ. ಕೊನೆಗೆ, "ಕುಮಾರಾ! ನನಗಾಗಿಯಾದರೂ ಮಕ್ಕಳನ್ನು ಸುಖ ಸ್ಥಿತಿಯಲ್ಲಿಡಬಾರದೇ" ಎಂದಳು. ಅದಕ್ಕೆ ಸತ್ಯೇಂದ್ರನು, "ಅಮ್ಮಾ! ಅವರ ವಿಷಯದಲ್ಲಿ ನಿಮಗಿರುವ ಅಕ್ಕರೆಯು ನನಗಿಲ್ಲವೇ. ಆದರೆ ನಾನೇನು ಮಾಡಲಿ, ತಿಂಗಳಿಗೆ ನಾನು ಸಂಪಾದಿಸುವುದೆಲ್ಲಾ ೧೦೦ ರೂಪಾಯಿಗಳು ಮಾತ್ರವೇ. ಅದನ್ನೂ ತಮ್ಮ ಕೈಯ್ಯಲ್ಲೇ ಕೊಡುತ್ತೇನೆ ಬೇರೆ ವರಮಾನವಿಲ್ಲ. ಉಪೇಂದ್ರನು ಒಂದು ಕಾಸು ಕೂಡ ಸಂಪಾದಿಸುವುದಿಲ್ಲ. ಈ ಪಟ್ಟಣದಲ್ಲಿ ಮನೆಗೆ ಬಾಡಿಗೆ ೨೦ ರೂಪಾಯಿಗಳು ಕೊಟ್ಟುಕೊಂಡು ಉಳಿದ ೮೦ ರೂಪಾಯಿಗಳಲ್ಲಿ ನಾವೆಲ್ಲರೂ ಭೋಜನ ಮಾಡಿ, ಬಟ್ಟೆಗಳನ್ನು ಧರಿಸುವುದೇ ಬಹಳ ಕಷ್ಟವಾಗಿರುವುದು. ನನ್ನಿಂದ ವಂಚನೆಯೇನೂ ಇಲ್ಲ. ಸಹೋದರಿಯರು ಸುಖವಾಗಿ ನಮ್ಮ ಮನೆಯಲ್ಲಿಯೇ ಇರಲಿ" ಎಂದನು. "ಅಯ್ಯೋ! ಸುಖವಿಲ್ಲದ ಮಕ್ಕಳೂ ಉಂಟೇ? ಎಲ್ಲಾದರೂ ಸಾಲ ತಂದಾದರೂ ಅವರು ಸುಖವಾಗಿರುವ ಮಾರ್ಗವನ್ನು ಹುಡುಕು" ಆ ಧನಪಿಶಾಚಿ ಹಿಡಿದ ಪಾಪಿಗಳಿಗೆ ಸ್ವಲ್ಪವೂ ದಯೆಯೇ ಇಲ್ಲ. ನೀನು ಸಾಯದೆ ಬದುಕಿದ್ದರೆ ೪,೦೦೦ ರೂಪಾಯಿಗಳನ್ನು ಆರು ತಿಂಗಳಲ್ಲಿ ಸಂಪಾದಿಸಬಲ್ಲೆ. ಮಕ್ಕಳು ಕಷ್ಟಪಟ್ಟರೆ ನಮಗದರಿಂದ ದುಃಖವುಂಟಾಗುವುದಿಲ್ಲವೇ" ಎಂದಳು. ಇಷ್ಟೊಂದು ಅವಸ್ಥೆಪಟ್ಟರೂ ಕೂಡ ಅವಳಿಗೆ ಪ್ರಿಯಂವದೆಯ ಜ್ಞಾಪಕವೇ ಬರಲಿಲ್ಲ. ತಾನು ದಯದಾಕ್ಷಿಣ್ಯವಿಲ್ಲದೆ ದಿಕ್ಕಿಲ್ಲದ ವಿಧವೆಯಾದ ಸೊಸೆಯ ತಾಯನ್ನು ಹಣ ಕೇಳಿದಾಗ ಅವಳ ಮನಸ್ಸು ಎಷ್ಟು ಕಷ್ಟಪಟ್ಟಿರಬಹುದೆಂದು ಅವಳಿಗೆ ಹೊಳೆಯಲೇ ಇಲ್ಲವೆಂದರೆ ಹಣದ ಮಹಾತ್ಮವು ಎಷ್ಟರಮಟ್ಟಿಗಿರಬಹುದು? ಸತ್ಯೇಂದ್ರನಿಗೆ ಈ ವಿಷಯಗಳೆಲ್ಲಾ ತಿಳಿದಿದ್ದರೂ ಮೌನವಾಗಿದ್ದನು. ಕೊನೆಗೆ ಅನ್ನಪೂರ್ಣೆಗೆ ಒಂದು ಯೋಚನೆ ಹೊಳೆಯಿತು. ಅದನ್ನು ಸತ್ಯೇಂದ್ರನಿಗೆ "ಕುಮಾರಾ! ನೀನು ಏತಕ್ಕೆ ವಿವಾಹವಿಲ್ಲದಿರುವೆ? ಈಗ ನೀನು

ವಿವಾಹ ಮಾಡಿಕೊಂಡರೆ ನಿನ್ನ ಸಹೋದರಿಯರ ಕಷ್ಟವು ನೀಗುವುದು'' ಎಂದಳು.

ತಾಯಿಯ ಮಾತನ್ನು ಕೇಳಿದ ಸತ್ಯೇಂದ್ರನು ನಕ್ಕು, ''ಅಮ್ಮಾ, ಹಿಂದೆಯೊಂದು ಸಲ ತಮಗೆ ನಾನು ೫,೦೦೦ ರೂಪಾಯಿಗಳನ್ನು ಕಳುಹಿಸಿದೆನಲ್ಲವೇ? ಆ ಹಣವು ನನಗೆ ಹೆಣ್ಣು ಕೊಟ್ಟ ಮಾವನಿಂದ ವರದಕ್ಷಿಣೆಯಾಗಿ ಕೊಡಲ್ಪಟ್ಟದ್ದು. ತರುವಾಯ ಅವರು ನಿಷೇಕಪ್ರಸ್ತ ಮಾಡಿಕೊಳ್ಳುವಂತೆ ಹೇಳಿದರು. ನಾನು ಸರಿಯೆಂದು ಒಪ್ಪಿಕೊಂಡೆನು. ನಿಮ್ಮಗಳನ್ನೆಲ್ಲಾ ತ್ಯಜಿಸಿ ಬೇರೆ ಬಂದರೆ ತನ್ನ ಮಗಳನ್ನು ಪ್ರಸ್ತ ಮಾಡಿಕೊಡುವೆನೆಂದು ಹೇಳಿದರು. ಹೆತ್ತ ಮಾತಾಪಿತೃಗಳಿಗಿಂತ ಹೆಂಡತಿ ಶ್ರೇಷ್ಠಳೇ? ಎಂದಿಗೂ ತಾಯಿತಂದೆಗಳನ್ನು ತ್ಯಜಿಸಲಾರ ನೆಂದೆನು. ಆದರೆ ಹೆಂಡತಿಯ ಆಶೆಯನ್ನು ಮರೆತುಬಿಡು ಎಂದರು'' ಎಂದನು.

ಸತ್ಯೇಂದ್ರನು ಹೇಳಿದವುಗಳೆಲ್ಲಾ ನಿಜವಲ್ಲವೆಂಬುದನ್ನು ವಾಚಕರು ಅರಿತಿರಬಹುದು. ಅದಕ್ಕೆ ಅನ್ನಪೂರ್ಣೆಯು ಆಶ್ಚರ್ಯದಿಂದ, ವತ್ಸಾ! ''ಕಾರ್ಯವಾಸಿ ಕತ್ತೆಕಾಲು ಕಟ್ಟಬೇಕು'' ಎಂದು ಹೇಳುವುದಿಲ್ಲವೇ? ಎರಡು ದಿನ ಎಲ್ಲರನ್ನೂ ಬಿಟ್ಟಿರುವಂತೆ ಇದ್ದು ಹಣವನ್ನೂ ಹೆಣ್ಣನ್ನೂ ಸ್ವಾಧೀನಪಡಿಸಿಕೋ. ಹಣವನ್ನು ತಂಗಿಯರಿಗೂ. ಹೆಣ್ಣನ್ನು ಕೆಲಸಕ್ಕೂ ಉಪಯೋಗಿಸಿಕೊಳ್ಳಬಹುದು. ಮೊದಲು ನಮ್ಮ ಸುಖವನ್ನು ನೋಡಿಕೊಳ್ಳಬೇಕಲ್ಲವೆ? ನಿಮ್ಮ ಅತ್ತೆಯವರೊಂದಿಗೆ ಮಾತನಾಡಿ ಕೆಲಸವನ್ನು ಸಾಧಿಸಿಕೋ'' ಎಂದಳು.

ಅನ್ನಪೂರ್ಣೆಯ ಕಾಪಟ್ಯವನ್ನೂ ನಿರ್ದಯತ್ವವನ್ನೂ ಕಂಡ ಸತ್ಯೇಂದ್ರನು ಆಶ್ಚರ್ಯ ಹೊಂದಿದನು. ಸತ್ಯೇಂದ್ರನು ''ಅಮ್ಮಾ. ಅವಳು ಧನವಂತನ ಮಗಳು. ಏನಾದರೂ ತಪ್ಪು ನಡೆದರೆ ಕೋರ್ಟಿಗೆ ಹೋಗಲು ಕೂಡ ಹಿಂಜರಿಯಳು. ವಿವಾಹ ಕಾಲದಲ್ಲಿ ಕೊಟ್ಟ ೫,೦೦೦ ರೂಪಾಯಿಗಳಿಗೆ ಲೆಕ್ಕ ಕೇಳಿದರೆ ಏನು ಮಾಡುವುದು?'' ಎಂದನು.

ಅದಕ್ಕೆ ಅನ್ನಪೂರ್ಣೆಯು ''ಪುತ್ರಾ! ಸತ್ಯೇಂದ್ರಾ!! ಸಮಯೋಜಿತವಾಗಿ ಮಾತನಾಡಿ ಹಣವನ್ನು ದಕ್ಕಿಸಿಕೊಳ್ಳಲು, ಹಣ ಸಂಪಾದಿಸಲೂ ನಿನಗೆ ತಿಳಿಯದೆ? ಅನ್ಯಾಯವಾಗಿ ನಿನ್ನ ತಂಗಿಯರು ಸುಖವಿಲ್ಲದೆ ಸಂಕಟಪಡುವರಲ್ಲಾ'' ಎಂದಳು. ಇದಕ್ಕೆ ಸತ್ಯೇಂದ್ರನು ''ಅಮ್ಮಾ ನೀವು ಹೇಳಿದಂತೆಯೇ ಮಾಡುವೆನು ಅವರ ದೇಶಕ್ಕೆ ಹೋಗಿ ಕನ್ಯೆಯನ್ನೂ ಹಣವನ್ನೂ ಸ್ವಾಧೀನಪಡಿಸಿಕೊಳ್ಳುವೆನು. ಇಲ್ಲಿಗೆ ನಿನ್ನ ಸೊಸೆಯು ಬಂದರೆ ನಾವು ತೆಗೆದುಕೊಳ್ಳುವ ಆಹಾರವನ್ನೂ ನಮ್ಮ ಉಡಿಗೆ ತೊಡಿಗೆಗಳನ್ನೂ ನೋಡಿ ಹಾಸ್ಯ ಮಾಡುವಳಲ್ಲಾ. ನೀವೂ ನನ್ನಂತೆಯೇ ಸ್ವಲ್ಪ ದಿನ ಡಂಬವಾಗಿರಬೇಕು. ನಿಮಗಿದು ಸಮ್ಮತವೇ ಎಂದನು.

ಹ್ಯಾಗಾದರೂ ಹಣ ಸಿಕ್ಕಿದರೆ ಸಾಕೆಂದಿದ್ದ ಅನ್ನಪೂರ್ಣೆಯು ಮಗನ ಮಾತಿಗೆ ಒಪ್ಪಿಕೊಂಡಳು. ಸತ್ಯೇಂದ್ರನು ಮನೆಯಲ್ಲಿರುವವರ ಅನುಮತಿಯನ್ನು ಪಡೆದು, ಪತ್ನಿಯನ್ನು ಕರೆತರಲು ಹೊರಟನು. ಎಲ್ಲಿಗೆ ಹೋಗುವನೆಂದೂ, ಯಾವಾಗ ಬರುವನೆಂದೂ, ಯಾರೂ ಪ್ರಶ್ನೆ ಮಾಡಲಿಲ್ಲ. ಅನ್ನಪೂರ್ಣೆಗೆ ಧನಪಿಶಾಚಿಯ ಹೊರತು ಮತ್ತೇನೂ ಚಿಂತೆಯೇ ಇರಲಿಲ್ಲ. ಸತ್ಯೇಂದ್ರನು ಆ ದಿನ ರಾತ್ರಿ ರೈಲು ಹತ್ತಿ ಮೂರನೇ ದಿನ ಬೆಂಗಳೂರನ್ನು ತಲಪಿದನು. ತರುವಾಯ ರೈಲನ್ನು ಬಿಟ್ಟಿಳಿದು ಕೋಚ್‌ಗಾಡಿಯೊಂದನ್ನು ಬಾಡಿಗೆಗೆ

ತೆಗೆದುಕೊಂಡು ಬಸವನಗುಡಿಗೆ ಬಿಡುವಂತೆ ಹೇಳಿದನು. ಸತ್ಯೇಂದ್ರನ ಮುಖದಲ್ಲಿ ಪ್ರಕಾಶ ವುಂಟಾಯಿತು. ಅವನ ಸಂತೋಷಕ್ಕೆ ಪಾರವಿರಲಿಲ್ಲ. ತನ್ನ ಹೆಂಡತಿಯನ್ನು ಕುರಿತಾಗಲೀ ತನ್ನನ್ನು ಕುರಿತಾಗಲೀ ಇದುವರೆಗೆ ಯೋಚಿಸಿದವನಲ್ಲ. ಬಡವರಾದ ತಾಯಿತಂದೆಗಳು ತನ್ನನ್ನು ಹೊತ್ತು, ಹೆತ್ತು, ಸಲಹಿದುದಕ್ಕಾಗಿ ತನ್ನ ಸ್ವಂತ ಸುಖವನ್ನು ಕೂಡ ಅವರ ಮಾತಿನಂತೆ ತ್ಯಜಿಸಿದನು. ಅವರು ಕೇಳಿದಾಗಲೆಲ್ಲಾ ಧನಸಹಾಯ ಮಾಡಿದನು. ತಮ್ಮನನ್ನು ವಿದ್ಯಾವಂತ ನಾಗಿ ಮಾಡಿದನು. ಸಹೋದರಿಯರಿಗೆ ವಿದ್ಯಾಬುದ್ಧಿಗಳನ್ನು ಬೋಧಿಸಿತಕ್ಕ ಸ್ಥಳದಲ್ಲಿ ವಿವಾಹ ಮಾಡಿಕೊಟ್ಟನು. ತಾನು ಮಾಡಬೇಕಾದ ಕಾರ್ಯಗಳನ್ನೆಲ್ಲಾ ಯಾವ ಕುಂದಕವೂ ಇಲ್ಲದೇ ನೆರವೇರಿಸಿದನು. ತಾಯಿತಂದೆಗಳ ಸುಖ ಜೀವನಾರ್ಥವಾಗಿ ಧಾರವಾಡದಲ್ಲಿ ಹೇರಳವಾದ ಜಮೀನನ್ನು ಕೊಂಡು ಅವರರಿಯದಂತೆ ಅದರಲ್ಲಿ ಸುಂದರವಾದ ಭವನವೊಂದನ್ನು ನಿರ್ಮಿಸಿದನು. ಈ ಸಂಗತಿಯನ್ನು ಮಾತಾಪಿತೃ, ಸಹೋದರ ಸಹೋದರಿಯರಿಯದಂತೆ ಬಹಳ ಸಾಮರ್ಥ್ಯವಾಗಿ ನಡೆಸಿದನು. ಈಗ ಸಧ್ಯಕ್ಕೆ ತಂಗಿಯರನ್ನು ಅವರವರ ಅತ್ತೆಯ ಮನೆಗಳಿಗೆ ಕಳುಹಿಸಬೇಕಾದುದೊಂದೇ ಬಾಕಿ ನಿಂತಿರುವುದು. ಈ ದಿನ ಅವನು ಯಾತಕ್ಕೋಸ್ಕರ ಬೆಂಗಳೂರಿಗೆ ಬಂದಿರುವನೆಂಬುದನ್ನು ಯಾರು ಬಲ್ಲರು? ಗಾಡಿಯಲ್ಲಿ ನಾನಾ ವಿಧವಾಗಿ ಯೋಚಿಸುತಲಿದ್ದವನಿಗೆ ಮನೆಬಾಗಿಲಗೆ ಬಂದು ನಿಲ್ಲುತ್ತಲೂ ಸ್ಮರಣೆಯುಂಟಾಗಲು ಗಾಡಿಯವನಿಗೆ ಬಾಡಿಗೆಯನ್ನು ಕೊಟ್ಟ ಕಳುಹಿಸಿ ತಾನು ಗೃಹದೊಳಗೆ ಪ್ರವೇಶಿಸಿದನು.

ಪ್ರಿಯಂವದೆಯು ಮೈಸೂರು ಮಹಾರಾಣಿಯವರ ಕಾಲೇಜಿನಲ್ಲಿ ವಿದ್ಯಾವ್ಯಾಸಂಗ ಮಾಡಲು ಏರ್ಪಾಡನ್ನು ಸತ್ಯೇಂದ್ರನು ಮೊದಲೇ ಮಾಡಿದ್ದನೆಂದು ಹಿಂದೆಯೇ ತಿಳಿಸಿದೆಯಷ್ಟೆ. ಅವಳು ಬಹಳ ಚತುರೆಯಾದುದರಿಂದ ವ್ಯಾಸಂಗವನ್ನು ಮುಗಿಸಿಕೊಂಡು ತಾಯಿಮಗಳಿಬ್ಬರೂ ಸತ್ಯೇಂದ್ರನ ಏರ್ಪಾಡಿನಂತೆ ಈಗ ಬೆಂಗಳೂರು ಬಸವನಗುಡಿಯಲ್ಲಿ ಒಂದು ದಿವ್ಯ ಭವನದಲ್ಲಿ ವಾಸಮಾಡುತ್ತಿದ್ದರು. ಅನ್ನಪೂರ್ಣೆಯು ಧನವನ್ನೂ ಕನ್ಯೆಯನ್ನೂ ಸ್ವಾಧೀನ ಪಡಿಸಿಕೊಂಡು ಬರುವಂತೆ ಹೇಳಿದುದರಿಂದ ಸತ್ಯೇಂದ್ರನು ಹೆಂಡತಿಯನ್ನು ಕರೆತರಲು ಬೆಂಗಳೂರಿಗೆ ಬಂದನು.

## ೫೭ನೆಯ ಅಧ್ಯಾಯ

## ಕಾಂತಾಮಣಿ

ಸತ್ಯೇಂದ್ರನು ಗಾಡಿಯಿಂದಿಳಿದು ಮನೆಯೊಳಗೆ ಪ್ರವೇಶಿಸಿದನು. ತರುಣಿಯೊಬ್ಬಳು ಹಸನ್ಮುಖದಿಂದ ಬಂದು; ಸತ್ಯೇಂದ್ರನ ಕ್ಷೇಮವನ್ನು ವಿಚಾರಿಸಿ ಗೃಹದೊಳಗೆ ಕರೆದುಕೊಂಡು ಹೋದಳು. ತರುವಾಯ ಸತ್ಯೇಂದ್ರನು ತರುಣಿಯ ಕೈಯನ್ನು ಹಿಡಿದುಕೊಂಡು "ಕಾಂತಾಮಣೀ, ನೀನು ಕ್ಷೇಮದಿಂದಿರುವೆಯಾ? ಎಂದು ಕೇಳಿದನು. ತರುಣಿಯು ಪ್ರಶ್ನೆಗೆ ಉತ್ತರ ಕೊಡಲಿಲ್ಲಾ ಅವನು ಪುನಃ ಅದೇ ಪ್ರಶ್ನೆಯನ್ನು ಕೇಳಲು ತರುಣಿಯು ತಲೆಯನ್ನ ಲ್ಲಾಡಿಸಿದಳು. ಅದಕ್ಕೆ ಸತ್ಯೇಂದ್ರನು "ಇದೇನು ಕಾಂತಾಮಣೀ, ಕರ್ನಾಟಕ ರಾಜ್ಯದಲ್ಲಿ

ವಾಸಮಾಡುವುದರಿಂದ ಕಲಿತ ನಾಗರೀಕವೋ?" ಎಂದನು. ಅದಕ್ಕೆ ರಮಣಿಯು "ಪ್ರಾಣೇಶ್ವರಾ! ಕೋಪಿಸಿಕೊಳ್ಳಬೇಡಿರಿ. ನಾನು ತಮ್ಮೊಂದಿಗೆ ಮಾತನಾಡುವುದು ಇದೇ ಮೊದಲು ಸಲವಾದುದರಿಂದ ಭಯ ಸಂಕೋಚಾದಿಗಳು ನನ್ನನ್ನು ಬಾಧಿಸುತ್ತಿರುವುವು" ಎಂದಳು.

ತರುಣಿಯು, ಮನೋಹರವಾದ ಸೌಂದರ್ಯಕ್ಕೆ ತಕ್ಕಷ್ಟು ಉದ್ದವಾಗಿಯೂ, ದಪ್ಪ ವಾಗಿಯೂ ಇದ್ದಳಲ್ಲದೆ ದೇಹಕಾಂತಿಯುಳ್ಳವಳಾಗಿದ್ದಳು. ಹೆಚ್ಚು ಆಭರಣಗಳನ್ನು ಧರಿಸದೆ ಕೈಗಳಲ್ಲಿ ಎರಡು ಚಿನ್ನದ ಬಳೆಗಳನ್ನೂ ಕತ್ತಿನಲ್ಲಿ ಎರಡು ಹಾರಗಳನ್ನೂ ಧರಿಸಿದ್ದಳು. ಕಿವಿಯಲ್ಲಿ ಸಣ್ಣದಾದ ವಜ್ರದ ಓಲೆ, ಮೂಗುಬೊಟ್ಟು, ಸೊಂಟದಲ್ಲಿ ಬಂಗಾರದ ಡಾಬು ಇಷ್ಟನ್ನು ಮಾತ್ರ ಧರಿಸಿದ್ದಳು. ಸಣ್ಣಂಚಿನ ಸೀರೆಯನ್ನುಟ್ಟು ಬಿಳೀರೇಷ್ಮೆಯ ಕುಪ್ಪಸವನ್ನು ತೊಟ್ಟಿದ್ದಳು. ಈ ತರುಣಿಯೇ ನಮ್ಮ ಕಥಾನಾಯಕಿಯಾದ ಪ್ರಿಯಂವದೆಯ. ಇವಳನ್ನು ಸತ್ಯೇಂದ್ರನು ಕಾಂತಾಮಣಿಯೆಂದು ಪ್ರೇಮದಿಂದ ಕರೆಯುತ್ತಿದ್ದನು. ಪ್ರಿಯಂವದೆಯು ಮೊದಲೇ ಸುಂದರಳಾಗಿದ್ದರೂ ಕೂಡ ಈಗ ಯೌವ್ವನ ಪ್ರಾಯವನ್ನು ಹೊಂದಿದ್ದಳಾದ್ದರಿಂದ ಮತ್ತಷ್ಟು ಸೌಂದರ್ಯವುಳ್ಳವಳಾಗಿ ಕಂಡುಬಂದಳು.

ಸತ್ಯೇಂದ್ರ-ಪ್ರಿಯಂವದೆಯರಿಬ್ಬರಿಗೂ ಕುಶಲಪ್ರಶ್ನೆಗಳು ನಡೆದನಂತರ ಸತಿಯು ಪಾಕಶಾಲೆಗೆ ಹೋಗಿ ಬೆಳ್ಳಿಯ ತಟ್ಟೆಯಲ್ಲಿ ವಿವಿಧ ಭಕ್ಷ್ಯ ಭೋಜ್ಯಗಳನ್ನೂ, ಬೆಳ್ಳಿಯ ಚೊಂಬಿನಲ್ಲಿ ನೀರನ್ನೂ ತಂದಿಟ್ಟಳು. ಸತಿಪತಿಯರಿಬ್ಬರೂ ಫಲಹಾರವನ್ನು ಸ್ವೀಕರಿಸಿದ ನಂತರ ತರುಣಿಯು ತಾಂಬೂಲವನ್ನು ಮಡಿಸಿಕೊಡುತ್ತಿದ್ದಳು. ಸತ್ಯೇಂದ್ರನು ಸತಿಯ ಸೌಂದರ್ಯವನ್ನು ಕಂಡು ಆನಂದಿಸಲಾರಂಭಿಸಿದನು. ತರುವಾಯ ಬಹಳ ಹೊತ್ತು ಇಬ್ಬರೂ ಮಾತನಾಡಲಿಲ್ಲ. ಸತಿಯ ಮೌನವ್ರತವನ್ನು ಕಂಡ ಪತಿಯು ತಾನೇ ಮಾತನಾಡಲಾ ರಂಭಿಸಿದನು.

**ಸತ್ಯೇಂದ್ರ :** ಪ್ರಿಯೆ! ಈಗ ನಿನ್ನ ಮನವು ತೃಪ್ತಿ ಹೊಂದಿತಲ್ಲವೇ?

**ಪ್ರಿಯಂವದೆ :** ಜೀವಿತೇಶ್ವರ! ತಮ್ಮ ಕಟ್ಟಳೆಯೂ. ತಮ್ಮ ದರ್ಶನವೂ ನನಗೆ ಅಳವಿಲ್ಲದ ಹರ್ಷವನ್ನುಂಟು ಮಾಡುತ್ತಿರುವವು.

**ಸತ್ಯೇಂದ್ರ :** ರಮಣೀ! ಇಷ್ಟು ದಿನ ಮಾಡಿದ ಏಕಾಂತವಾಸವು ಸಾಲದೇ? ಇನ್ನು ಮೇಲಾದರೂ ನನ್ನೊಂದಿಗೆ ಬರಬಹುದಲ್ಲವೇ?

**ಪ್ರಿಯಂವದೆ :** ಪ್ರಭುವೇ! ತಮ್ಮ ಅಪ್ಪಣೆಯಂತೆ ನಡೆಯಲು ಸಿದ್ಧಳಾಗಿರುವೆನು.

**ಸತ್ಯೇಂದ್ರ :** ಪ್ರಿಯಳೇ, ಮರೆತೆನು. ನಿನ್ನ ತಾಯಿಯೆಲ್ಲಿ?

**ಪ್ರಿಯಂವದೆ :** ತಾಯಿಯು ಪಾಕಶಾಲೆಯಲ್ಲಿರಬಹುದು.

**ಸತ್ಯೇಂದ್ರ :** ನಾವಿಬ್ಬರೂ ಫಲಾಹಾರವನ್ನು ಮಾಡಿದೆವಲ್ಲಾ ಅವರ ಆಹಾರಕ್ಕೇನೂ ಏರ್ಪಾಡು ಮಾಡಲಿಲ್ಲವೇ? ನೀನು ಹೋಗಿ ನೋಡು!

**ಪ್ರಿಯಂವದೆ :** ಹೃದಯೇಶ್ವರ. ತಮಗೆ ಶ್ರಮವು ಬೇಡ! ಅವರು ಹಗಲು ಒಂದು ಹೊತ್ತು ಹೊರತು ಎರಡನೇ ಸಲ ಭೋಜನವನ್ನು ಸ್ವೀಕರಿಸಲಾರರು.

**ಸತ್ಯೇಂದ್ರ :** ಕಾಂತಾಮಣೀ, ಅದು ತಪ್ಪು. ನಿನ್ನ ಕಷ್ಟಕಾಲದಲ್ಲಿ ನಿನ್ನನ್ನು ರಕ್ಷಿಸಿದ ಮಾತೆಯನ್ನು ನೀನು ಕಾಪಾಡಬೇಕಾದುದು ನಿನ್ನ ಕರ್ತವ್ಯವು. ಬಾ! ನಾವಿಬ್ಬರೂ ಹೋಗಿ ಅವರನ್ನು ಆಹಾರ ತೆಗೆದುಕೊಳ್ಳುವಂತೆ ಹೇಳೋಣ.

**ಪ್ರಿಯಂವದೆ :** ಕಾಂತಾ! ನಾನು ತಮ್ಮ ಮಾತಿಗೆ ಎದಿರಾಡುವೆನೆಂದು ಎಣಿಸಬೇಡಿ. ತಾಯಿಯು ಯಾರು ಹೇಳಿದರೂ ಆಹಾರವನ್ನು ಸ್ವೀಕರಿಸಲಾರರು. ಆದ್ದರಿಂದ ತಾವು ಕಷ್ಟಪಡದೆ ಮಲಗಿಕೊಳ್ಳಿ.

**ಸತ್ಯೇಂದ್ರ :** "ಅದೆಲ್ಲಾ ಕೂಡದು. ನೀನು ಬಾ!" ಎಂದು ಹೇಳಿ ಕಾಂತೆಯ ಕೈಯನ್ನು ಹಿಡಿದುಕೊಂಡು ಅವಳು ತೋರಿಸುವ ಮಾರ್ಗವಾಗಿ ಹೋದನು. ಅಲ್ಲಿ ಪ್ರಿಯಂವದೆಯ ತಾಯಿಯು ಪರಮೇಶ್ವರ ಧ್ಯಾನವನ್ನು ಮಾಡುತ್ತಾ ಕುಳಿತಿದ್ದಳು. "ತಾಯೇ ನಮಸ್ಕರಿಸುವೆನು. "ಇಬ್ಬರೂ ದೀರ್ಘಾಯುಷ್ಮಂತರಾಗಿ ಬಾಳಿರಿ" ಎಂದು ಹರಿಸಿದಳು. ತರುವಾಯ ಸತ್ಯೇಂದ್ರನು, "ಅತ್ತೆಮ್ಮನವರೇ! ತಮ್ಮ ಅಪಾರ ಬುದ್ಧಿಯೂ, ಧರ್ಮಜ್ಞಾನವೂ, ವೈರಾಗ್ಯ ವಿಚಾರವೂ ನನಗೆ ಪರಮ ಸಂತೋಷವನ್ನುಂಟು ಮಾಡಿದವು. ಆದಿನ ನಾನು ತಮ್ಮನ್ನು ಕಂಡು ಮಾತನಾಡಿದ ಕಾಲದಲ್ಲಿ ತಾವು ಬೋಧಿಸಿದ ಬುದ್ಧಿವಾಕ್ಯಗಳು ನನ್ನನ್ನು ಉತ್ತಮ ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸಿದವು. ಪ್ರಿಯಂವದೆ ಎನ್ನುವ ನಾಮವು ಅವಳ ವಾಕ್ಚಾತುರ್ಯಕ್ಕೂ, ಕಾಂತಾಮಣಿ ಎನ್ನುವ ಹೆಸರು ಅವಳ ಪತಿಪ್ರೇಮಕ್ಕೂ ಒಪ್ಪಿರುವವು. ನನ್ನ ಮನಸ್ಸಿನಲ್ಲಿದ್ದಂತೆಯೇ ನಿಮ್ಮ ಪುತ್ರಿಯನ್ನು ವಿದ್ಯಾ ವಿಷಯದಲ್ಲಿ ಪ್ರವೀಣೆಯನ್ನಾಗಿ ಮಾಡಿರುವಿರಿ. ನಿಮ್ಮ ಮಗಳ ವಿದ್ಯಾಬುದ್ಧಿಯನ್ನು ನನ್ನಿಂದ ಹೊಗಳಲು ಸಾಧ್ಯವಿಲ್ಲ ವಾಗಿರುವುದು. ಪತ್ರ ಬರೆಯುವಾಗಲೆಲ್ಲಾ ನನ್ನೊಂದಿಗೆ ತರ್ಕಮಾಡುತ್ತಿರುವಳು. ಕೆಲವು ವೇಳೆಗಳಲ್ಲಿ ನಾನು ಜವಾಬು ಬರೆಯಲು ತಪ್ಪಿದರೆ ಅದನ್ನು ನನಗೆ ಚೆನ್ನಾಗಿ ತಿಳಿಸುವಂಥಾ ಹಾಸ್ಯಕವಿತ್ವಗಳನ್ನು ಬರೆದು ಕಳುಹಿಸುತ್ತಾಳೆ. ಅವಳ ವಿದ್ಯಾಭ್ಯಾಸವೂ ಮುಗಿಯಿತು. ನನ್ನ ನಿರ್ಬಂಧವೂ ತೀರಿತು. ತಮ್ಮ ವ್ಯಸನವೂ ನೀಗಿತು. ಮಾತಾಪಿತೃಗಳಿಗೆ ಮಾಡತಕ್ಕ ಕರ್ತವ್ಯ ಗಳನ್ನು ನೀವು ಆ ದಿನ ನನಗೆ ಹೇಳಿಕೊಡದಿದ್ದರೆ ನಾನೀಸ್ಥಿತಿಯಲ್ಲಿರಲಿಲ್ಲ. ತಾವು ಇನ್ನು ವ್ಯಸನಪಡತಕ್ಕ ಅವಶ್ಯಕವೇ ಇರುವುದಿಲ್ಲ. ಈ ದಿನ ನಾವಿಬ್ಬರೂ ಸತೀಪತಿಯರಾಗಿ ಈ ಹೊಸ ಮನೆಯಲ್ಲಿ ಸಂಸಾರ ಮಾಡಲು ಮೊದಲು ಮಾಡಿರುವೆವು. ಇನ್ನು ತಾವು ಉಪವಾಸ ವಿರುವುದು ಯುಕ್ತವಲ್ಲ. ನನಗೋಸ್ಕರವಾಗಿಯಾಗಿಯಾದರೂ ಸ್ವಲ್ಪ ಹಾಲು, ಹಣ್ಣುಗಳನ್ನು ಸ್ವೀಕರಿಸಿರಿ" ಎಂದನು.

ಅಳಿಯನ ಮಾತನ್ನು ನಿರಾಕರಿಸಲು ಸಾಧ್ಯವಾಗದೆ ಪ್ರಿಯಂವದೆಯ ತಾಯಿಯು ಸ್ವಲ್ಪ ಫಲಾಹಾರವನ್ನು ಸ್ವೀಕರಿಸಿದಳು. ತರುವಾಯ ಸತಿಪತಿಯರಿಬ್ಬರೂ ಆನಂದ ಸಾಗರದಲ್ಲಿ ಮುಳುಗಿದರು. ಅನೇಕ ಕಾಲ ಅಗಲಿದ್ದುದರಿಂದ ಆಡಬೇಕಾದ ಮಾತುಕಥೆಗಳು ಬಹಳ ವಾಗಿದ್ದುವು. ತಮ್ಮ ಸುಖದುಃಖಮಯವಾದ ಕಥೆಯನ್ನು ಹೇಳಿ ಹೇಳಿ ರಾತ್ರಿಯನ್ನು ಕಳೆದರು.

ತಾವು ತಾಳ್ಮೆಯನ್ನು ವಹಿಸಿದ್ದರೆ ತಮಗೆಂದಾದರೊಂದುದಿನ ಸುಖವುಂಟಾಗುವುದೆಂದು ನಂಬಿದ್ದ ಆ ದಂಪತಿಗಳು ಅನೇಕ ಕಷ್ಟಗಳನ್ನನುಭವಿಸಿದರು. ಕೊನೆಗೆ ಸುಖವನ್ನನುಭವಿಸುವ

ಕಾಲವು ಬಂದಿತು. ವಿದ್ಯಾವಂತರಾದ ದಂಪತಿಗಳು ಇನ್ನು ತಮ್ಮ ಸಂಸಾರವನ್ನು ಆನಂದದಿಂದ ಕಳೆಯಲಾರಂಭಿಸಿದರು. ಸತ್ಯೇಂದ್ರನು ತನ್ನ ತಾಯಿಯ ಅಪ್ಪಣೆಯಂತೆ ತನ್ನ ಪತ್ನಿಯನ್ನು ಕರೆದುಕೊಂಡು ಬರಲು ಬಂದವನಾದುದರಿಂದ ಶೀಘ್ರುದಲ್ಲಿಯೇ ಕಾಂತೆಯೊಂದಿಗೆ ಧಾರವಾಡಕ್ಕೆ ಪ್ರಯಾಣವಾಗಲು ಬೇಕಾದುದನ್ನೆಲ್ಲಾ ಸಜ್ಜುಗೊಳಿಸಲಾರಂಭಿಸಿದನು.

## ೬ನೆಯ ಅಧ್ಯಾಯ

## ಗೃಹ ಲಕ್ಷ್ಮಿ

ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ಸತ್ಯೇಂದ್ರನು ಸತಿಯೊಡಗೂಡಿ ಧಾರವಾಡಕ್ಕೆ ಬಂದನು. ಪ್ರಿಯಂವದೆಯು ಹಿಂದೆ ನೋಡಿದ್ದಕ್ಕಿಂತ ಈಗ ಬಹಳ ಬೆಳೆದಿದುದರಿಂದ ಅನ್ನಪೂರ್ಣೆಗೆ ಅವಳ ಗುರ್ತು ಸಿಕ್ಕಲಿಲ್ಲ. ಆದರೂ ತನ್ನ ಮಗನು ಇಷ್ಟು ದೊಡ್ಡ ಕನ್ಯೆಯನ್ನು ವಿವಾಹ ಮಾಡಿಕೊಂಡದ್ದಕ್ಕಾಗಿ ಬಹಳ ಆಶ್ಚರ್ಯಪಟ್ಟಳು. ಹಿಂದೆಯೇ ಹೊಸ ಸೊಸೆಯು ಮನೆಗೆ ಬಂದರೆ ಅವಳನ್ನು ದಂಡಿಸ ಕೂಡದೆಂದು ಮಗನು ಹೇಳಿದ್ದು ಜ್ಞಾನಪಕ್ಕೆ ಬಂದಿತು. ಆದರೂ ಕಾರಣವಿಲ್ಲದೆಯೇ ಶುಷ್ಕ ಕಲಹವನ್ನು ಹುಡುಕುತ್ತಿದ್ದವಳು, ಈಗ "ಬರೀ ಬಾಯಿ ಮೆಲ್ಲುವವರಿಗೆ ಒಂದು ಹಿಡಿ ಅವಲಕ್ಕಿ ಸಿಕ್ಕಿದಂತೆ" ಇಂಥಾ ನವನಾಗರೀಕ ಯುವತಿಯು ಸೊಸೆಯಾಗಿ ಬಂದದ್ದನ್ನು ಕಂಡು ಸುಮ್ಮನಿರುವ ಆಕೆಗೆ ಉಂಟಾದ ತಾಪಕ್ಕೂ ಕೋಪಕ್ಕೂ ಕೊನೆ ಮೊದಲಿರಲಿಲ್ಲ. ಸತ್ಯೇಂದ್ರನಿಗೆ ಹೇಳಿಕಳುಹಿಸಿದಳು. "ಸತ್ಯೇಂದ್ರಾ! ನಿನ್ನ ಸತಿಗೆ ಈಗ ಸುಮಾರು ಇಪ್ಪತ್ತು ವರ್ಷ ವಯಸ್ಸಾಗಿರಬಹುದೆಂದು ಕಾಣುತ್ತದೆ. ನಿನಗೆ ಮದುವೆಯಾಗಿ ಮೂರು ವರ್ಷಗಳಾದವು. ಇಷ್ಟು ದೊಡ್ಡ ಹೆಣ್ಣನ್ನು ಯಾರಾದರೂ ಮದುವೆಯಾಗುವರೇ? ಇವಳೇನು ವೇಶ್ಯೆಯೇ? ನಾಟ್ಯ ಸ್ತ್ರೀಯೆ? ಇದೇನು ಥಳುಕು? ಇದೇನು ಸೊಗಸು? ನನಗೆ ಸ್ವಲ್ಪವೂ ಬೇಕಾಗಿಲ್ಲ. ಎಲ್ಲಾದರೂ ಓಡಿ ಬಿಡೋಣವೆಂದರೆ ಎರಡು ಶನಿಗಳು ನನ್ನ ಕಾಲನ್ನು ಕಟ್ಟಿಕೊಂಡಿವೆ. ಇವುಗಳನ್ನು ಅವರ ಗಂಡನ ಮನೆಗೆ ಕಳುಹಿಸೋಣ ವೆಂದರೆ ನೀನು ಹಣ ಕೊಡಲು ಸಮ್ಮತಿಸಲಾರೆ. ದರಿದ್ರರು ಹಣವಂತನ ಮಗಳನ್ನು ವಿವಾಹವಾದರೆ ಈಗತಿಯುಂಟಾಗುವುದು. ನೀನು ನಿಷೇಕಪ್ರಸ್ತವನ್ನು ಮಾಡಿ ಕೊಂಡರೆ ನಿನ್ನ ಹೊಸ ಮಾವನು ಹೆಚ್ಚು ಹಣ ಕೊಡುವರೆಂದು ಹೇಳಿದೆಯಲ್ಲವೇ? ಯಾತಕ್ಕವರಿಂದ ಹಣ ತೆಗೆದುಕೊಳ್ಳಲಿಲ್ಲ. ೨,೦೦೦ ರೂಪಾಯಿಗಳನ್ನು ಕಂಡು ಮೋಸ ಹೋದೆಯಲ್ಲವೆ? ಮತ್ತು ಈ ಕಾಂತಾಮಣಿಯ ಸೌಂದರ್ಯದಲ್ಲಿ ನೀನು ಮೋಹಿತನಾದೆ" ಎಂದಳು. ಅದಕ್ಕೆ ಸತ್ಯೇಂದ್ರನು, "ತಾಯೇ! ಸೊಸೆ ಮನೆಗೆ ಬಂದರೆ ನಿಮ್ಮಿಷ್ಟದಂತೆ ಮಾತಾಡಕೂಡದೆಂದು ನಾನು ಆಗಲೇ ಹೇಳಲಿಲ್ಲವೇ? ನೀವು ಏನೂ ಹೇಳುವುದಿಲ್ಲವೆಂದ ಮೇಲೆ ನಾನು ಅವಳನ್ನು ಕರೆತಂದೆನು. ಈಗ ತಾವು ಹಣ, ಹೆಣ್ಣು ಈ ವಿಷಯವಾಗಿ ಏನೂ ಹೇಳದಿರಬೇಕಾಗಿ ಪ್ರಾರ್ಥಿಸುತ್ತೇನೆ. ನಮ್ಮ ಸಂಸಾರ ರಹಸ್ಯವನ್ನು ಇತರರಿತರೆ ಅವಮಾನ ವುಂಟಾಗುವುದು" ಎಂದನು.

ಅನ್ನಪೂರ್ಣೆಗುಂಟಾದ ಕೋಪಕ್ಕೆ ಅಳವಿಲ್ಲ. ತನ್ನ ವಾಕ್ಚಾತುರ್ಯವನ್ನು ತೋರಿಸಲೆಳಸಿದಳು. ಆದರೆ ಸತ್ಯೇಂದ್ರನಿಂದ ಇನ್ನೂ ಅನೇಕ ಕಾರ್ಯಗಳು ನಡೆಯ

ಬೇಕಾಗಿದ್ದುದರಿಂದ ಅದು ಸಮಯವಲ್ಲವೆಂದು ಬಾಯಿ ಮುಚ್ಚಿಕೊಂಡಳು. ಸತ್ಯೇಂದ್ರನು ಕಾರ್ಯಾರ್ಥವಾಗಿ ಹೊರಗೆ ಹೊರಟುಹೋದನು. ಅನ್ನಪೂರ್ಣೆಯು ತನ್ನ ಪೂರ್ಣಾಧಿಕಾರ ವನ್ನು ಕಾಂತಾಮಣಿಯ ಮೇಲೆ ನಡೆಸಲಾರಂಭಿಸಿದಳು. ಕಾಂತೆಯು ಪಾಕಶಾಲೆಯಲ್ಲಿ ಪಾಕವನ್ನು ಮಾಡುತ್ತಿದ್ದಳು. ಅನ್ನಪೂರ್ಣೆಯು ಅಲ್ಲಿ ಹೋಗಿ ಸ್ವಲ್ಪ ಹೊತ್ತು ನಿಂತಿದ್ದವಳು ಕಾಂತೆಯನ್ನು ಕುರಿತು, "ಒಯ್ಯಾರಿ! ಇಲ್ಲಿ ನೋಡು! ಬಚ್ಚಲಿನಲ್ಲಿ ಇಷ್ಟೊಂದು ಅಕ್ಕಿಯನ್ನು ಚೆಲ್ಲಿರುವೆಯಲ್ಲಾ? ಅದರಲ್ಲಿ ಎರಡನ್ನು ತೆಗೆದು ದೂರ ಇಡು. ಮಿಕ್ಕಿದ್ದರಲ್ಲೇ ಅಡಿಗೆ ಮಾಡು. ನಿಮ್ಮಪ್ಪನ ಮನೆಯವರಂತೆ ನಾವು ಹಣಗಾರರಲ್ಲ. ಒರಳಿನಲ್ಲಿ ಅರೆದಿರುವೆಯಲ್ಲಾ ಅದರಲ್ಲಿ ಎಷ್ಟು ಮೆತ್ತಿಕೊಂಡಿರುವುದು ನೋಡು ಹೀಗೇಯೇನೋ ನಿಮ್ಮ ಮನೆಯವರು ನಿನಗೆ ಸಂಸಾರ ಮಾಡಲು ಕಲಿಸಿರುವುದು? ಸಾರಿಗೆ ಇಷ್ಟೊಂದು ಬೇಳೆಯನ್ನು ಹಾಕುತ್ತಿರುವೆಯಲ್ಲಾ. ಮೈಗೆ ಆಗುವುದೇ? ನಾವೇನು ರಾಯರುಗಳೇ? ಪದಾರ್ಥವು ಯಾವುದೂ ರುಚಿಯಾಗಿಯೇ ಇಲ್ಲ" ಎಂದು ಅನೇಕ ವಿಧವಾಗಿ ಹೇಳದಳು.

ವಾಸ್ತವದಲ್ಲಿ ಪ್ರಿಯಂವದೆಯು ಬಹಳ ಬುದ್ಧಿವಂತಳು. ಸಂಸಾರ ಮಾಡುವುದರಲ್ಲಿ ಅವಳಂತೆ ಬುದ್ಧಿವಂತರು ಸಿಕ್ಕುವುದು ದುಲರ್ಭವು. ಎಲ್ಲಾ ಕಾರ್ಯಗಳನ್ನೂ ಬಹಳ ಚೆನ್ನಾಗಿ ಮಾಡುವಳು. ಅವಳ ತಾಯಿಯು ಉತ್ತಮ ವಂಶದಲ್ಲಿ ಜನಿಸಿದವಳು. ತನ್ನಂತೆಯೇ ತನ್ನ ಮಗಳಿಗೆ ಸಕಲ ಕಲೆಗಳನ್ನೂ ಕಲಿಸಿದ್ದಳು. ಅವಳು ಮಾಡತಕ್ಕ ಕೆಲಸಗಳನ್ನು ಸ್ವಲ್ಪವೂ ತಪ್ಪಿಲ್ಲದಂತೆ ಮಾಡುವಳು.

ಅನ್ನಪೂರ್ಣೆಯು ಇತರರು ಚೆನ್ನಾಗಿದ್ದರೆ ನೋಡಿ ಸಹಿಸಳು. ದಂತದ ಪ್ರತಿಮೆಯಂತಿದ್ದ ಸೊಸೆಯನ್ನು ಕಂಡಾಗಲೆಲ್ಲಾ ಬಯ್ಯುವಳು. ಅವಳಿಗೆ ಪ್ರಧಾನವಾಗಿದ್ದದ್ದು ಹಣವೊಂದೇ. ಗುಣ, ಕುಲ, ರೂಪ ಇವುಗಳೆಲ್ಲಾ ಕೆಲಸಕ್ಕೆ ಬಾರದೆನ್ನುವಳು. ವಿವೇಕಿಗಳು ಪ್ರಿಯಂವದೆಯನ್ನು ಕಂಡರೆ ಹೊಗಳುವರು. ಇವಳು ತನ್ನ ಅತ್ತೆಯು ಏನೂ ಹೇಳಿದರೂ ಮರುಮಾತಾಡು ತ್ತಿರಲಿಲ್ಲ. ತನ್ನ ಅತ್ತಿಗೆಯರೊಂದಿಗೆ ಪ್ರಿಯವಾಗಿದ್ದು ಅವರಿಗೆ ನಿತ್ಯವೂ ಜಡೆ ಹಾಕುವಳು. ತರುಣಿಯ ಶಿಕ್ಷಣದಿಂದ ರಮಣಿಯರು ಸದ್ಗುಣವಂತರಾದರು. ಸಂಗೀತ, ವಿದ್ಯೆ ಇವುಗಳನ್ನು ಅತ್ತಿಗೆಯಿಂದ ಕಲಿತುಕೊಳ್ಳಲು ಮೊದಲು ಮಾಡಿದರು. ಅವಳನ್ನು ಅರ್ಧಗಳಿಗೆ ಕೂಡ ಬಿಟ್ಟಿರಲು ಸಹಿಸರು. ಪ್ರಿಯಂವದೆಯು ಧಾರವಾಡಕ್ಕೆ ಬಂದು ಆರು ತಿಂಗಳು ಕಳೆದವು. ಸತ್ಯೇಂದ್ರನು ತನ್ನ ಸಹೋದರಿಯರ ಅಭಿವೃದ್ಧಿ ಸ್ಥಿತಿಯನ್ನು ಕಂಡು ಸಂತೋಷಪಟ್ಟನು. ಹಿರಿಯರಲ್ಲಿ ಮರ್ಯಾದೆ, ಮಾತಾಪಿತೃಗಳಲ್ಲಿ ಮರ್ಯಾದೆ, ಇವುಗಳನ್ನು ಸತ್ಯೇಂದ್ರನ ತಂಗಿಯರು ಚೆನ್ನಾಗಿ ಕಲಿತುಕೊಂಡರು. ಅನ್ನಪೂರ್ಣೆಯು ಕೋಪಿಸಿದರೆ ಇಬ್ಬರು ಪುತ್ರಿ ಯರೂ ಅವಳನ್ನೇ ಪುನಃ ಬಯ್ಯುವರು. ಬಂದವಳು ನನ್ನ ಮಕ್ಕಳಿಗೆಲ್ಲಾ ಮಂತ್ರ ಹಾಕಿದಳಲ್ಲಾ! ಇವಳೇನು ಮಾಯಾಗಾತಿ‌ಯೋ? ಮಂತ್ರವಾದಿನಿಯೋ? ಎನ್ನುವಳು. ಪ್ರಿಯಂವದೆಯನ್ನು ಕಂಡಾಗಲೆಲ್ಲಾ ಬಾಯಿಗೆ ಬಂದಂತೆ ಬಯ್ಯುವಳು.

ವಿದ್ಯಾವಂತರಾದ ವಾಚಕ ಮಹನೀಯರುಗಳೇ! ನಮ್ಮ ಹಿಂದೂ ದೇಶದಲ್ಲಿ ಅತ್ತೆಯರು ಸೊಸೆಯರನ್ನು ಅತಿ ಕೇವಲವಾಗಿ ನಡೆಸುತ್ತಿರುವ ವಿಷಯವು ಎಲ್ಲರಿಗೂ ತಿಳಿದೇ ಇರುವುದು.

ನಮ್ಮ ಹಿಂದೂಶಾಸ್ತ್ರ ಪ್ರಕಾರವಾಗಿ ಸೊಸೆಯೆನ್ನುವ ನಾಮವನ್ನು ಧರಿಸಿರುವ ಪ್ರತಿಯೊಬ್ಬಳೂ ಅತ್ತೆಯೆನ್ನುವ ಪಟ್ಟವನ್ನು ಧರಿಸಿದವಳ ಆಜ್ಞೆಗೆ ಹೆದರಿ ನಡೆಯತಕ್ಕದ್ದು ಅತ್ಯಾವಶ್ಯಕವೇ ಯಾದರೂ ಅತ್ತೆಯರು ಕೇವಲ ಅಲ್ಪದೋಷಗಳನ್ನೆಲ್ಲಾ ಬೆಟ್ಟದಷ್ಟಾಗಿ ಭಾವಿಸಿ ಅಧಿಕಾರ ವನ್ನು ನಡೆಸುವುದರಿಂದ ತಮಗಿರುವ ಮರ್ಯಾದೆಯನ್ನು ಸಂಪೂರ್ಣವಾಗಿ ಕಳೆದು ಕೊಳ್ಳುವರು. ಕೆಲವರು ಅವಿದ್ಯಾವತಿಯರಾದ ಸ್ತ್ರೀಯರು ತಾವು ಅತ್ತೆಯರಾದ ಮೇಲೆ ಸೊಸೆಯನ್ನು ಹಿಂಸಿಸುವುದೂ, ಅವರನ್ನು ಕೆಲಸಗಾರಳಂತೆ ಭಾವಿಸಿ ಹೀನವಾಗಿ ನೋಡು ವುದೂ, ಅವರಿಗೆ ಮನೆಯಲ್ಲಿ ಸ್ವತಂತ್ರ ಕೊಡದಿರುವುದೂ, ಚಾಡಿಮಾತುಗಳನ್ನು ಹೇಳಿ ಮಗನಿಗೂ ಸೊಸೆಗೂ ಶತೃತ್ವವನ್ನುಂಟು ಮಾಡಿ ಸೊಸೆಗೆ ರಾಜೀನಾಮೆ ಕೊಡಿಸಿ ಓಡಿಸು ವುದೂ. ಬಿಳೀ ರವಿಕೆ ತೊಟ್ಟುಕೊಳ್ಳುತ್ತಾಳೆ. ಸೆರಗು ಉದ್ದವಾಗಿ ಬಿಟ್ಟುಕೊಳ್ಳುತ್ತಾರೆ, ಓದುತ್ತಾಳೆ, ಬರೆಯುತ್ತಾಳೆ, ಇವೇ ಮುಂತಾದ ಕೆಲಸಕ್ಕೆ ಬಾರದ ದೋಷಾರೋಪಣೆಗಳನ್ನು ಮಾಡುವುದೂ, ನೆರೆಹೊರೆಯವರಲ್ಲಿ ಸೊಸೆಯ ಮೇಲೆ ದೂರು ಹೇಳುವುದೂ "ಮೂಲಿಕಾ ಪ್ರಯೋಗದಿಂದ ಗಂಡನನ್ನು ವಶಮಾಡಿಕೊಂಡಳು" ಎನ್ನುವ ಇತ್ಯಾದಿ ದೋಷ ಗಳನ್ನು ಬಾಲಕಿಯರಾದ ಸೊಸೆಯರ ಮೇಲೆ ಆರೋಪಿಸುವುದೂ ದಂಪತಿಗಳಲ್ಲಿರುವ ಅನ್ಯೋನ್ಯ ವನ್ನು ಕೆಡಿಸಿ ಅವರ ಜೀವನವನ್ನೇ ಹಾಳು ಮಾಡುವುದೂ, ಬಹಳ ಶೋಚನೀಯವಾಗಿ ರುವುದು. ಸೊಸೆಯು ಮನೆಗೆ ಬಂದರೇ ಮಗನ ಮೇಲಿರುವ ವಾತ್ಸಲ್ಯವು ಕೂಡ ಕಮ್ಮಿಯಾಗುವುದು. ಸ್ತ್ರೀಯರ ವಿದ್ಯಾಭಿವೃದ್ಧಿಯೂ ದಿನೇ ದಿನೇ ಹೆಚ್ಚುತ್ತಿರುವುದರಿಂದ ಭಾರತ ರಮಣೀಯರು ವಿದ್ಯಾವತಿಯರಾಗಿ ತಮ್ಮ ಸ್ಥಿತಿಗತಿಗಳನ್ನು ಪಾಶ್ಚಾತ್ಯರೊಂದಿಗೆ ಹೋಲಿಸಿ ತಮ್ಮ ಕೇವಲ ಹೀನಸ್ಥಿತಿಗೆ ನೊಂದು ತಮ್ಮ ದೇಶೋದ್ಧಾರಕ್ಕಾಗಿ ಪ್ರಯತ್ನ ಪಡುತ್ತಿರುವರು. ಹೀಗೆ ವಿದ್ಯಾವತಿಯರಾದ ಬಾಲಕಿಯರು ಸೊಸೆಯರಾದರೆ ಪೂರ್ವಕಾಲದ ಅತ್ತೆಯರಿಗೆ ಇವರ ನಾಗರೀಕ ನಡೆನುಡಿಗಳು ರುಚಿಸುವುದೆ? ಯಾವ ಯಾವ ಕಾಲಕ್ಕೆ ಹೇಗೆ ಹೇಗೆ ನಡೆದುಕೊಳ್ಳಬೇಕೋ ಅದರಂತೆ ನಡೆಯಲೆಂದು ಸುಮ್ಮನಿರುವುದು ಮೇಲು. ಸುಮ್ಮನೆ ಅವರನ್ನು ಖಂಡಿಸಿದರೆ ಅವರು ಕೇಳುವರೆ? ಸರ್ವಶಕ್ತನಾದ ಭಗವಂತನೇ ಇಂಥಾ ಅತ್ತೆಯರಿಗೆ ಬುದ್ಧಿ ಕಲಿಸುವನು. ಆದರೂ ಪ್ರಕೃತದಲ್ಲಿ ವಿದ್ಯಾವತಿಯರಾದ ರಮಣಿಯರು ಸೊಸೆಯ ರಾಗಿದ್ದುಮುಂದೆ ತಾವೇ ಅತ್ತೆಯರಾಗುವುದರಿಂದ ತಮಗೆ ದೊರಕುವ ಸೊಸೆಯರನ್ನು ಈ ರೀತಿ ಹಿಂಸೆಗೆ ಆಳಾಗದಂತೆ ಮಾಡಿ ಅವರ ಮೇಲೆ ವಿಶ್ವಾಸವುಳ್ಳವರಾಗಿರಬಹುದೆಂದು ನಂಬಬಹುದಾಗಿರುವುದು.

ಗುಣಮಣಿಯಾದ ಪ್ರಿಯಂವದೆಯು, ಅನ್ನಪೂರ್ಣೆಯು ಏನು ಬೈದರೂ, ಎಷ್ಟೇ ಅಧಿಕಾರ ಮಾಡಿದರೂ, ಅತ್ತೆಯ ವಾಕ್ಯಕ್ಕೆ ಪ್ರತಿಮಾಡುತ್ತಿರಲಿಲ್ಲ. ಅತ್ತೆಯ ಮೇಲೆ ಲೇಶವೂ ಸಿಟ್ಟಿಲ್ಲದೆ ಮನೆಯ ಕೆಲಸ ಕಾರ್ಯಗಳನ್ನೆಲ್ಲಾ ಬಹು ಶ್ರದ್ಧೆಯಿಂದಲೂ, ವಿಚಕ್ಷಣೆಯಿಂದಲೂ ನಡೆಸುತ್ತಿದ್ದಳು. ಇವಳ ನಾದಿನಿಯು ಅತ್ತಿಗೆಯ ಕಾರ್ಯಗಳಿಗೆಲ್ಲಾ ಬೆಂಬಲವಾಗಿ ನಿಲ್ಲು ತ್ತಿದ್ದಳು.

ಸತ್ಯೇಂದ್ರನು ಹಿಂದಿನಂತೆಯೇ ಮನೆ ಖರ್ಚಿಗೆಂದು ೧೦೦ ರೂಪಾಯಿಗಳನ್ನು ತಾಯಿಯ ಕೈಯಲ್ಲಿ ಕೊಟ್ಟನು. ಹಣದಾಸೆಯುಳ್ಳ ಅನ್ನಪೂರ್ಣೆಯು "ಮತ್ತೊಂದು ಬಂದಿರುವುದಲ್ಲಾ, ಅದರ ಹೊಟ್ಟೆಗೆ ಸುರಿಯಬೇಡವೇ" ಎನ್ನುತಲೂ, ನಗುತ್ತಾ ಮತ್ತೆ ೨೫ ರೂಪಾಯಿಗಳನ್ನು ಕೊಟ್ಟನು. ಅನ್ನಪೂರ್ಣೆಯ ಬಾಯಿ ಮುಚ್ಚಿತು. ಧನವನ್ನು ಕಂಡರೆ ಕೊಂಡಾಟ ಉಂಟಾಗುವುದು. ಎರಡು ಮೂರು ದಿನ ಎಲ್ಲರನ್ನೂ ಸಂತೋಷದಿಂದ ಉಪಚರಿಸುವಳು. ಮಕ್ಕಳನ್ನು ಗಂಡ ಮನೆಗೆ ಕಳುಹಿಸಿ ಒಂದು ದಿನ ಸತ್ಯೇಂದ್ರ, ಮಹದೇವ, ಉಪೇಂದ್ರ ಮೊದಲಾದವರೆಲ್ಲಾ ಕಾರ್ಯಾರ್ಥವಾಗಿ ಹೊರಗೆ ಹೋಗಿದ್ದರು. ಎಲ್ಲರ ಭೋಜನವೂ ಮುಗಿದಿದ್ದುದರಿಂದ ಪ್ರಿಯಂವದೆಯು ಅತ್ತೆಯನ್ನು ಭೋಜನಕ್ಕೆ ಕರೆದಳು. ತನಗಾಹಾರವು ಅವಶ್ಯಕವಿಲ್ಲವೆಂದು ಅತ್ತೆಯು ನಿರಾಕರಿಸಿದಳು. ರಮಣಿಯು ಅನೇಕ ವಿಧದಲ್ಲಿ ಪ್ರಾರ್ಥಿಸಿದಳು. ಭೋಜನಕ್ಕೆ ಬರುವುದಿಲ್ಲವೆಂದು ಒಂದೇ ವಿಧವಾಗಿ ಹಠ ಮಾಡಿದಳು. ತನ್ನಿಂದ ಯಾವ ಅಪರಾಧ ಉಂಟಾಯಿತೆಂದು ಸೊಸೆಯು ಪ್ರಾರ್ಥಿಸಿದಳು. ಅತ್ತೆಯು ಇದೇ ಸಮಯವೆಂದರಿತು. "ವನಿತೆಯೇ! ನನ್ನ ಮಕ್ಕಳ ಕ್ಷೇಮಾರ್ಥಿ ನಾನಲ್ಲವೇ? ನೀನು ನಿನ್ನ ಪತಿಯೊಂದಿಗೆ ಸಂಸಾರ ಮಾಡುವಂತೆ ಅವರೂ ಸುಖಪಡಬೇಡವೇ? ಅವರ ಸುಖಕ್ಕೆ ಮಾರ್ಗತೋರಿಸು. ನಾನು ನೀನು ಈ ವಿಷಯದಲ್ಲಿ ಪ್ರಯಾಸಪಡುವುದಾಗಿ ಮಾತುಕೊಡು; ನಾನು ಭೋಜನಕ್ಕೇಳುತ್ತೇನೆ" ಎಂದಳು.

ಚತುರಳಾದ ಕಾಂತೆಯು ಅತ್ತೆಯ ಪಾದಗಳಿಗೆರಗಿ, "ತಾಯೇ, ಬರುವ ಜೇಷ್ಠಮಾಸದಲ್ಲಿ ಬೀಗರನ್ನು ತೃಪ್ತಿಪಡಿಸಿ ಕೆಲಸವನ್ನು ನಡಿಸೋಣ. ಇಷ್ಟು ಮಾತ್ರಕ್ಕೆ ತಾವು ವಿಚಾರಪಡಲೇಕೆ? ನನ್ನ ಸಹೋದರಿಯರಿಗೆ ನನ್ನ ಆಭರಣಗಳನ್ನು ಮಾರಿಯಾದರೂ ಶುಭಕಾರ್ಯವನ್ನು ನೆರವೇರಿಸುವೆನು. ತಾವು ದಯವಿಟ್ಟು ಏಳಿರಿ" ಎಂದಳು.

ಆಹಾ! ಅನ್ನಪೂರ್ಣೆಯ ಆನಂದಕ್ಕೆ ಮೇರೆಯೇ ಇರಲಿಲ್ಲ. "ಪುತ್ರೀ! ಕುಲವಧುವಿಗೆ ತಕ್ಕ ವಾಕ್ಯವನ್ನೇ ಆಡಿದೆ? ಆದರೆ ಆ ದುಷ್ಟರಾದ ಬೀಗರೊಂದಿಗೆ ಮಾತನಾಡುವರು ಯಾರು? ಅವರು ಕಟುಕರು. ನನ್ನ ಮಕ್ಕಳನ್ನು ಹಣ ಕೊಡಲಿಲ್ಲವೆಂಬ ತಪ್ಪಿಗಾಗಿ ಎರಡು ವರ್ಷಗಳಿಂದ ಕಣ್ಣೆತ್ತಿ ಕೂಡ ನೋಡಲಿಲ್ಲವಲ್ಲಾ. ಅವರೆಂಥಹ ಚಂಡಾಲರು" ಎಂದಳು. ತಾನು ತನ್ನ ಸೊಸೆಯ ವಿಷಯದಲ್ಲಿ ನಡೆಸಿದ ಕ್ರೂರತ್ವವು ಅವಳಿಗೆ ಆಗಲಾದರೂ ಮನಸ್ಸಿಗೆ ಬಂದಿತೇ? ಇಲ್ಲವೇ ಇಲ್ಲ. ಇದನ್ನು ಕಾಂತಾಮಣಿಯು ತಿಳಿದರೂ ಮಾತನಾಡಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದು, "ತಾಯೇ! ಅವರು ಕೇಳುವಷ್ಟು ಹಣವನ್ನು ಕೊಟ್ಟರೆ ಅವರು ಸುಮ್ಮನಾಗುವರು. ಇದಕ್ಕೆ ಚಿಂತೆಯೇಕೆ" ಎಂದಳು. "ಕಾಂತಾ, ಅದಕ್ಕಾಗಿ ಚಿಂತಿಸಲಿಲ್ಲ. ಮತ್ತೊಂದು ಸಂಕಟವಿದೆ. ನಿನ್ನೊಂದಿಗೆ ಹೇಳದೆ ಮತ್ಯಾರಿಗೆ ಹೇಳಲಿ? ಸತ್ಯೇಂದ್ರನಿಗೆ ನಿನಗೆ ಮೊದಲ ವಿವಾಹವಾದ ಸತಿಯೊಬ್ಬಳಿರುವಳು. ಅವಳನ್ನು ಮನೆಗೆ ಸೇರಿಸಿಕೊಳ್ಳದಿರುವುದನ್ನೇ ದೊಡ್ಡ ತಪ್ಪಾಗಿ ಭಾವಿಸಿ ದೂರುತ್ತಿರುವರು. ಅವಳನ್ನು ಮನೆಗೆ ಕರೆದಹೊರ್ತು ನನ್ನ ಮಕ್ಕಳನ್ನು ತಮ್ಮ ಮನೆಗೆ ಕರೆದುಕೊಳ್ಳಲಾರರಂತೆ. ಇದಕ್ಕೇನು ಯೋಚನೆ" ಎಂದು ಅತ್ತೆಯು ಅಂದಳು.

**ಕಾಂತೆ :** ಅಮ್ಮ, ಅವರು ಹೇಳುವಂತೆ ನಡೆಸುವುದರಲ್ಲಿ ನಮಗೇನು ಕಷ್ಟ?

**ಅನ್ನಪೂರ್ಣೆ :** ಮೂರ್ಖಳೆ! ಸವತಿ ಬಂದರೆ ನಿನಗೆ ಕಷ್ಟವಲ್ಲವೆ?

**ಕಾಂತೆ :** ಅವರ ಸುಖಕ್ಕೆ ನಾವು ತಡೆಮಾಡಿದರಲ್ಲವೇ ನನಗೆ ಕಷ್ಟವುಂಟಾಗುವುದು? ಒಂದು ವೇಳೆ ಹಾಗೆ ಸಂಭವಿಸಿದರೂ ನಿಮ್ಮ ಮಕ್ಕಳ ಕ್ಷೇಮಾರ್ಥವಾಗಿ ಸಹಿಸಿಕೊಳ್ಳುವೆನು.

**ಅನ್ನಪೂರ್ಣೆ :** ಇದೇನಾಶ್ಚರ್ಯ, ನೀನೀ ರೀತಿ ಹೇಳುವೆಯೆಂದು ನಾನು ನಂಬಲಿಲ್ಲ. ನೀನು ಒಪ್ಪಿದರೂ ಸತ್ಯೇಂದ್ರನು ಒಪ್ಪಲಾರನು.

**ಕಾಂತೆ :** ತಾಯೇ! ತಮ್ಮ ಕುಮಾರರು ತಮ್ಮ ಮಾತನ್ನು ಎಂದಿಗೂ ಉಲ್ಲಂಘಿಸಲಾರರು. ಅವರು ಮೀರಿದರೂ ನಾನು ಹೋಗಿ ಕರೆತರುವೆನು.

**ಅನ್ನಪೂರ್ಣೆ :** ನನ್ನ ಹೊಟ್ಟೆಗೆ ಹಾಲು ಹಾಕಿದೆ! ಇಗೋ, ಎದ್ದು ಸ್ನಾನ ಮಾಡುವೆನು. ಎಲೆ ಹಾಕು.

ಅತ್ತೆಯನ್ನು ತೃಪ್ತಿಗೊಳಿಸಿ ಕಾಂತೆಯು ಪಾಕಶಾಲೆಗೆ ಹೋದಳು. ಅತ್ತೆ ಸೊಸೆಯರ ಸಂಭಾಷಣೆಯನ್ನು ಮರೆಯಲ್ಲಿ ನಿಂತು ಕೇಳುತ್ತಿದ್ದ ಸತ್ಯೇಂದ್ರನು ಕಾಂತೆಯ ಬೆನ್ನುತಟ್ಟಿ "ಸಾಧ್ವೀಶಿರೋಮಣೀ! ಪ್ರಿಯಂವದೆಯನ್ನು ಕರೆತರುವೆಯಾ? ನಿನ್ನ ಜೊತೆಯಲ್ಲಿ ಯಾರು ಬರುವರು" ಎಂದು ಕೇಳಿದನು.

ಪತಿಯ ಪ್ರೇಮವಾಕ್ಯವನ್ನು ಕೇಳಿದ ಕಾಂತೆಯು ಕೋಮಲಕಂಠದಿಂದ "ನಾಥನೆ, ಅತ್ತೆಯವರ ಮನಸ್ಸು ತೃಪ್ತಿಹೊಂದಿದರೆ ಅದೇ ನಮಗೆ ಸ್ವರ್ಗವು. ಈಗ ಬಂದುಬಿಡುವರು. ನೀವಿಲ್ಲಿರುವುದನ್ನು ಕಂಡರೆ ಅವರ ಕೋಪವು ಹೆಚ್ಚುವುದು. ಆದುದರಿಂದ ತಾವು ತಮ್ಮ ಸ್ಥಳಕ್ಕೆ ದಯಮಾಡಿಸಿ" ಎಂದು ಪ್ರಾರ್ಥಿಸಿದಳು.

ಗಂಡನನ್ನು ಹೋಗೆಂದು ಹೇಳುವ ಭ್ರಾಂತಳೇ! ಎಂದು ನಸುನಗುತ್ತ ಹೊರಟು ಹೋದನು.

ವಾಚಕರೇ! ಪ್ರಿಯಂವದೆಯ ಬುದ್ಧಿ ಸಾಮರ್ಥ್ಯವನ್ನು ಎಷ್ಟೆಂದು ವರ್ಣಿಸುವುದು? ತನ್ನ ಅತ್ತೆಯನ್ನು ತೃಪ್ತಿಗೊಳಿಸಿ ತಾನು ಹೇಳಿದಂತೆಯೇ ಅತ್ತಿಗೆ ನಾದಿನಿಯರಿಗೆಲ್ಲಾ ಬೇಕಾದಷ್ಟು ಹಣವನ್ನು ವ್ಯಯಮಾಡಿ ಅವರವರ ಅತ್ತೆಯ ಮನೆಗೆ ಕಳುಹಿಸುವಂತೆ ಪತಿಯನ್ನು ಪ್ರಾರ್ಥಿಸಿದಳು. ಇಷ್ಟಾದರೂ ಅನ್ನಪೂರ್ಣೆಗೆ ಹಿರಿಯ ಸೊಸೆಯ ಜ್ಞಾಪಕವೇ ಬರಲಿಲ್ಲ.

## ೭ನೆಯ ಅಧ್ಯಾಯ

## ಆನಂದ ಸಂಭ್ರಮ

ಹಿಂದಿನ ಅಧ್ಯಾಯದಲ್ಲಿ ಪ್ರಿಯಂವದೆಯೂ ತನ್ನ ಅತ್ತಿಗೆ ನಾದಿನಿಯರಿಗೆ ಬೇಕಾದ ಧನವನ್ನೊದಗಿಸಿ, ನಿಷೇಕಪ್ರಸ್ತವನ್ನು ನಡೆಸುವುದಾಗಿ ಅತ್ತೆಗೆ ಮಾತು ಕೊಟ್ಟಳೆಂದು ಹೇಳಿದೆಯಷ್ಟೆ. ಅದರಂತೆಯೇ ಬೇಕಾದಷ್ಟು ಹಣವನ್ನು ಖರ್ಚು ಮಾಡಿ ಅತ್ತಿಗೆಯರ

ಅತ್ತೆಮಾವಂದಿರನ್ನು ತೃಪ್ತಿಗೊಳಿಸಿ ಅವರವರ ಅತ್ತೆಯ ಮನೆಗೆ ಕಳುಹಿಸಿದಳು. ಪ್ರತಿಯೊಬ್ಬ ಬೀಗತಿಯೂ ಕಾಂತೆಯ ಉದಾರಬುದ್ಧಿಯನ್ನು ಕಂಡು ಹೊಗಳಲಾರಂಭಿಸಿದಳು. "ಅತ್ತೆ ಮೆಚ್ಚಿದ ಸೊಸೆಯಿಲ್ಲ"ಯೆನ್ನುವ ವಾಕ್ಯವನ್ನು ಸಹನೆಯುಳ್ಳ ಪ್ರಿಯಂವದೆಯು ಸುಳ್ಳಾಗಿ ಮಾಡಿದಳು.

ಅನ್ನಪೂರ್ಣೆಗೆ ಉಂಟಾದ ಆನಂದಕ್ಕೆ ಮೇರೆಯೇ ಇರಲಿಲ್ಲ. ವಿವಿಧ ಭಕ್ಷ್ಯ ಭೋಜ್ಯಾದಿ ಗಳಿಂದ ಕೂಡಿದ ಔತಣವು ಬಂಧುವರ್ಗದವರಿಗೆಲ್ಲಾ ಮಾಡಲ್ಪಟ್ಟಿತು. ಪ್ರಿಯಂವದೆಯು ಏತಕ್ಕೆ ಬರಲಿಲ್ಲವೆನ್ನುವ ಪ್ರಶ್ನೆಯನ್ನು ಸರ್ವರೂ ಕೇಳಲಾರಂಭಿಸಿದರು. ಸತ್ಯೇಂದ್ರನ ತಾಯಿಯು ಪ್ರತ್ಯುತ್ತರ ಕೊಡಲು ಸಾಧ್ಯವಿಲ್ಲದೆ, ಬಾಯಿಲ್ಲದೆ ತಲೆ ಬಗ್ಗಿಸಿ ಕೊಂಡಳು.

ಪ್ರಿಯವಂದೆಯ ತಾಯಿಯನ್ನು ಅನೇಕ ಕಡೆ ವಿಚಾರಿಸಿದಳು. ಅವಳು ತನ್ನ ಮಗಳು ಪತಿಯೊಂದಿಗೆ ಸಂಸಾರ ಮಾಡುತ್ತಿರುವುದಾಗಿ ಹೇಳಿದಳು. ಇದೇನು ಮಾಯವಿದ್ಯೆಯೆಂದು ಅನ್ನಪೂರ್ಣೆಯು ಯೋಚಿಸಲಾರಂಭಿಸಿದಳು. ಈಗ ಇವಳಿಗೆ ಒಂದು ಯೋಚನೆ ಯುಂಟಾಗಲು ಸತ್ಯೇಂದ್ರನನ್ನು ಹುಡುಕಿಕೊಂಡು ಹೋದಳು. ಅನ್ನಪೂರ್ಣೆಗೆ ಕಾಂತಾ ಮಣಿಯೂ ಪ್ರಿಯಂವದೆಯೂ ಒಬ್ಬಳೇ ಎನ್ನುವುದು ತಿಳಿಯಲೇ ಇಲ್ಲ.

ಅದಕ್ಕೆ ಸತ್ಯೇಂದ್ರನು, "ತಾಯಿ? ಇಷ್ಟು ದಿನದವರೆಗೂ ತಾವು ಈ ವಿಷಯವನ್ನು ಊಹಿಸದೆ ಈಗ ತಿಳಿದುಕೊಂಡದ್ದು ಪರಮಾಶ್ಚರ್ಯವಾಗಿರುವುದು. ಬಹುಶಃ ತಮ್ಮ ಊಹೆಯು ಸರಿಯಾಗಿರುವುದೆಂದೇ ನಾನೂ ಒಪ್ಪಿರುವೆನು" ಎಂದನು.

ಅನ್ನಪೂರ್ಣೆ, ವಿವೇಕರತ್ನವೇ! ವಂಶೋದ್ಧಾರಕನೇ! ಪ್ರಿಯಪುತ್ರಾ!!! ನಿನ್ನ ಬುದ್ಧಿಗೆ ಮೆಚ್ಚಿದೆನು. ನಿನ್ನ ಚಾತುರ್ಯವನ್ನು ಹೊಗಳಲು ನನ್ನಿಂದ ಸಾಧ್ಯವಲ್ಲ. ಕುಮಾರಾ! ನಡೆದ ವಿಷಯಗಳನ್ನು ನನಗೆ ದಯವಿಟ್ಟು ತಿಳಿಸುವೆಯಾ? ಪಾಪಿಯಾದ ನನ್ನಿಂದಲ್ಲವೇ ನಿನಗೂ ಪ್ರಿಯಂವದೆಗೂ, ಅಗಲಿಕೆಯೂ ದುಃಖವೂ ಉಂಟಾಯಿತು. ನಡೆದ ವಿಷಯಗಳನ್ನು ತಿಳಿಸು ಎಂದು ಬಹು ಪ್ರೇಮದಿಂದ ಕೇಳಿದಳು.

ಸತ್ಯೇಂದ್ರನು, "ತಾಯೇ ಈ ಆಸನವನ್ನಲಂಕರಿಸಬೇಕು; ನೀವೇ ಕೇಳುವಾಗ ಹೇಳದಿರುವುದು ನನಗೆ ನ್ಯಾಯವಲ್ಲ" ಎಂದು ಹೇಳಿ ತಾಯಿಯ ಕೈಹಿಡಿದು ಕುಳ್ಳಿರಿಸಿ, ಪ್ರಿಯಂವದೆಯನನು ಕರೆದು, "ಕಾಂತಾಮಣೀ! ಈ ಬೀಸಣಿಗೆಯಿಂದ ತಾಯಿಗೆ ಬೀಸು" ಎಂದು ಹೇಳಿ ಪ್ರಿಯಂವದೆಯನ್ನು ಮನೆಯಿಂದ ಕರೆದುಕೊಂಡು ಹೋದ ದಿನದ ಮೊದಲು ನಡೆದ ವಿಷಯಗಳನ್ನೆಲ್ಲಾ ವಿವರವಾಗಿ ಹೇಳಲಾರಂಭಿಸಿದನು.

"ತಾಯೇ, ಪ್ರಿಯಂವದೆಯನ್ನ ಆ ದಿನ ನಾನು ತಮ್ಮ ಅಪ್ಪಣೆಯಂತೆ ಕರೆದುಕೊಂಡು ಹೋದುದು ಸರಿಯಷ್ಟೆ. ಹೋಗುವ ಮಾರ್ಗದಲ್ಲಿ "ನಿಮ್ಮ ತಾಯಿಯು ಇರುವ ಸ್ಥಳವನ್ನು ಹೇಳು" ಎಂದೆನು. ಅವಳು ಕಣ್ಣೀರು ಸುರಿಸುತ್ತಾ, "ನಾಥಾ, ನಾನೇನಪರಾಧ ಮಾಡಿದೆನು? ತಮ್ಮ ತಾಯಿತಂದೆಯರಿಗೆ ದಾಸಿಯಾಗಿಯಾದರೂ ಕಾಲ ಕಳೆಯುವೆನು. ನನ್ನನ್ನು ಮಾತ್ರ ಎಲ್ಲಿಯೂ ಕಳುಹಿಸಬೇಡಿ" ಎಂದು ಅತಿ ದೈನ್ಯದಿಂದ ಪ್ರಾರ್ಥಿಸಿದಳು. "ಈಗ ಅದು

ಸಾಧ್ಯವಲ್ಲ. ಕೆಲವು ದಿನಗಳು ನಿಮ್ಮ ತಾಯಿಯೊಂದಿಗಿದ್ದರೆ ಆಮೇಲೆ ಸುಖವುಂಟು. ನನ್ನ ವಾಕ್ಯದಂತೆ ನಡೆಯಲಿಷ್ಟವಿದ್ದರೆ ನಾನು ಹೇಳುವಂತೆ ಕೇಳು" ಎಂದೆನು.

"ತಮ್ಮ ಇಷ್ಟದಂತೆ ನಡೆಯಲು ಸಿದ್ಧಳಾಗಿರುವೆನು" ಎಂದು ನಮಸ್ಕರಿಸಿದಳು. ಅವಳನ್ನು ಅವಳ ತಾಯಿಯ ಬಳಿ ಕರೆದುಕೊಂಡು ಹೋಗಿ ಬೇಕಾದ ಬುದ್ಧಿಮಾತುಗಳನ್ನು ಬೋಧಿಸಿ ಅವಳ ಕಾಲವನ್ನು ವ್ಯರ್ಥವಾಗಿ ಕಳೆಯದಂತೆ ಕಲಾಶಾಲೆಯಲ್ಲಿ ವಿದ್ಯೆ ಕಲೆಯಲು ತಕ್ಕ ಏರ್ಪಾಟುಗಳನ್ನೆಲ್ಲಾ ಮಾಡಿ ತಮ್ಮ ಬಳಿ ಬಂದೆನು. ಅಂದಿನಿಂದ ಪ್ರಿಯಂವದೆಯು ಕಲಾಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಲು ಮೊದಲು ಮಾಡಿದಳು. ಅವಳ ತಾಯಿಯು ಪುರಾಣ ಪುಣ್ಯಕಥೆಗಳನ್ನೋದುತ್ತಾ ಸತ್ಕಾಲಕ್ಷೇಪವನ್ನು ಮಾಡುತ್ತಿದ್ದಳು. ಪ್ರಿಯಂವದೆಯ ತಂದೆಯು ಜೀವವಿಮೆ ಫಂಡೊಂದರಲ್ಲಿ (Life Insurance) ಸ್ವಲ್ಪ ಹಣವನ್ನು ಹಾಕಿದ್ದರು. ಪ್ರಿಯಂವದೆಯು ಹ್ಯಾಗೋ ಇದನ್ನರಿತು ಅದಕ್ಕೆ ಬೇಕಾದ ಪತ್ರಗಳನ್ನೆಲ್ಲಾ ಹುಡುಕಿ ನನ್ನ ಬಳಿ ಕಳುಹಿಸಿದಳು. ಅದನ್ನೆಲ್ಲಾ ಶೋಧಿಸಿ ಕಂಪನಿಯವರಿಗೆ ಕಳುಹಿಸಿದೆನು. ಎರಡು ತಿಂಗಳುಗಳೊಳಗೆ ಪ್ರಿಯಂವದೆಗೆ ೧೫,೦೦೦ ರೂಪಾಯಿಗಳು ಬಂದವು. ನಾನೇ ಪೋಷಕನಾಗಿ ನಿಂತು ಆ ಹಣವನ್ನು ಸ್ವಾಧೀನಪಡಿಸಿಕೊಂಡೆನು. ಅದರಿಂದಲೇ ನಿಮ್ಮನ್ನು ತೃಪ್ತಿಗೊಳಿಸಲು ೫,೦೦೦ ರೂಪಾಯಿಗಳನ್ನು ನಿಮಗೆ ಕಳುಹಿಸಿದೆನು. ಮಿಕ್ಕ ಹಣದಿಂದ ಅವಳ ತಾಯಿಯ ಜೀವನಾರ್ಥವಾಗಿ ಹೇರಳವಾಗಿ ಜಮೀನನ್ನು ಕೊಂಡುಕೊಂಡನು. ಸಾಗುವಳಿ ಮಾಡಿದ್ದರಲ್ಲಿ ಬಹಳ ಲಾಭ ಉತ್ಪತ್ತಿಯಾದುದರಿಂದ ಕೆಲವು ದಿನಗಳಲ್ಲಿಯೇ ನನ್ನ ಅತ್ತೆಯವರಿಗೆ ಜಮೀನಿನಲ್ಲಿ ಉತ್ಪತ್ತಿಯಾದ ದ್ರವ್ಯವನ್ನೆಲ್ಲಾ ಕೊಟ್ಟೆನು. ಈಗ ನಿನ್ನ ಬೀಗತಿಯ ಬಳಿ ೧೫,೦೦೦ ರೂಪಾಯಿಗಳ ಮೊತ್ತವು ಇರುವುದು. ನಾನು ಇನ್ನೂ ಎಲ್ಲರಿಗೂ ತಿಳಿಯುವಂತೆ ನಿಷೇಕಪ್ರಸ್ತ ಮಾಡಿಕೊಳ್ಳದಿರುವುದರಿಂದ ನೀವು ನಿಮ್ಮ ಬೀಗತಿಯನ್ನು ಹೆದರಿಸಿ ಹಣವನ್ನು ಕಿತ್ತುಕೊಳ್ಳಬಹುದು. ಪ್ರಿಯಂವದೆಯ ಚರಿತ್ರೆಯೆಲ್ಲವನ್ನೂ ವಿವರವಾಗಿ ಅರಿತಿರಲಿಲ್ಲವೇ, ಅಂದನು.

ಮಗನ ವಾಕ್ಯವನ್ನು ಕೇಳಿದ ತಾಯಿಯ ಸಂತೋಷಕ್ಕೆ ಪಾರವೇ ಇಲ್ಲ. ಅಲ್ಲಿ ನೆರದಿದ್ದವರೆಲ್ಲರೂ ಆಶ್ಚರ್ಯ ಹೊಂದಿದರು. "ಸತ್ಯೇಂದ್ರಾ! ನಿನಗಿಷ್ಟು ಸಹನೆಯು ಎಲ್ಲಿಂದ ಬಂದಿತು"? ಎಂದು ಕೇಳಿ ಪ್ರಿಯಂವದೆಯನ್ನು ಕುರಿತು "ಕಾಂತಾಮಣಿ, ನಾನು ಮಾಡಿದ ಅಪರಾಧಗಳನ್ನು ಕ್ಷಮಿಸುವೆಯಾ" ಎಂದು ಹೇಳಿ. ತರುವಾಯ ತನ್ನ ಪುತ್ರಿಯರನ್ನು ಕುರಿತು "ನಿಮ್ಮ ಅತ್ತಿಗೆಯ ಬುದ್ಧಿಚಾತುರ್ಯವನ್ನು ನೋಡಿದಿರಲ್ಲವೇ? ನೀವೆಲ್ಲರೂ ಅವಳಂತಿರಲು ಕಲಿಯಬೇಕು" ಎಂದಳು.

ಸ್ವಲ್ಪ ಹೊತ್ತಿಗೆಲ್ಲಾ ಅಲ್ಲಿ ನೆರೆದಿದ್ದವರೆಲ್ಲರೂ ಸತ್ಯೇಂದ್ರನನ್ನೂ ಪ್ರಿಯಂವದೆಯನ್ನೂ ಅನೇಕ ವಿಧವಾಗಿ ಹೊಗಳಲಾರಂಭಿಸಿದರು.

ಬುದ್ಧಿವಂತಳಾದ ಪ್ರಿಯಂವದೆಯ ತಾಯಿಯನ್ನು ಸರ್ವರೂ ಸ್ತುತಿಸಲಾರಂಭಿಸಿದರು. ಅನ್ನಪೂರ್ಣೆಯ ಕಠಿಣಬುದ್ಧಿಗಾಗಿ ಎಲ್ಲರೂ ಪಶ್ಚಾತ್ತಾಪಪಟ್ಟರೂ ಈಗಲಾದರೂ ಬುದ್ಧಿ ಬಂದಿತಲ್ಲವೆ? ಎಂದು ಕೇಳಿ ಸರ್ವರೂ ಸಂತೋಷಿಸಿದರು.

ಸಹೃದಯ ಪಾಠಕಮಹಾಶಯರೇ! ನಮ್ಮ ಭರತಖಂಡದಲ್ಲಿ ಅನುಸರಣೆಯಲ್ಲಿರುವ ಈ ಕೆಟ್ಟಪದ್ಧತಿಯಿಂದ ಎಷ್ಟು ಕುಟುಂಬಗಳು ಕಷ್ಟವನ್ನನುಭವಿಸುತ್ತವೆ. ಒಂದು ಕಡೆ ದೇವತಾ ಸ್ವರೂಪರಾದ ಹೆತ್ತ ಮಾತಾಪಿತೃಗಳು ನಿರ್ಬಂಧಿಸುತ್ತಿರಲು, ಮತ್ತೊಂದು ಕಡೆ ಅಗ್ನಿ ಸಾಕ್ಷಿಯಾಗಿ ಕೈಹಿಡಿದ ಧರ್ಮಪತ್ನಿಯು ಸುಖ ಸಂತೋಷಗಳಿಗೆ ತಿಲಾಂಜಲಿಯನ್ನಿತ್ತು ಕಣ್ಣೀರು ಸುರಿಸುತ್ತಿರಲು, ಇವರುಗಳ ಮಧ್ಯೆ ಧರ್ಮ ಸಂಕಟಕ್ಕೆ ಸಿಕ್ಕಿ ತೊಳಲುತ್ತಿರುವ ಮನುಷ್ಯನ ಮನಸ್ಸಿನ ಸ್ಥಿತಿಯನ್ನು ವರ್ಣಿಸಲು ಯಾರಿಂದ ತಾನೇ ಸಾಧ್ಯವು? ಒಬ್ಬರನ್ನೊಬ್ಬರು ತೃಪ್ತಿಗೊಳಿಸಲೆಳಸಿ ಇತರರನ್ನು ಹಿಂಸಿಸುವುದು ಯಾವ ನ್ಯಾಯವೊ? ಇದು ತಪ್ಪೆಂದು ಯಾತಕ್ಕೆ ಬುದ್ಧಿಗೆ ಗೋಚರವಾಗಲಿಲ್ಲವೊ? ಗುಣಜ್ಞನಾದ ಸತ್ಯೇಂದ್ರನು ಮಾತೃವಾಕ್ಯದಂತೆ ಪ್ರಿಯಂವದೆಯನ್ನು ಆದರಿಸದೆ ನಿರಾಕರಿಸಿದ್ದರೆ ಅವಳ ಗತಿ ಏನಾಗಿರಬೇಕು? ಹೆಂಡತಿಯೇ ಹೆಚ್ಚೆಂದು ಮಾತಾಪಿತೃ, ಸಹೋದರ, ಸಹೋದರಿಯರನ್ನು ಕಾಪಾಡದೆ ಹೋಗಿದ್ದರೆ ಅವರಗತಿಯೇನು? ಈ ವಿಷಯಗಳನ್ನು ಅನೇಕ ಸಲ ಯೋಚಿಸಿಯೇ ಅವನು ಪ್ರಿಯಂವದೆ ಯನ್ನು ಕೆಲವು ದಿನಗಳಮಟ್ಟಿಗೆ ತಾಯಿಯೊಂದಿಗೆ ಬಿಟ್ಟಿರುವುದು ಉತ್ತಮವೆಂದು ಯೋಚಿಸಿದ್ದು! ಕಾಲವನ್ನು ವ್ಯರ್ಥವಾಗಿ ಕಳೆಯದೆ ವಿದ್ಯಾಭ್ಯಾಸವನ್ನು ಮಾಡಿಸಲೆಳಸಿ ಅವಳನ್ನು ಮಹಾರಾಣಿ ಕಲಾಶಾಲೆಗೆ ಕಳುಹಿಸಿದ್ದು! ಕಾಂತಾಮಣಿ, ಎನ್ನುವ ಹೆಸರಿನಿಂದ ಧರ್ಮಸಮ್ಮತವಾದ ಕಲೆಗಳನ್ನಭ್ಯಸಿಸಿ ಪತಿವಾಕ್ಯದಂತೆಯೇ ನಡೆಯಲು ಪ್ರಾರಂಭಿಸಿದಳು. ವಾರಕ್ಕೆರಡು ಸಲ ಸತ್ಯೇಂದ್ರನಿಗೆ ತಪ್ಪದೆ ಅವಳಿಂದ ಕಾಗದ ಬರುತ್ತಿತ್ತು. ಅಲ್ಲಿದ್ದ ವಿದ್ಯಾವತಿಯರಾದ ಮಹಿಳೆಯರಿಂದ ಕಾಂತೆಗೆ ಅನೇಕ ಬಹುಮಾನಗಳು ದೊರಕಿದ್ದವು. ಸತ್ಯೇಂದ್ರನಿಗೆ ತನ್ನ ಭಾರ್ಯೆಯ ವಿದ್ಯಾಭಿವೃದ್ಧಿಯನ್ನು ನೋಡಿ ಬಹಳ ಸಂತೋಷ ವುಂಟಾದಾಗ್ಯೂ ಇದನ್ನು ಮಾತ್ರ ಯಾರಿಗೂ ಹೇಳಿದವನಲ್ಲ. ಸತ್ಪುರುಷರಿಗೆ ಎಂದಿಗೂ ಕೇಡು ಬರಲಾರದೆಂತಲೂ, ಸತ್ಯಕ್ಕೂ ಧರ್ಮಕ್ಕೂ ಎಂದೆಂದಿಗೂ ಜಯವುಂಟಾ ಗುವುದೆಂತಲೂ, ನಂಬಿದ್ದನು. ಕಾಂತೆಯ ವಿದ್ಯಾಭ್ಯಾಸವೂ, ಸಹೋದರಿಯರ ವಿವಾಹವೂ ಕ್ರಮವಾಗಿ ನೆರವೇರಿತು. ಅಲ್ಲಿಯವರೆಗೂ ಅನ್ನಪೂರ್ಣೆಗೆ ಮಗನ ಕುಟುಂಬದ ವಿಷಯವಾಗಿ ಶ್ರದ್ಧೆಯಾಗಲಿ ಚಿಂತೆಯಾಗಲಿ ಏರ್ಪಡಲಿಲ್ಲ. ಹಣದಾಸೆಯಿಂದ ವಕ್ರಳಾಗಿ ದ್ವಿತೀಯ ಪತ್ನಿಯನ್ನು ವರಿಸುವಂತೆ ಮಗನನ್ನು ಪ್ರೇರೇಪಿಸಿದಳು. ಪೂರ್ವ ಪುಣ್ಯವಶದಿಂದ ಅವಳಿಗೆ ಒಳ್ಳೇ ಬುದ್ಧಿಯುಂಟಾಯಿತು. ಇನ್ನು ಸಂಸಾರ ಚಕ್ರವು ಸರಿಯಾಗಿ ಸುತ್ತುವುದರಲ್ಲಿ ಯಾವ ಆತಂಕವೂ ಇಲ್ಲ.

ತನ್ನ ಮಗನು ಹೇಳಿದ ಕಥೆಯನ್ನು ಕೇಳಿದಾಗಿನಿಂದ ಅನ್ನಪೂರ್ಣೆಯು ತನ್ನಲ್ಲಿದ್ದ ದುರ್ಗುಣಗಳನ್ನೆಲ್ಲಾ ಬಿಟ್ಟು ಬಹುಗುಣದಿಂದ ನಡೆದಳು. ಸತ್ಯೇಂದ್ರನ ಮನಸ್ಸೂ ಹರ್ಷಗೊಂಡಿತು. ತನ್ನನ್ನು ಪಡೆದ ಮಾತೆಯು, ದುಷ್ಟ ಸ್ವಭಾವವುಳ್ಳವಳಾದಾಗ್ಯೂ ಅವಳನ್ನು ಧರ್ಮ ದೇವತೆಯನ್ನಾಗಿ ಭಾವಿಸಿ ಪೂಜಿಸಬೇಕೆಂದು ಧರ್ಮಶಾಸ್ತ್ರಗಳು ಘಂಟಾಘೋಷವಾಗಿ ಸಾರುತ್ತಿರುವುವು. ಇದನ್ನೆಣಿಸಿಯೇ ಸತ್ಯೇಂದ್ರನು ತನ್ನ ಸ್ವಂತ ಸುಖವನ್ನು ಕೂಡಾ ಲೆಕ್ಕಿಸದೆ

ಅನೇಕ ಕಷ್ಟಗಳನ್ನನುಭವಿಸಿದನು. ಪ್ರಕೃತದಲ್ಲಿ ಜೀವದಯಾಪರನಾದ ವಿಶ್ವಪಿತನ ಕರುಣ ದಿಂದ ತಾಯಿಗೂ ಗೌರವವಾದ ಬುದ್ಧಿಯು ಮಾಡಿಸಿತು. ಕುಟುಂಬದಲ್ಲಿ ಕೆಲವು ಏರ್ಪಾಡು ಗಳನ್ನು ಮಾಡಲೆಳಸಿದನು. ತನ್ನ ತಮ್ಮನಾದ ಉಪೇಂದ್ರನಿಗೆ ಧನವಂತನೊಬ್ಬನ ಕನ್ಯೆಯನ್ನು ವಿವಾಹ ಮಾಡಿಸಿದುದಲ್ಲದೆ ಬೇರೆ ಒಂದು ಗೃಹವನ್ನೂ, ೪,೦೦೦ ರೂಪಾಯಿಗಳನ್ನೂ ಕೊಟ್ಟನು. ಸಹೋದರಿಯರಿಗೆ ಯಥೋಚಿತವಾದಷ್ಟು ಆಭರಣ, ಧನ, ವಸ್ತು ಮೊದಲಾದವು ಗಳನ್ನು ಕೊಟ್ಟದ್ದಲ್ಲದೆ ಬುದ್ಧಿವಂತರಾಗಿರುವಂತೆಯೂ, ಆಗಾಗ್ಯೆ ತಮ್ಮನ್ನು ಕಾಣಲು ಬರುವಂತೆಯೂ ಹೇಳಿದನು. ಮಾತಾಪಿತೃಗಳಿಷ್ಟವಿದ್ದರೆ ತನ್ನ ಬಳಿಯಲ್ಲಿರುವುದಕ್ಕೂ, ಹೆಣ್ಣುಮಕ್ಕಳೊಂದಿಗಿರುವುದಕ್ಕೂ, ಬೇರೆ ಇರುವುದಕ್ಕೂ ಬೇಕಾದ ಸೌಕರ್ಯಗಳನ್ನೆಲ್ಲಾ ಕಲ್ಪಿಸಿದನು. ಇಲ್ಲಿಗೆ ಇವನು ಗಳಿಸಿದ್ದ ಧನವೆಲ್ಲವೂ ವ್ಯಯವಾಯಿತು. ಸತ್ಯೇಂದ್ರನೂ ಪ್ರಿಯಂವದೆಯೂ ಮಾತ್ರ ಉಳಿದರು. ಪ್ರಿಯಂವದೆಯ ತಾಯಿಯು ಕಾಶಿಗೆ ಹೋಗುವುದಾಗಿ ಎಲ್ಲರಿಂದಲೂ ಅಪ್ಪಣೆಯು ಪಡೆದು ಹೊರಟು ಹೋದಳು. ಅಂದಿನಿಂದ ಸತ್ಯೇಂದ್ರನೂ ಪ್ರಿಯಂವದೆಯೂ ಬಹು ಸಂಭ್ರಮದಿಂದ ಸಂಸಾರ ಚಕ್ರವನ್ನು ನಡೆಸಲಾರಂಭಿಸಿದರು.

## ೮ನೆಯ ಅಧ್ಯಾಯ

## ಪ್ರೇಮ ಸಂಭಾಷಣೆ

ಸತ್ಯೇಂದ್ರ ಪ್ರಿಯಂವದೆಯರ ಕಷ್ಟವೂ ನಿರ್ಬಂಧವಾಸವೂ ಅಂದಿಗೆ ನಿವಾರಣೆಯಾದುವು. ಸತೀಪುರುಷರಿಬ್ಬರೂ ಮಹದಾನಂದದಿಂದ ಸಂಸಾರ ಮಾಡಲಾರಂಭಿಸಿದರು. ಸತ್ಯೇಂದ್ರನೂ ನ್ಯಾಯ (B.I.) ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದನು. ಪ್ರಿಯಂವದೆಯೂ ಸಂಪೂರ್ಣವಾಗಿ ವಿದ್ಯಾಭ್ಯಾಸವನ್ನು ಮಾಡಿದ್ದಳು. ಇಂತಹ ವಿದ್ಯಾವಂತರಾದ ದಂಪತಿಗಳಿಂದ ನಡೆಸಲ್ಪಡುವ ಸಂಸಾರವು ಎಷ್ಟು ಆನಂದವಾಗಿರುವುದೆಂಬುದನ್ನು ವಿದ್ಯಾವಂತರಾದ ಪಾಠಕಮಹಾಶ ಯರುಗಳೇ ಊಹಿಸಿಕೊಳ್ಳಬೇಕು. ಮೇಲೆ ಹೇಳಿದ ಸಂಭವವು ನಡೆದು ಸುಮಾರು ಆರು ತಿಂಗಳುಗಳಾಗಿರಬಹುದು. ಒಂದು ದಿನ ಸತಿಪತಿಯರಿಬ್ಬರೂ ಮನೆಯ ಮುಂದಿನ ಉದ್ಯಾನವನದಲ್ಲಿ ವಿಹರಿಸುತ್ತಿದ್ದರು. ಸತ್ಯೇಂದ್ರನು ತನ್ನ ರಮಣಿಯೊಡನೆ ಸಂಭಾಷಿ ಸುತ್ತಿದ್ದವನು. ಹಾಗೆಯೇ ಮರದ ಕೆಳಗಿದ್ದ ಶಿಲಾಸನದಲ್ಲಿ ಕುಳಿತುಕೊಂಡು ಕಾಂತೆಯನ್ನು ಕುಳಿತುಕೊಳ್ಳುವಂತೆ ಬಲಾತ್ಕರಿಸಿದನು. ರಮಣಿಯು ಲಜ್ಜೆಯಿಂದ ಕುಳಿತುಕೊಂಡಳು. ಆಗ ಸತ್ಯೇಂದ್ರನು ಪ್ರೇಮದಿಂದ, ಪ್ರಿಯೇ! ಈ ಪ್ರಪಂಚದ ಸೃಷ್ಟಿ ಸೌಂದರ್ಯವನ್ನು ನೋಡಿದೆಯಾ? ಅಂತರಿಕ್ಷದಲ್ಲಿ ಹಾರಾಡುವ ಪಕ್ಷಿಜಾಲಗಳನ್ನು ನೋಡು! ಮೇಘಗಳು ಘಳಿಗೆಗೊಂದು ಸಲ ವಿಧವಿಧವಾದ ರೂಪವನ್ನು ಧರಿಸುತ್ತಿರುವುದನ್ನು ನೋಡು! ಇದನ್ನೆಲ್ಲಾ ನೋಡಿದರೆ ಸೃಷ್ಟಿಕರ್ತನ ಸಾಮರ್ಥ್ಯವು ವ್ಯಕ್ತವಾಗುವುದಲ್ಲವೇ?

**ಪ್ರಿಯಂವದೆ :** ಪ್ರೇಮನಿಧಿಯೇ! ಇಂತಹ ಅದ್ಭುತಗಳನ್ನು ನೋಡುವುದಕ್ಕೋಸ್ಕರವೇ ಅಲ್ಲವೇ ಆ ಅನಂತ ಕಲ್ಯಾಣ ಗುಣನಿಧಿಯು ನಮಗೆ ಕಣ್ಣುಗಳನ್ನು ದಯಪಾಲಿಸಿರುವನು! ಪ್ರಿಯನೇ! ಅಲ್ಲಿ ನೋಡಿರಿ, ಮುತ್ತುಗಳು ಚೆದರಿಬೀಳುವಂತೆ ಆ ಜಲಯಂತ್ರದಿಂದ ನೀರು

ನಾಲ್ಕು ಕಡೆಗೂ ಹಾರುತ್ತಿರುವುದು. ಎಲ್ಲೆಲ್ಲಿ ನೋಡಿದರೂ ರಮಣೀಯವಾಗಿರುವುದು. ಏಕಾಂತ ವಾಸಮಾಡಲು ಇದೇ ತಕ್ಕ ಸ್ಥಳವು. ನಾವು ಆಂತರ್ಯವಾಗಿ ಯೋಚಿಸಿದರೆ ಎಂತಹ ಅಗಾಧ ವಿಷಯಗಳು ನಮಗೆ ವ್ಯಕ್ತವಾಗುವುವು? ಈ ಪ್ರಪಂಚದಲ್ಲಿ ನಾವು ಜನಿಸಿದ ಕಾರಣ ಒಂದು ಕಡೆ ಇರಲಿ! ಜನ್ಮ ಸಾಫಲ್ಯ ಹೊಂದುವ ಮಾರ್ಗವೇ ಪ್ರಧಾನವಾಗಿರುವುದು. ಒಂಟಿಯಾಗಿದ್ದು ನಿತ್ಯಾನಂದ ನೋಟವನ್ನು ನೋಡುವಂಥವರು ಕೂಡ ತಮ್ಮ ಆಗಿನ ಸ್ಥಿತಿಯನ್ನು ಮತ್ತೊಬ್ಬರಿಗೆ ತಿಳಿಸಲು ಕುತೂಹಲವುಳ್ಳವರಾಗಿರುವರಲ್ಲವೇ? ಇದರಿಂದಲೇ ಪ್ರತಿಯೊಬ್ಬರಿಗೂ ಒಬ್ಬೊಬ್ಬ ಮಿತ್ರರಿರಬೇಕೆಂಬುದು ವ್ಯಕ್ತವಾಗುವುದಲ್ಲವೇ? ತಾವು ಕಾಣುವ ಆಶ್ಚರ್ಯಗಳನ್ನೆಲ್ಲಾ ನನ್ನೊಂದಿಗೆ ಹೇಳುವಿರಲ್ಲವೆ? ಇದಲ್ಲವೇ ಲೋಕಯಾತ್ರೆಯಲ್ಲುಂಟಾಗತಕ್ಕ ಆನಂದ?

**ಸತ್ಯೇಂದ್ರ :** ಪ್ರಿಯರಮಣೀ! ನೀನು ನೋಡುವುದನ್ನೂ, ವರ್ಣಿಸುವುದನ್ನೂ ಕೇಳುವುದಕ್ಕೆ ನಾನು ಕುತೂಹಲಪಡುತ್ತಿರುವಾಗ ಅದನ್ನು ಬಿಟ್ಟು ನಾನು ಹೇಳಿದುದನ್ನೆ ತಿರುಗಿಸಿ ಹೇಳಿ ನನ್ನನ್ನೇ ಹಾಸ್ಯ ಮಾಡುತ್ತಿರುವೆ! ನೀನು ಓದುತ್ತಿರುವಾಗ ಬರೆದ ಪತ್ರದಲ್ಲಿ ನಿನ್ನಿಂದ ಬರೆಯಲ್ಪಟ್ಟಿದ್ದ ಕುಯುಕ್ತಿಗಳನ್ನೂ ಹಾಸ್ಯೋಕ್ತಿಗಳನ್ನೂ ನಾನಿನ್ನೂ ಮರೆತಿಲ್ಲ. ಅದೆಲ್ಲಾ ಹಾಗಿರಲಿ. ನಿನ್ನ ತಾಯಿಯನ್ನು ಹಣ ಕೊಡುವಂತೆ ಪೀಡಿಸಿದ್ದಕ್ಕೂ, ನಾನು ನಿನ್ನನ್ನು ಬೇರೆ ಕಳುಹಿಸಿದ್ದಕ್ಕೂ ನಿನಗೆ ನಮ್ಮಗಳ ಮೇಲೆ ಬಹಳ ಕೋಪವಿರುವುದಲ್ಲವೇ?

**ಪ್ರಿಯಂವದೆ :** ಪ್ರಿಯನೇ! ನನಗೆ ಕೋಪವೇನೂ ಇಲ್ಲವು. ಬಂದದ್ದನ್ನೆಲ್ಲಾ ನಾವನುಭವಿಸಿಯೇ ತೀರಬೇಕಲ್ಲದೆ ಒಲ್ಲೆವೆಂದರೆ ಬಿಡುವುದೇ? ಅವರು ನಿರಾಕರಿಸಿದರೂ ನೀವು ಆದರಿಸಿದರಲ್ಲವೆ? ಆದ್ದರಿಂದಲೇ ನಾನೆಷ್ಟೋ ಪುಣ್ಯಶಾಲಿಯೆಂದು ಹೇಳಬೇಕು. ನಾನು ನಿಮ್ಮನ್ನೊಂದು ಪ್ರಶ್ನೆ ಕೇಳುವೆನು. ತಾವು ದಯವಿಟ್ಟು ಪ್ರತ್ಯುತ್ತರ ಕೊಡುವಿರಾ?

**ಸತ್ಯೇಂದ್ರ :** ಪ್ರಿಯೇ! ಇದೇನು ಹೀಗೆ ಕೇಳುವೆ ನಿನಗೆ ನಾನು ತಿಳಿಸಬಾರದ ವಿಷಯವೂ, ಕೊಡಬಾರದ ವಸ್ತುವೂ ಇರುವುದೇ? ಏನಾಗಿದ್ದರೂ ಕೇಳು. ನಾನು ಹೇಳುವೆನು, ಕೊಡುವೆನು. ಭಯವನ್ನೂ ಸಂಕೋಚವನ್ನೂ ಬಿಡು.

**ಪ್ರಿಯಂವದೆ :** ಮತ್ತೊಬ್ಬರನ್ನು ಹಿಂಸಿಸಿ ಹೀಗೆ ಅನ್ಯಾಯವಾಗಿ ಹಣವನ್ನು ಹೊಂದುವಿರಲ್ಲಾ. ಇದರಿಂದೇನು ಪ್ರಯೋಜನ? ಹೀಗೆ ಹಣವನ್ನು ತೆಗೆದುಕೊಳ್ಳಬೇಕೆಂದು ಯಾವ ಶಾಸ್ತ್ರದಲ್ಲಿ ವ್ಯಕ್ತವಾಗಿರುವುದು?

**ಸತ್ಯೇಂದ್ರ :** ಕಾಂತಾ! ಈ ಪದ್ಧತಿಯು ಯಾವ ಶಾಸ್ತ್ರದಲ್ಲಿಯೂ ವ್ಯಕ್ತನಾಗಿಲ್ಲದಿದ್ದರೂ, ಕೇವಲ ಅನುಸರಣೀಯವಾಗಿ ಬಂದಿರುವುದು. ನಮ್ಮ ದೇಶದಲ್ಲಿ ಅನೇಕ ಕೆಲಸಕ್ಕೆ ಬಾರದ ಪದ್ಧತಿಗಳು ಈವರೆಗೂ ಆಚರಣೆಯಲ್ಲಿರುವುದಲ್ಲಾ. ಅದರಂತೆಯೇ ಇದೂ ಒಂದು ಪದ್ಧತಿಯು. ಈ ನಾಗರೀಕ ಕಾಲದಲ್ಲಿಯೂ ಇದು ಆಚರಣೆಯಲ್ಲಿರುವುದು ಬಹಳ ಶೋಚನೀಯವಾಗಿರುವುದು.

**ಪ್ರಿಯಂವದೆ :** ಅಹುದು! ಈಗ ನೋಡಿರಿ. ವಂಗದೇಶದಲ್ಲಿ ಕೆಲವು ರಮಣೀಯರು

ತಮ್ಮ ತಂದೆಯರು ವರದಕ್ಷಿಣೆಯನ್ನು ಕೊಡಲು ಅಶಕ್ತರಾದುದರಿಂದ ತಾವು ತಮ್ಮ ದೇಹ ವನ್ನೂ ಆತ್ಮವನ್ನೂ ಯಜ್ಞೇಶ್ವರನಿಗೆ ಆಹುತಿ ಇತ್ತರೆಂದು ವರ್ತಮಾನ ಪತ್ರಿಕೆಗಳಲ್ಲಿ ಬಂದಿರಲಿಲ್ಲವೇ? ಇನ್ನಾದರೂ ಈ ವಿಷಯವನ್ನು ಬಿಡಬಾರದೇ?

**ಸತ್ಯೇಂದ್ರ :** ಬಿಡಬಹುದು! ಇದರಲ್ಲಿ ಸ್ತ್ರೀಪುರುಷರಿಬ್ಬರೂ ಬೆರೆತು ಕೆಲಸ ಮಾಡಬೇಕು. ಇಲ್ಲಿ ನೋಡು! ಪುರುಷನು ಸಭೆಯಲ್ಲಿ ನಿಂತು ಧೈರ್ಯದಿಂದ ವರದಕ್ಷಿಣೆ ತೆಗೆದುಕೊಳ್ಳ ಕೂಡದೆಂದೂ, ಬಾಲ್ಯವಿವಾಹ ಮಾಡಕೂಡದೆಂದೂ, ಸ್ತ್ರೀಯರಿಗೆ ಸ್ವಾತಂತ್ರ್ಯವನ್ನು ಕೊಡಬೇಕೆಂದೂ ಉಪನ್ಯಾಸ ಮಾಡುವನು. ಅದೇ ಪುರುಷನೇ ಮನೆಗೆ ಬಂದರೆ ಕನ್ಯೆಗೆ ವಯಸ್ಸಾಗಿ ಹೋಗುವುದೆಂದೂ, ಹೆಚ್ಚು ಹಣವನ್ನು ಕೊಟ್ಟಾದರೂ ಜಾಗ್ರತೆಯಾಗಿ ವಿವಾಹವನ್ನು ನೆರವೇರಿಸಬೇಕೆಂದೂ, ಹೆಂಡತಿಯು ಪೀಡಿಸಿ ಕಾಡಿಸುವಳು. ಆಗ ಅವನು ಏನು ಮಾಡಿಯಾನು? ಮನೆಯ ಹೆಂಗಸಿನ ಮನಸ್ಸಿನಂತೆ ನಡೆಯದಿದ್ದರೆ ಸುಖವು ಕುದುರೆಯ ಕೊಂಬಾಗುವುದು. ಆದುದರಿಂದ ಸಭೆಯಲ್ಲಿ ಹೇಳಿದ ಸುಧಾರಣೆಯನ್ನು ಕೂಡ ಮರೆತು ತನ್ನ ಮನೆ ಹೆಂಗಸರ ಮಾತಿನಂತೆಯೂ ಇಷ್ಟದಂತೆಯೂ ನಡೆಯಲು ಪ್ರಯತ್ನಿಸುವನು. ಆದ್ದರಿಂದ ಈ ವಿಷಯಗಳಲ್ಲಿ ಪುರುಷರಿಗಿಂತ ಸ್ತ್ರೀಯರು ವಿದ್ಯಾವತಿಯರಾಗಿ ಪುರುಷರ ಮನಸ್ಸಿನಂತೆ ನಡೆಯಲು ಪ್ರಯತ್ನಿಸಿದ ಹೊರತು ಈ ದುರಾಚಾರಗಳು ನಿರ್ಮೂಲ ವಾಗುವುದು ಅಸಂಭವವು.

**ಪ್ರಿಯಂವದೆ :** ಅಹುದು! ಸ್ತ್ರೀಯರಿಗೆ ಮಾತ್ರ ಈ ವಿಷಯದಲ್ಲಿ ಅಭಿರುಚಿ ಇರುವುದೆಂದು ಹೇಳಲಾಗುವುದಿಲ್ಲ. ಮೊದಲು ಸ್ತ್ರೀಯರೆಲ್ಲಾ ವಿದ್ಯಾವತಿಯರಾಗುವಂತೆ ಪ್ರಯತ್ನಿಸಬೇಕು. ಎಲ್ಲರೂ ವಿದ್ಯಾವತಿಯರಾದರೆ ಈ ದುರಾಚಾರಗಳೆಲ್ಲವೂ ನಿರ್ಮೂಲವಾ ಗುವುದೆಂದು ಹೇಳುವಿರಲ್ಲಾ. ಪುರುಷರು ಮಾತ್ರ ಹಣಕ್ಕಾಸೆಪಡುವುದಿಲ್ಲವೇ? ಸ್ತ್ರೀಯರೇ ಕಾರಣಭೂತರೆಂದು ಹೇಳುವುದಕ್ಕಾಗುವುದಿಲ್ಲ. ಓದಿದ ವಿದ್ಯಾವಂತರಾದ ಯುವಕರು ಕೂಡ ಹಣಕ್ಕಾಗಿ ಮುಷ್ಕರ ಹಿಡಿಯುವರಲ್ಲವೇ? ಇದಕ್ಕೇನು ಹೇಳುವಿರಿ?

**ಸತ್ಯೇಂದ್ರ :** ಅಹುದು! ಇದೆಲ್ಲಾ ದುಷ್ಟಪದ್ಧತಿಯ ಮೇಲೆ ಪ್ರಚಾರಕ್ಕೆ ಬಂದಿರುವುವು. ಅನೇಕ ನಡವಳಿಕೆಗಳು ಈಗ ಬದಲಾಯಿಸಿರಲಿಲ್ಲವೇ? ಅದರಂತೆಯೇ ಸರ್ವರೂ ಏಕೀಭವಿಸಿ ಪ್ರಯತ್ನಪಟ್ಟರೆ ಈ ಕೆಟ್ಟ ಪದ್ಧತಿಯು ನಿರ್ಮೂಲವಾಗುವುದಲ್ಲದೆ ಅನೇಕ ಬಡ ಕುಟುಂಬಗಳು ಉದ್ಧಾರವಾಗುವುವು. ಅದಿರಲಿ. ಈಗ ನೋಡು. ನಮ್ಮ ತಾಯಿಯು ಹಣಕ್ಕೋಸ್ಕರವಲ್ಲವೇ ನಿನ್ನನ್ನು ನಿರಾಕರಿಸಿದಳು. ನಾನು ಹಣಕ್ಕಾಸೆಪಟ್ಟಿದ್ದರೆ ನಿನ್ನನ್ನು ಆಧರಿಸುತ್ತಿದ್ದೇನೆ? ನನ್ನಂತಹ ವಿದ್ಯಾವಂತರೆಲ್ಲರೂ ಹೀಗೆಯೆ ತಮ್ಮ ಮಾತಾಪಿತೃಗಳು ಅಪೇಕ್ಷಿಸಿದರೂ ಕೂಡ ತಾವು ಅಪೇಕ್ಷಿಸದಿದ್ದರೆ ಬಹು ಮೇಲಾಗುವುದಲ್ಲವೇ?

**ಪ್ರಿಯಂವದೆ :** ಅದೇನೂ ಸರಿ! ಎಲ್ಲರೂ ತಮ್ಮಂತೆಯೇ ಇರುವರೇ? ನನ್ನ ಭಾಗ್ಯವಶದಿಂದ ತಾವು ನನಗೆ ಪತಿಯಾದಿರಿ. ನನಗೆ ಇನ್ನು ಮತ್ತೊಬ್ಬರಿಂದೇನಾಗಬೇಕು? ನನಗೆ ಬೇಕಾದ್ದೆಲ್ಲಾ ತಮ್ಮ ೆರಡುಪಾದಗಳೇ. ಇದರಲ್ಲಿ ಇಹವೊಂದು-ಪರವೊಂದು ಇಹಪರಗ

ಳೆರಡಕ್ಕೂ ನಾನು ಮಾರ್ಗವನ್ನು ಬಲ್ಲೆನು. ನನ್ನ ಧನವೂ ಇವುಗಳೇ. ನನ್ನ ಸರ್ವಸ್ವವೂ ಇವುಗಳೇ, ಎಂದು ಹೇಳಿ ಪತಿಯ ಪಾದಗಳೆರಡಕ್ಕೂ ನಮಸ್ಕರಿಸಿ, ಕಣ್ಣಿಗೊತ್ತಿಕೊಂಡಳು.

ಪ್ರಿಯಂವದೆಯೂ ಸತ್ಯೇಂದ್ರನೂ ಅನಾಥರ ಮತ್ತು ದೀನಜನರ ಕಷ್ಟಗಳನ್ನು ಪರಿಹರಿಸಿ ಅವರಿಗೆ ಬೇಕಾದಷ್ಟು ಸಹಾಯ ಮಾಡಿದರು. ಧರ್ಮಛತ್ರ, ಅನ್ನಶಾಲೆ ಮೊದಲಾದುವು ಗಳನ್ನೇರ್ಪಡಿಸಿದರು. ಕೇವಲ ಈ ವರಶುಲ್ಕ ಕಾರಣವಾಗಿಯೇ ತಾವಿಷ್ಟು ಕಷ್ಟಪಟ್ಟ ವರಾದುದರಿಂದ ತಮ್ಮ ಸ್ನೇಹಿತ ಸ್ನೇಹಿತೆಯರಿಗೆಲ್ಲಾ ಹಾಗೆ ವರದಕ್ಷಿಣೆ ತೆಗೆಯಕೂಡದೆಂದು ಪತಿಪತ್ನಿಯರಿಬ್ಬರೂ ಬೋಧಿಸಿದರು. ಪ್ರಿಯಂವದೆಯು ಅಗಾಗ್ಯೆ ತನ್ನ ಅತ್ತಿಗೆ ನಾದಿನಿಯರನ್ನು ಮನೆಗೆ ಕರೆಸಿಕೊಂಡು ಅವರನ್ನು ವಸ್ತ್ರಾಭರಣಗಳಿಂದ ತೃಪ್ತಿಗೊಳಿಸಿ ಬುದ್ಧಿವಂತರಾಗಿ ಅತ್ತೆಮಾವಂದಿರ ಹೇಳಿಕೆಯಂತೆ ನಡೆಯಬೇಕೆಂದು ಬೋಧಿಸುವಳು. ಇಂತಹ ಬುದ್ಧಿ ಸಾಮರ್ಥ್ಯವನ್ನು ಕಂಡ ಸತ್ಯೇಂದ್ರನ ಆನಂದಕ್ಕೆ ಕೊನೆ ಮೊದಲಿರಲಿಲ್ಲ. ಪ್ರಿಯಂವದೆಯನ್ನು ಕಂಡಾಗಲೆಲ್ಲಾ "ಕಾಂತಾಮಣೀ! ನಿನ್ನನ್ನು ಹೊಂದಲು ನಾನೇನು ಭಾಗ್ಯ ಮಾಡಿದ್ದನೋ? ನನ್ನ ಮೇಲೆ ನಿನಗಿರುವ ಪ್ರೇಮವನ್ನು ನಾನೆಷ್ಟೆಂದು ಬಣ್ಣಿಸಲಿ? ರಾಜಾಧಿರಾಜರೆಂದು ಬಿರುದು ಹೊಂದಿದವರಿಗೂ ಕೂಡಾ ನಿನ್ನಂತಹ ಕನ್ಯಾರತ್ನವು ಸಿಕ್ಕುವುದು ದುರ್ಲಭವು. ನಾನೇ ಸಂತೋಷಿಯು! ನಾನೇ ಪುಣ್ಯವಂತನು! ನಿನ್ನಂತಹ ಉತ್ತಮ ವನಿತಾರತ್ನವು ಎಲ್ಲರಿಗೂ ದೊರಕಿದರೆ ಈ ಪ್ರಪಂಚದಲ್ಲಿ ದುಃಖಗಳೆಂಬ ಹೆಸರೇ ಇಲ್ಲದೆ ಎಲ್ಲರೂ ಸುಖಮಯರಾಗಿಯೇ ಇರುತ್ತಿದ್ದರು" ಎಂದನು. ಅತ್ತೆ ಮಾವಂದಿರಿಗೆ ವಿಧೇಯಳಾಗಿ ವೃದ್ಧರಾದ ಅವರ ಶುಶ್ರೂಷೆಯನ್ನು ಬಹು ಭಕ್ತಿ ವಿನಯಗಳಿಂದ ಮಾಡುವಳು. ಅನ್ನಪೂರ್ಣೆಯು ಇಂತಹ ಸತೀತಿಲಕಕ್ಕೆ ತಾನು ಅಷ್ಟು ಕಷ್ಟಗಳನ್ನುಂಟು ಮಾಡಿದುದಕ್ಕಾಗಿ ಪರಿತಪಿಸುವಳು. ಕಾಂತೆಯು ಆಕೆಯನ್ನು ರಾಜ್ಯಲಕ್ಷ್ಮಿ ಎಂದು ಹೊಗಳುತ್ತಿದ್ದರು. ಈ ದಂಪತಿಗಳು ಚಿರಕಾಲ ಬಾಳಲೆಂದು ಪುರಜನರೆಲ್ಲರೂ ಹರಿಸುತ್ತಿದ್ದರು. ವಿದ್ಯಾವಂತರಾದ ದಂಪತಿಗಳು ತಮ್ಮ ದೇಶೋದ್ಧಾರಕ್ಕಾಗಿ ಕಂಕಣವನ್ನು ಕಟ್ಟಿಕೊಂಡು ಸದಾ ದೇಶ ಸೇವೆ ಮಾಡುತ್ತಾ ತಮ್ಮ ಕಾಲವನ್ನು ಆನಂದದಿಂದ ಕಳೆಯುತ್ತಾ ಸುಖವಾಗಿದ್ದರು. ಸತ್ಯೇಂದ್ರನು ತಾನು ವಿದ್ಯಾವಂತನಾಗಿದ್ದರೂ ಪತ್ನಿಯ ಅನುಮತಿಯಂತೆಯೇ ಸಕಲ ಕಾರ್ಯಗಳನ್ನು ನಡಿಸುವನು. ಈ ರೀತಿಯಾಗಿಯೇ ಈ ನಮ್ಮ ಭಾರತ ದೇಶದಲ್ಲೆಲ್ಲಾ ವಿದ್ಯಾವಂತರಾದ ದಂಪತಿಗಳೇ ತುಂಬಿದರೆ ದೇಶವು ಶೀಘ್ರದಲ್ಲಿಯೇ ಉದ್ಧಾರವಾಗುವುದೆನ್ನುವನು. ತಾವು ಬಾಯಿಂದ ಹೇಳದಂತೆಯೇ ಸಮಸ್ತ ಕೆಲಸಗಳನ್ನೂ ಕಾರ್ಯದಲ್ಲಿ ನಡೆಸುತ್ತಾ ದೇಶ ಜನಗಳ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿ, ಕೀರ್ತಿವಂತರಾಗಿ, ಆ ಪೂಜ್ಯದಂಪತಿಗಳು ಸುಖದಿಂದ ಬಾಳುತ್ತಿದ್ದರು.

●

## ಅಭಿವ್ಯಕ್ತಿ : ಇಂದು

### ೧. ಬಕುಳದಾ ಹೂವು

ಮಾಲತಿ ಪಟ್ಟಣಶೆಟ್ಟಿ

ಗೆಳತಿ,
ನಿನ್ನಂಗಳದಾನ ಆ ಬಕುಳ
ಸುರೀತದ ಮನದಾಗ ಹೂಮಳಿ
ನಿನ್ನ ಆ ಮರಾ ನನ್ನಲ್ಲಿ ಎಂದಿಗೂ ಅಮರಾ
ನಮ್ಮ ಬಾಲ್ಯವೆಷ್ಟು ಸುಂದರಾ!

ಪುಟ್ಟ ಉಡಿಯಾನ ಆ ಹೂ-ಲೋಕ
ಆಗ ಕರೆದಿತ್ತು ಚೆಲುವಿನಾಟಕ್ಕೆ,
ಪರಿಮಳದ ಕುದರಿಯೋಟಕ್ಕ
ಮುಟ್ಟಿದ್ದೆವು ಚಂದ್ರ ಲೋಕಕಾ!

ಪೋಣಿಸುವ ಎಸಳಂಥ ಬೆರಳಾಗ
ಹೂಗಣ್ಣಿನಾಗ ಕಣ್ಣಕುಸುರ
ಕುಸುರೀನ ಶಿಲ್ಪದಾ ಬಕುಳ
ಮಾಡಿದ್ದು ಏನೆಂಥ ಮರುಳ!

ಹೆಣೆದೆವು ಹೂವಿನ ಸರಾ
ಹೆಣೆಯುತ್ತ ಹಂಬಲ ನೂರಾ
ಮುಡಿದೆವು ತಾರೆಗಳ ಹಾರಾ
ಕಾಣುತ್ತ ಕನಸು ಸಾಕಾರಾ.

ನೀ ನೊಂದು ಈಗ ಆದಾಹ್ಯಾಗ
ನಾನಿಲ್ಲಿ ನಲಗು ಬಂಡ್ಯಾಗ,
ದಿನರಾತ್ರಿ ನೆನಪೀನ ಸುರಿಮಳಿ
ಕರೀತಾವ ನೋವುಗಣ್ಣಿನ ಬಕುಳ!

ಆ ಲೋಕದಿಂದ ಈ ಲೋಕ
ಬಾಳು ಇಷ್ಟೇಕೆ ಕನಸಿಗೆ ದೂರ??
ಕರಗಿದರೂ ಬದುಕಿನಿಡುಗಂಟ
ಮರೆವೆನೆ ಗೆಳತಿ ಬಾಲ್ಯದಾ ನಂಟ??

## ೨. ನಾ ಬರಿ ಭ್ರೂಣವಲ್ಲ

ಅವ್ವಾ,
ನಾ ನಿನ್ನ ಮಗಳು
ದೇಹದ ಮುಗುಳು
ನಿನ್ನ ಕನಿಸಿನ ಅರಳವ್ವಾ;
ನಾ ಬರಿ ಭ್ರೂಣವಲ್ಲ.

ಏ ಅವ್ವಾ,
ಔಷಧಿಯೆಲ್ಲ ವಿಷವಾಗಿ
ಗುಳಿಗೆಗಳೆಲ್ಲ ನಶೆಯಾಗಿ
ಪಾಶವಾಗಿದೆಯವ್ವ ನನ್ನುಸಿರಿಗೆ!
ನಾ ಬರಿ ಭ್ರೂಣವಲ್ಲ.

ಏಕವ್ವಾ,
ಯಾರದ್ಯಾಕವ್ವಾ ಒತ್ತಾಸೆ?
ಮೇಲೆ ನಿನ್ನ ನಿರಾಸೆ,
ಗಾಬರಿಗೊಂಡಿದ್ದೇನವ್ವಾ;
ನಾ ಬರಿ ಭ್ರೂಣವಲ್ಲ.

ನನ್ನವ್ವ,
ಗೊತ್ತಿಲ್ಲವೆ ಮಗಳ ರಕ್ತ
ರಕ್ತವಲ್ಲ, ಪ್ರೀತಿ ರಸವೆ
ನಿನ್ನವ್ವನಾಗಿಯೇ ಬರುವೆನೆ
ನಾ ಬರಿ ಭ್ರೂಣವಲ್ಲ.

ಏ ಅವ್ವ
ನನ್ನ ಜಗತ್ತೆ ಪುಟ್ಟದು
ಕರಿಯುಗುರು ಬೆನ್ನಟ್ಟಿಯಲ್ಲೆ?
ಚಿಂತಿಸಿ ನಾ ಕೆಟ್ಟೆನವ್ವ
ನಾ ಬರಿ ಭ್ರೂಣವಲ್ಲ.

ಕೇಳವ್ವ
ಕಂಡಿಲ್ಲ ನಾನಿನ್ನೂ
ಬದುಕಿನಾಗಸದ ನೀಲ
ಪಚ್ಚೆಯಂಥ ನೆಲ
ಗಾಳಿಯ ಮೃದು ಸ್ಪರ್ಶ
ನಾ ಬರಿ ಭ್ರೂಣವಲ್ಲ.

ನನ್ನ ಹಡೆವವ್ವ
ನಿನ್ನ ಮೈಗಂಧದಿಂದ
ಕಿತ್ತುಕೊಂಡರೆ ನಾಸತ್ತೆನವ್ವಾ!
ಚೆಲ್ಲಬೇಕೆ ಉಡಿಯ ಮುತ್ತು??
ನಾ ಬರಿ ಭ್ರೂಣವಲ್ಲ.

ನನ್ನ ಮುದ್ದಿನವ್ವ,
ವರವ ಕೊಡುತಾಯಿ
ನನ್ನ ಉಸಿರಿಗೆ
ನಿನ್ನ ಬಾಳ ಹಸಿರಿಗೆ
ಹೂ ತರುವೆನೇ ನಿನ್ನ ಹೆಸರಿಗೆ
ನಾ ಬರಿ ಭ್ರೂಣವಲ್ಲ.

# ಈ ಸಂಚಿಕೆಯ ಲೇಖಕರು

೦೧. **ಡಾ. ಆನಂದ ಕೋಡಿಂಬಳ**
ಕನ್ನಡ ವಿಭಾಗ
ವಿಶ್ವವಿದ್ಯಾಲಯ ಕಾಲೇಜು
ಮಂಗಳೂರು

೦೨. **ಪ್ರೊ. ಉಮಾದೇವಿ ಕೆ.ಎಸ್.**
ಪ್ರಾಂಶುಪಾಲರು
ಎನ್.ಎಂ.ಕೆ.ಆರ್. ವಿ. ಕಾಲೇಜು
ಬೆಂಗಳೂರು

೦೩. **ಡಾ. ಉಷಾ.ಎಂ.**
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೦೪. **ದಿ. ಕಲ್ಯಾಣಮ್ಮ.ಆರ್.**
ಬೆಂಗಳೂರು

೦೫. **ಕವಿತಾ ರೈ.ಬಿ.ಆರ್.**
ಸಂಶೋಧನಾ ವಿದ್ಯಾರ್ಥಿ
ಮಂಗಳ ಗಂಗೋತ್ರಿ
ಮಂಗಳೂರು ವಿಶ್ವವಿದ್ಯಾಲಯ

೦೬. **ಡಾ. ಚಂದ್ರಶೇಖರ.ಟಿ.ಆರ್.**
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೦೭. **ಡಾ. ತಾರಕೇಶ್ವರ.ವಿ.ಬಿ.**
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೦೮. **ಡಾ. ಪುಷ್ಪ.ಎಚ್.ಎಲ್.**
ವಿಜಯನಗರ
ಬೆಂಗಳೂರು

೦೯. **ಡಾ. ಮಲ್ಲಿಕಾಘಂಟಿ**
ಕನ್ನಡ ವಿಭಾಗ
ಸಂಡೂರು ಕೇಂದ್ರ
ಗುಲ್ಬರ್ಗಾ ವಿಶ್ವವಿದ್ಯಾಲಯ

೧೦. **ಡಾ. ಮಾಲತಿ ಪಟ್ಟಣಶೆಟ್ಟಿ**
ಇಂಗ್ಲೀಷ ವಿಭಾಗ
ಜೆ.ಎಸ್.ಎಸ್. ಮಹಾವಿದ್ಯಾಲಯ
ಧಾರವಾಡ

೧೧. **ಡಾ. ವನಜಾ ಧ್ರುವರಾಜನ್**
ವಿನ್ನಿಪಿಗ್ ಯೂನಿರ್ವಸಿಟಿ
ಕೆನಡಾ

೧೨. **ವಿಜಯಕುಮಾರ ಎಂ. ಬೋರಟ್ಟಿ**
ಸೆಂಟ್ರಲ್ ಯೂನಿರ್ವಸಿಟಿ
ಹೈದರಾಬಾದ್

೧೩. **ಡಾ. ವಿಠಲರಾವ್ ಗಾಯಕ್ವಾಡ್**
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೧೪. **ಡಾ. ಸಬೀಹ ಭೂಮಿಗೌಡ**
ಕನ್ನಡ ವಿಭಾಗ
ಮಂಗಳೂರು ವಿಶ್ವವಿದ್ಯಾಲಯ
ಕೊಣಾಜೆ-೫೭೪೧೯೯

೧೫. **ಸುಜ್ಞಾನಮೂರ್ತಿ**
ಸಹಾಯಕ ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೧೬. **ಡಾ. ಸುಮಿತ್ರಾ.ಎಲ್.ಸಿ.**
ಕನ್ನಡ ಪ್ರಾಧ್ಯಾಪಕು
ತುಂಗಾ ಕಾಲೇಜು
ತೀರ್ಥಹಳ್ಳಿ-೫೭೭ ೪೩೨

೧೭. **ಡಾ. ಹಿರೇಮಠ.ಎಸ್.ಎಸ್.**
ಕನ್ನಡ ಪ್ರಾಧ್ಯಾಪಕರು
ಹರಪನಹಳ್ಳಿ

## ಮಹಿಳಾ ಅಧ್ಯಯನ

**ಮ**ಹಿಳೆಯ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ, ಅವಳ ಬದುಕನ್ನು ಸುಗಮವಾಗಿಸುವ ದಿಸೆಯಲ್ಲಿ ಚಿಂತನೆ ನಡೆಸುವ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸಬೇಕಿದೆ. ಏಕೆಂದರೆ ಈವರೆಗೂ ಈ ಪುರುಷಪ್ರಧಾನ ಸಮಾಜಕ್ಕೆ ಮಹಿಳೆಯನ್ನು ದುಡಿಸಿಕೊಳ್ಳುವುದು ಹೇಗೆ ಎಂಬುದೇ ಚಿಂತೆಯಾಗಿದೆಯೇ ಹೊರತು ಅವಳ ಅಗತ್ಯಗಳನ್ನು ಗಮನಿಸಬೇಕೆಂದು ಅನಿಸಿದ್ದಿಲ್ಲ. ಇಂದಿನ ಜಾಗ್ರತ ಮಹಿಳೆ ತನ್ನ ವರ್ತಮಾನ, ಭವಿಷ್ಯಗಳನ್ನು ತಿದ್ದಿ ರೂಪಿಸುವ ಸಾಮರ್ಥ್ಯವನ್ನು ಕ್ರಮೇಣ ಪಡೆಯುತ್ತಿದ್ದಾಳೆ. ಈ ಹಂತದಲ್ಲಿ ಗಂಭೀರವಾದ ಚಿಂತನೆ, ಚರ್ಚೆ, ಸಲಹೆ, ಸೂಚನೆಗಳನ್ನು ಕೊಡುತ್ತಾ ಅವಳ ಪ್ರಯತ್ನಕ್ಕೆ ನೆರವಾಗುವ ಪತ್ರಿಕೆಗಳ ಅಗತ್ಯವನ್ನು ಪೂರೈಸುವ ಪ್ರಯತ್ನವಾಗಿ ಈ ಮಹಿಳಾ ಅಧ್ಯಯನ ಪತ್ರಿಕೆ ಕೆಲಸ ಮಾಡುತ್ತಿದೆ. ಇಲ್ಲಿನ ಚಿಂತನೆ, ಚರ್ಚೆಗಳು ತಾತ್ತ್ವಿಕ ನೆಲೆಯ ಶೋಧಗಳಲ್ಲಿರುವ ವಿದ್ವಾಂಸರೂ ಕ್ರಿಯಾಕ್ಷೇತ್ರಗಳಲ್ಲಿರುವ ಕಾರ್ಯಕರ್ತರೂ ಪರಸ್ಪರ ಸಂವಾದ ನಡೆಸಲು ನೆರವಾಗುವಂತಿರಲಿ ಎಂಬ ಆಶಯದವಾಗಿವೆ.